# ಕಲ್ಯಾಣ ಚಾಲುಕ್ಯರ ದಾನ-ದತ್ತಿಗಳು: ಒಂದು ಅಧ್ಯಯನ

ಪಿ ಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ
ವಿಷಯದಲ್ಲಿ ಸಮಾಜ ವಿಜ್ಞಾನಗಳ ನಿಕಾಯಕ್ಕೆ ನ್ಯೂನ್ಯತೆಗಳನ್ನು ಸರಿಪಡಿಸಿ
ಪುನರ್ ಸಾದರಪಡಿಸಿದ ಸಂಶೋಧನ ಮಹಾಪ್ರಬಂಧ

ಸಂಶೋಧಕರು :
**ಶಿವಯ್ಯ ಮಡಿವಾಳಯ್ಯ ಮಠ**
ಉಪನ್ಯಾಸಕರು
ಶ್ರೀ ಹಾ.ಶಿ.ಸ.ಪ.ಪೂ. ಮಹಾವಿದ್ಯಾಲಯ, ಪೇಠಾ ಆಲೂರ.

ಮಾರ್ಗದರ್ಶಕರು :
**ಡಾ॥ ಕೃಷ್ಣ ಕೊಲ್ಹಾರಕುಲಕರ್ಣಿ**
ನಿವೃತ್ತ ಪ್ರಾಚಾರ್ಯರು ಮತ್ತು ಸಂಶೋಧಕರು ವಿಜಾಪುರ.

ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ - 583276
**ವಚನಪಿತಾಮಹ ಡಾ. ಫ.ಗು. ಹಳಕಟ್ಟಿ**
ಸಂಶೋಧನ ಕೇಂದ್ರ
ಬಿಜಾಪುರ - 586103

2012

497

497

# ಕಲ್ಯಾಣ ಚಾಲುಕ್ಯರ ದಾನ-ದತ್ತಿಗಳು: ಒಂದು ಅಧ್ಯಯನ

ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ
ವಿಷಯದಲ್ಲಿ ಸಮಾಜ ವಿಜ್ಞಾನಗಳ ನಿಕಾಯಕ್ಕೆ ನ್ಯೂನ್ಯತೆಗಳನ್ನು ಸರಿಪಡಿಸಿ
ಪುನರ್ ಸಾದರಪಡಿಸಿದ ಸಂಶೋಧನ ಮಹಾಪ್ರಬಂಧ


ಸಂಶೋಧಕರು

**ಶಿವಯ್ಯ ಮಡಿವಾಳಯ್ಯ ಮಠ**

ಉಪನ್ಯಾಸಕರು

ಶ್ರೀ ಹಾ.ಶಿ.ಸಂ.ಪ.ಪೂ. ಮಹಾವಿದ್ಯಾಲಯ, ಪೇಠಾ ಆಲೂರ.

ಮಾರ್ಗದರ್ಶಕರು

**ಡಾ. ಕೃಷ್ಣ ಕೊಲ್ಹಾರಕುಲಕರ್ಣಿ**

ನಿವೃತ್ತ ಪ್ರಾಚಾರ್ಯರು ಮತ್ತು ಸಂಶೋಧಕರು

ವಿಜಾಪುರ.



ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿದ್ಯಾರಣ್ಯ - ೫೮೩ ೨೭೬.

**ವಚನಪಿತಾಮಹ ಡಾ.ಫ.ಗು.ಹಳಕಟ್ಟಿ**

ಸಂಶೋಧನ ಕೇಂದ್ರ

ವಿಜಾಪುರ-೫೮೬ ೧೦೩.

೨೦೧೨

# ಘೋಷಣಾ ಪತ್ರ

**'ಕಲ್ಯಾಣ ಚಾಲುಕ್ಯರ ದಾನ-ದತ್ತಿಗಳು: ಒಂದು ಅಧ್ಯಯನ'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಡಾ.ಕೃಷ್ಣ ಕೊಲ್ಹಾರಕುಲಕರ್ಣಿ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಸಮಾಜ ವಿಜ್ಞಾನ ನಿಕಾಯಕ್ಕೆ ಸಲ್ಲಿಸಲಾಗಿತ್ತು. ಪರೀಕ್ಷೆ ಮಾಡಿದ ಸಂಶೋಧಕರೊಬ್ಬರು ಸೂಚಿಸಿದ ನ್ಯೂನ್ಯತೆಗಳನ್ನು (ಸಂದರ್ಭ: ನಿರ್ದೇಶಕರು ಅಧ್ಯಯನಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ಪತ್ರ ದಿನಾಂಕ: ೧೧-೦೯-೨೦೧೨) ಸರಿಪಡಿಸಿ, ಮತ್ತೊಮ್ಮೆ ಸಿದ್ಧಪಡಿಸಿ ಸಾದರಪಡಿಸುತ್ತಿದ್ದೇನೆ. ಪ್ರಸ್ತುತ ಶೀರ್ಷಿಕೆಯ ಮಹಾಪ್ರಬಂಧವು ಮೂಲ ಸಂಶೋಧನ ಕೃತಿಯಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಸ್ಥಳ : ವಿಜಾಪುರ**

**ದಿನಾಂಕ : ೦೭-೧೧-೨೦೧೨**

**ಸಂಶೋಧಕರು**

(ಶಿವಯ್ಯ ಮಡಿವಾಳಯ್ಯ ಮಠ)

# ದೃಢೀಕರಣ ಪತ್ರ

ಈ ಮೂಲಕ ದೃಢೀಕರಿಸುವುದೇನೆಂದರೆ **ಶ್ರೀ ಶಿವಯ್ಯ ಮಡಿವಾಳಯ್ಯ ಮಠ** ಅವರು ನನ್ನ ಮಾರ್ಗದರ್ಶನ ಮತ್ತು ಪರಿವೀಕ್ಷಣೆಯಲ್ಲಿ **"ಕಲ್ಯಾಣ ಚಾಲುಕ್ಯರ ದಾನ-ದತ್ತಿಗಳು: ಒಂದು ಅಧ್ಯಯನ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಸಿದ್ಧಪಡಿಸಿ ೦೮-೧೨-೨೦೧೧ರಂದು ಸಮಾಜ ವಿಜ್ಞಾನ ನಿಕಾಯ ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯಕ್ಕೆ ಸಲ್ಲಿಸಿದ್ದರು.

ಪರೀಕ್ಷೆ ಮಾಡಿದ ವಿದ್ವಾಂಸರೊಬ್ಬರು ಸೂಚಿಸಿದ ನ್ಯೂನ್ಯತೆಗಳನ್ನು (ಸಂದರ್ಭ: ನಿರ್ದೇಶಕರು ಅಧ್ಯಯನಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ಪತ್ರ ದಿನಾಂಕ: ೧೧-೦೯-೨೦೧೨) ಸರಿಪಡಿಸಿ ಮತ್ತೊಮ್ಮೆ ಸಿದ್ಧಪಡಿಸಿ ಸಾದರಪಡಿಸಲಾಗುತ್ತಿದೆ. ಪ್ರಸ್ತುತ ಮಹಾಪ್ರಬಂಧವು ಮೂಲ ಸಂಶೋಧನ ಕೃತಿಯಾಗಿದೆ. ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಸ್ಥಳ : ವಿಜಾಪುರ** **ಮಾರ್ಗದರ್ಶಕರು**

**ದಿನಾಂಕ: ೦೭-೧೧-೨೦೧೨**

**ಡಾ. ಕೃಷ್ಣ ಕೊಲ್ಹಾರಕುಲಕರ್ಣಿ**

# ಅರಿಕೆ

ಇತಿಹಾಸ ಎನ್ನುವುದು ಕೇವಲ ಒಂದು ವಿಷಯವಲ್ಲ. ಅದು ಒಂದು ಜೀವನ ಮೌಲ್ಯ ಹಾಗೂ ಬದುಕಿನ ಪ್ರತಿಬಿಂಬವಾಗಿದೆ. ಕಾಲದಿಂದ ಕಾಲಕ್ಕೆ ಮನುಷ್ಯನ ಸ್ಥಿತಿಗತಿಗಳನ್ನು ದಾಖಲಿಸುವುದರ ಜೊತೆ ಜೊತೆಗೆ ಆಯಾ ಕಾಲದ ಸಾಂಸ್ಕೃತಿಕ ರೂವಾರಿಯಾಗಿ, ಸಮಾಜದ ಕನ್ನಡಿಯಾಗಿ ತನ್ನ ಇರುವಿಕೆಯನ್ನು ಇತಿಹಾಸ ಸಾಬೀತುಪಡಿಸುತ್ತದೆ. ಸ್ನಾತಕೋತ್ತರ ಪದವಿಯಲ್ಲಿ ಇತಿಹಾಸವನ್ನು ಓದಿ ಮುಗಿಸಿದ ನಂತರ ನಾನು ಪಿಎಚ್.ಡಿ. ಪದವಿಗಾಗಿ ಸಂಶೋಧನ ಪ್ರಬಂಧವನ್ನು ರಚಿಸಬೇಕೆಂಬ ಹಿರಿದಾಸೆ ಹೊಂದಿದ್ದೆ. ಅದರಂತೆಯೇ ಸಂಶೋಧನ ಕ್ಷೇತ್ರಕ್ಕೆ ಪಾದಾರ್ಪಣೆ ಮಾಡಲು ಅತ್ಯುತ್ಸಾಹದಿಂದ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಜಿ ಹಾಕಿದೆ. ಅದೃಷ್ಟವಶಾತ್ 'ಪ್ರಾಚೀನ ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗ'ದಲ್ಲಿ ಅವಕಾಶವೂ ಸಿಕ್ಕಿತು. ಆದರೆ, ಪೂರ್ವ ತಯಾರಿಯ ಕೊರತೆಯ ಕಾರಣ ಸಿಕ್ಕ ಅವಕಾಶವನ್ನು ಕಳೆದುಕೊಳ್ಳಬೇಕಾಯಿತು. ಯೋಗಾಯೋಗವೆಂಬಂತೆ ಮುಂದೆ ಕೆಲವೇ ದಿನಗಳಲ್ಲಿ ವಿಜಾಪುರದ ವಚನ ಪಿತಾಮಹ ಡಾ. ಫ.ಗು. ಹಳಕಟ್ಟಿ ಸಂಶೋಧನ ಕೇಂದ್ರದಲ್ಲಿ ನನಗೆ ಅವಕಾಶ ದೊರೆಯಿತು. ಅಷ್ಟೇ ಅಲ್ಲದೆ ಪೂರ್ವದ ಪುಣ್ಯವೋ ಎಂಬಂತೆ ನಾಡಿನ ಹಿರಿಯ ಸಂಶೋಧಕರಾದ ಡಾ. ಕೃಷ್ಣ ಕೋಲ್ಹಾರಕುಲಕರ್ಣಿ ಗುರುಗಳು ನನಗೆ ಮಾರ್ಗದರ್ಶಕರಾಗಿ ದೊರೆತರು.

ಗದುಗಿನ ಪರಿಸರದಲ್ಲಿ ಕಲ್ಯಾಣ ಚಾಲುಕ್ಯರ ಪ್ರಭಾವ ದಟ್ಟವಾಗಿದೆ. ಈ ಕಾರಣದಿಂದ ನನಗೂ ಕಲ್ಯಾಣ ಚಾಲುಕ್ಯರ ಬಗೆಗೆ ಕುತೂಹಲ ಹೆಚ್ಚಾಗಿತ್ತು. ಇದೇ ಸಂದರ್ಭದಲ್ಲಿ ಡಾ. ಕೃಷ್ಣ ಕೊಲ್ಹಾರಕುಲಕರ್ಣಿ ಗುರುಗಳು "ಕಲ್ಯಾಣ ಚಾಲುಕ್ಯರ ದಾನ-ದತ್ತಿಗಳ" ಬಗೆಗೆ ಅಧ್ಯಯನ ಮಾಡಲು ಸೂಚಿಸಿದಾಗ ತಕ್ಷಣ ಒಪ್ಪಿಕೊಂಡೆ. ಕಲ್ಯಾಣ ಚಾಲುಕ್ಯರ ಕುರಿತಾಗಿ ಹಲವು ಅಧ್ಯಯನಗಳಾಗಿವೆ. ಆದರೆ, ಅತೀ ಹೆಚ್ಚಿನ ಸಂಖ್ಯೆಯಲ್ಲಿರುವ ದಾನಶಾಸನಗಳು ಮತ್ತು ದಾನಗಳ ಬಗ್ಗೆ ಸಂಶೋಧನೆ ಆಗದೇ ಇದ್ದುದರಿಂದ ಆ ಅವಶ್ಯಕತೆಯೂ ಇತ್ತು. ಇದನ್ನು ಮನಗಂಡು ಅಧ್ಯಯನ ನಿರತವಾದೆ.

ಮೊದ ಮೊದಲು ಹೇಗಾದರೂ ಮಾಡಿ ಶೀಘ್ರದಲ್ಲಿ ಸಂಶೋಧನ ಪ್ರಬಂಧ ಬರೆದು ಮುಗಿಸಿದರಾಯಿತು ಎಂದುಕೊಂಡಿದ್ದೆ. ವಿಷಯದ ಒಳಹೊಕ್ಕಾಗ ನನಗೆ ದಿಗ್ಭ್ರಾಂತಿಯಾಯಿತು. ಕರ್ನಾಟಕದ ಚರಿತ್ರೆಯಲ್ಲಿ ಅತೀ ಹೆಚ್ಚು ದಾನಶಾಸನಗಳಿರುವುದು ಕಲ್ಯಾಣ ಚಾಲುಕ್ಯರ ಕಾಲದಲ್ಲಿಯೇ. ಅಲ್ಲಿಂದ ಪ್ರಾರಂಭವಾಯಿತು ಶಾಸನಗಳ ಹುಡುಕಾಟವೆಂಬ ಎಂದೂ ಮುಗಿಯದ ನನ್ನ ಪಯಣ. ಮೊಗೆದಷ್ಟು ಉಕ್ಕಿಬರುವ ಕಲ್ಯಾಣ ಚಾಲುಕ್ಯರ ಶಾಸನಗಳಿಂದ ೧೫೦೦ ಶಾಸನಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳುವುದು ಒಂದು ಸಾಹಸವೇ ಆಯಿತು. ಮೊದಲ ಎರಡು ವರ್ಷಗಳು ಶಾಸನಗಳ ಸಂಗ್ರಹ, ಕಾಲಾನುಕ್ರಮದಲ್ಲಿ ಹೊಂದಾಣಿಕೆ ಮಾಡಿಕೊಳ್ಳುವುದು, ಪಟ್ಟಿಕೆ ತಯಾರಿಕೆಯಲ್ಲಿಯೇ ಕಳೆದವು. ನಂತರ ಬರವಣಿಗೆ ಪ್ರಾರಂಭಿಸಿದಾಗ ನೂರೆಂಟು ತೊಡಕುಗಳು ಎದುರಾದವು. ಕೆಲವೊಂದು ಸಲ ವಿಶಾಲವಾದ ವಿಷಯವಸ್ತುವಿನಿಂದ ಕಂಗೆಟ್ಟು ಕೈಚೆಲ್ಲಿ ಕುಳಿತದ್ದೂ ಆಯಿತು. ಅಂಥ ಸಂದರ್ಭದಲ್ಲೆಲ್ಲ ಸಂಶೋಧನ ಕೇಂದ್ರದ ಕಾರ್ಯದರ್ಶಿಕಳಾಗಿರುವ ಡಾ. ಎಂ. ಎಸ್. ಮದಭಾವಿ ಗುರುಗಳು ಹಾಗೂ ನನ್ನ ಹಿರಿಯ

ಸಂಶೋಧಕ ಮಿತ್ರರಾಗಿರುವ ಡಾ. ಪಿ.ಕೆ. ರಾಠೋಡ ಅವರು ಬೆಂಬಿಡದೇ ಬರೆಯಲು ತೊಡಗಿಸಿದರು.

ಕೊನೆಗೂ ಐದು ವರ್ಷಗಳ ನಿರಂತರ ಪ್ರಯತ್ನದಿಂದಾಗಿ ನನ್ನ ಸಂಶೋಧನ ಪ್ರಬಂಧ ಪೂರ್ಣಗೊಂಡಿದೆ. ಇಂತಹದ್ದೊಂದು ಮಹತ್ವದ ವಿಷಯವನ್ನು ಕುರಿತು ನನ್ನನ್ನು ಸಂಶೋಧನೆಗೆ ತೊಡಗಿಸಿ, ನನ್ನ ಸೋಮಾರಿತನ, ವಿಳಂಬಕಾರ್ಯ ವೈಖರಿಯನ್ನು ಸಹಿಸಿಕೊಂಡು ಪ್ರತಿಯೊಂದು ಹಂತದಲ್ಲೂ ಧೈರ್ಯ, ಉತ್ಸಾಹ ತುಂಬಿದ ಶಾಂತಸ್ವಭಾವದ ಮಾರ್ಗದರ್ಶಕರೂ ಪಿತೃಸಮಾನರೂ ಆದ ಡಾ. ಕೃಷ್ಣ ಕೊಲ್ಹಾರಕುಲಕರ್ಣಿ ಗುರುಗಳಿಗೆ ನನ್ನ ಅನಾಂತನಂತ ಪ್ರಣಾಮಗಳು ಸಲ್ಲುತ್ತವೆ.

ನನ್ನ ಸಂಶೋಧನೆಗೆ ಸಾಕಷ್ಟು ಶಾಸನಗಳನ್ನು ಒದಗಿಸಿಕೊಟ್ಟು, ಸಮಯೋಚಿತವಾಗಿ ಸಲಹೆಗಳನ್ನಿತ್ತ ನಾಡಿನ ಹಿರಿಯ ಸಂಶೋಧಕರಾದ ಡಾ. ಜೆ. ಎಂ. ನಾಗಯ್ಯ ಮತ್ತು ಶ್ರೀಮತಿ ಹನುಮಾಕ್ಷಿ ಗೋಗಿಯವರನ್ನು ಕೃತಜ್ಞತೆಯಿಂದ ನೆನೆಯುತ್ತೇನೆ. ಅದೇ ರೀತಿ ಪ್ರೀತಿಪೂರ್ವಕ ಒತ್ತಾಸೆಯಿಂದ ನನ್ನ ಸಂಶಧೋನೆಗೆ ನೆರವಾದ ಡಾ. ಬಿ. ಎಸ್. ಗೊರವರ ಗುರುಗಳು ಹಾಗೂ ಡಾ. ಪಿ. ಕೆ. ರಾಠೋಡ ಅವರಿಗೆ ನನ್ನ ಧನ್ಯವಾದಗಳು. ನನ್ನ ಅಧ್ಯಯನವನ್ನು ಅಕ್ಕರೆಯಿಂದ ಹಾರೈಸಿದ ಕನ್ನಡ ವಿಶ್ವವಿದ್ಯಾಲಯದ ಪ್ರವಾಚಕರಾಗಿರುವ ಡಾ. ಎಫ್. ಟಿ. ಹಳ್ಳಿಕೇರಿ ಮತ್ತು ಡಾ. ಕೆ. ರವೀಂದ್ರನಾಥರನ್ನು ಧನ್ಯತೆಯಿಂದ ಸ್ಮರಿಸುತ್ತೇನೆ.

ನನ್ನ ಸಂಶೋಧನ ಕಾರ್ಯಕ್ಕೆ ತುಂಬುಹೃದಯದಿಂದ ಆಶೀರ್ವದಿಸಿದ ಶ್ರೀ ಹಾಲೇಶ್ವರ ವಿದ್ಯಾಪೀಠದ ಅಧ್ಯಕ್ಷರು, ಪೂಜ್ಯರೂ ಆದ ಶ್ರೀ ಹಾಲೇಶ್ವರ ಶರಣರು ಪೇಠಾ ಆಲೂರ ಅವರಿಗೆ, ನನ್ನ ಮಹಾವಿದ್ಯಾಲಯದ ಪ್ರಾಚಾರ್ಯರಾಗಿರುವ ಶ್ರೀ ಕೆ. ಎಸ್. ಚೋರಗಸ್ತಿಯವರಿಗೆ ಧನ್ಯವಾದಗಳು. ನಾನು ರಜೆಯಲ್ಲಿದ್ದಾಗಲೆಲ್ಲ ಸಾವರಿಸಿಕೊಂಡ ನನ್ನ ಸಹೋದ್ಯೋಗಿಗಳಾದ ಶ್ರೀ ಎಸ್. ವಾಯ್. ಬೀಳಗಿ, ಶ್ರೀ ಎಫ್. ಎಸ್. ಬೆಳವಗಿ, ಶ್ರೀ ಪಿ. ಪಿ. ಹಿರೇಮಠ, ಶ್ರೀಮತಿ ಎಸ್. ಆರ್. ಚಿಲ್ಕಾಂತಮಠ, ಶ್ರೀಮತಿ ಎಸ್. ಎಂ. ಬೆಂತೂರ, ಶ್ರೀಮತಿ ಎಸ್. ಆರ್. ಚಲವಾದಿ, ಶ್ರೀ ಪ್ರವೀಣ ಅಪರಂಜಿ ಮತ್ತು ಶ್ರೀ ಮಹೇಶ ಕೆರಿ ಇವರನ್ನೆಲ್ಲ ಇಲ್ಲಿ ಸ್ಮರಿಸುತ್ತೇನೆ.

ನನ್ನನ್ನು ಪೋಷಿಸಿದ ನನ್ನ ತಾಯಿ ಶ್ರೀಮತಿ ಉಮಾಕ್ಷಿ ಮ. ಮಠ, ಅಣ್ಣ ಬಸಯ್ಯ ಹಿರೇಮಠರಿಗೆ, ಪ್ರತಿ ಹಂತದಲ್ಲೂ ಸಲಹೆ–ಸೂಚನೆ ನೀಡಿ, ಬೆರಳಚ್ಚನ್ನು ತಿದ್ದಿದ ಅತ್ತೆ–ಮಾವಂದಿರಾದ ಶ್ರೀ ಚಂದ್ರಶೇಖರ ವಸ್ತ್ರದ ಹಾಗೂ ಶ್ರೀಮತಿ ಚೆನ್ನವ್ವ ವಸ್ತ್ರದವರಿಗೂ ನನ್ನ ಅನಂತ ಪ್ರಣಾಮಗಳು.

ನನ್ನ ಬರವಣಿಗೆ ಹಾಗೂ ಬದುಕಿಗೆ ಸ್ಫೂರ್ತಿಯ ಸೆಲೆಯಾಗಿ ಪ್ರತಿ ದಿನವೂ ಸಂಶೋಧನಾ ಕಾರ್ಯವನ್ನು ನೆನಪಿಸುತ್ತಿದ್ದ ಪತ್ನಿ ಕ್ಷಮಾಳನ್ನು ಮತ್ತು ಮುದ್ದುಮಗ ತನ್ಮಯವನ್ನು ಪ್ರೀತಿಯಿಂದ ಸ್ಮರಿಸುತ್ತೇನೆ. ಈ ಪ್ರಬಂಧವನ್ನು ಅಂದವಾಗಿ ವಿನ್ಯಾಸಗೊಳಿಸಿ ಬೆರಳಚ್ಚು ಮಾಡಿಕೊಟ್ಟ ಶ್ರೀ ನಾರಾಯಣ ಬಾಕಳೆಯವರಿಗೆ ನನ್ನ ನೆನಕೆಗಳು.

ಎಲ್ಲಕ್ಕೂ ಹೆಚ್ಚಾಗಿ ಕಲ್ಯಾಣ ಚಾಲುಕ್ಯರ ಸಾವಿರಾರು ಸಂಖ್ಯೆಯ ಶಾಸನಗಳನ್ನು ಸಂಶೋಧಿಸಿದ ವಿದ್ವಾಂಸರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

• • •

# ಪರಿವಿಡಿ

• • •

# ಸಂಕ್ಷೇಪಗಳು

| | |
|---|---|
| A.P.G.A.S. | Andhra Pradesh Government Archaological Series |
| A.R.I.E. | Annual Report on Indian Epigraphy |
| B.K.I | Bombay Karnataka Inscriptions |
| E.C. | Epigraphia Carnatika (ಶಾಸನ ಸಂಪುಟಗಳಲ್ಲಿ ಹಳೆಯ ಸಂಪುಟಗಳ ಸಂಖ್ಯೆಗಳನ್ನು ರೋಮನ್ ಅಂಕೆಗಳಲ್ಲೂ ಪರಿಷ್ಕೃತ ಸಂಪುಟಗಳ ಸಂಖ್ಯೆಯನ್ನು ಇಂಗ್ಲಿಷ ಅಂಕೆಗಳಲ್ಲೂ ಸೂಚಿಸಲಾಗಿದೆ.) |
| E.I. | Epigraphia Indica |
| H.A.R. | Hydrabad Archaological Report |
| I.A. | Indian Antiquary |
| I.F.N.D. | Inscriptions From Nanded District |
| I.F.S.D. | Inscription From Solapur District |
| K.I. | Karnataka Inscriptions |
| S.I.I. | South Indian Inscriptions |
| ಕ.ವಿ.ವಿ.ಶಾ.ಸಂ. | ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟಗಳು |

* * *

## ಅಧ್ಯಾಯ – ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

೧.೧ ಅಧ್ಯಯನ ಕುರಿತು

೧.೨ ಅಧ್ಯಯನದ ಉದ್ದೇಶ ಮತ್ತು ಮಹತ್ವ

೧.೩ ಅಧ್ಯಯನದ ವ್ಯಾಪ್ತಿ

೧.೪ ಆಕರ ಸಾಮಗ್ರಿಗಳು

೧.೫ ಅಧ್ಯಯನದ ವಿನ್ಯಾಸ ಮತ್ತು ವಿಧಾನ

# ಅಧ್ಯಾಯ – ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

## ೧.೧ ಅಧ್ಯಯನ ಕುರಿತು :

ಪ್ರಾಚೀನ ಭಾರತದ ಇತಿಹಾಸದಲ್ಲಿ ಕಲ್ಯಾಣ ಚಾಲುಕ್ಯರಿಗೆ ವಿಶಿಷ್ಟ ಸ್ಥಾನವಿದೆ. ಹನ್ನೆರಡನೆಯ ಶತಮಾನದ ಮಧ್ಯಭಾಗದಲ್ಲಿ ಶಿವಶರಣರಿಂದ ಪ್ರಜಾಸತ್ತೆಯ ಕ್ರಾಂತಿಯೊಂದು ಸ್ಫೋಟಗೊಂಡಿತು. ಈ ಪ್ರಜಾಸತ್ತೆಯ ಕ್ರಾಂತಿ ಕಣ್ಣು ತೆರೆಯಲು ಈ ಕಲ್ಯಾಣ ಚಾಲುಕ್ಯರ ರಾಜಸತ್ತೆ, ವರ್ಣಸತ್ತೆ, ಧರ್ಮಸತ್ತೆಗಳ ಪರಿಣಾಮ ಕಾರಣವಾಗಿದ್ದಿತು. ಈ ಅವಧಿಯಲ್ಲಿ ರಾಜಕೀಯ ಸ್ಥಿರತೆ, ಧಾರ್ಮಿಕ, ಸಾಮಾಜಿಕ ಸ್ಥಿತ್ಯಂತರಗಳು, ಕಲೆ, ವಾಸ್ತುಶಿಲ್ಪ, ಸಂಗೀತ, ಸಾಹಿತ್ಯಗಳ ಅಭಿವೃದ್ಧಿ ಉಂಟಾಯಿತು. ವಿಜ್ಞಾನೇಶ್ವರನು 'ಮಿತಾಕ್ಷರ' ಎಂಬ ಧರ್ಮಶಾಸ್ತ್ರ ಗ್ರಂಥದಲ್ಲಿ "ಭೂಮಿಯ ಮೇಲೆ ಕಲ್ಯಾಣದಂಥ ಮತ್ತೊಂದು ನಗರ ಈ ಹಿಂದೆ ಇರಲಿಲ್ಲ. ಇಂದೂ ಇಲ್ಲ. ಮುಂದೆಯೂ ಹುಟ್ಟುವುದಿಲ್ಲೆಂದು' ಹೇಳಿದ್ದಾನೆ.[1] ಬಹುಶಃ ಇದೊಂದೇ ಮಾತು ಸಾಕೆನಿಸುತ್ತದೆ; ಕಲ್ಯಾಣ ಚಾಲುಕ್ಯರ ಘನತೆಯನ್ನು ಸಾರಲು.

ದಕ್ಷಿಣ ಭಾರತದಲ್ಲಿ ಮಹಾಸಾಮ್ರಾಜ್ಯವನ್ನು ಸ್ಥಾಪಿಸಿ ದಕ್ಷತೆಯಿಂದ ರಾಜ್ಯಭಾರ ಮಾಡಿದ ಬದಾಮಿ ಚಾಲುಕ್ಯರ ವಂಶಸ್ಥರಾಗಿ ರಾಷ್ಟ್ರಕೂಟರನ್ನು ಮೂಲೆಗೊತ್ತಿ, ಪುನಃ ಗತಕಾಲದ ಚಾಲುಕ್ಯರ ವೈಭವವನ್ನು ಕಲ್ಯಾಣ ಚಾಲುಕ್ಯರು ಮುಂದುವರಿಸಿದರು. ರಾಜಕೀಯ, ಕಲೆ, ವಾಸ್ತುಶಿಲ್ಪ, ಸಾಹಿತ್ಯ, ಧಾರ್ಮಿಕತೆ ಹೀಗೆ ಹತ್ತು ಹಲವಾರು ಕ್ಷೇತ್ರಗಳ ಮೂಲಕ ತಮ್ಮತನವನ್ನು ಸಾಧಿಸಿದರು. ಇವರು ಕರ್ನಾಟಕದ ಚರಿತ್ರೆಯಲ್ಲಿ ಅಪಾರ ಶಾಸನಗಳನ್ನು ಬರೆಸುವುದರ ಮೂಲಕ ಭಾರತೀಯ ಅರಸರುಗಳಲ್ಲೇ ಪ್ರಥಮ ಪಂಕ್ತಿಯಲ್ಲಿ ನಿಲ್ಲುತ್ತಾರೆ. ಇದುವರೆಗೂ ವಿವಿಧ ಶಾಸನ ಸಂಪುಟಗಳಲ್ಲಿ ಪ್ರಕಟಗೊಂಡ ಇವರ ಶಾಸನಗಳ ಸಂಖ್ಯೆಯೇ ಎರಡು ಸಾವಿರಕ್ಕೂ ಹೆಚ್ಚು ಇನ್ನೂ ಸಂಶೋಧನೆ ಮಾಡಿದಂತೆಲ್ಲ ಸಿಗುತ್ತಲೇ ಇವೆ. ಅಪಾರ ಪ್ರಮಾಣದಲ್ಲಿ ಬರೆಯಿಸಲಾದ ಕಲ್ಯಾಣ ಚಾಲುಕ್ಯರ ಶಾಸನಗಳನ್ನು ಅವಲೋಕಿಸಿದಾಗ ನೂರಕ್ಕೆ ತೊಂಭತ್ತರಷ್ಟು ಶಾಸನಗಳು ದಾನಕ್ಕೆ ಸಂಬಂಧಿಸಿದವುಗಳಾಗಿವೆ.

ಕಲ್ಯಾಣ ಚಾಲುಕ್ಯರ ಕುರಿತು ಸಾಕಷ್ಟು ಅಧ್ಯಯನಗಳು ನಡೆದಿದ್ದರೂ ಬಹುಸಂಖ್ಯೆಯಲ್ಲಿರುವ ದಾನ-ದತ್ತಿಗಳ ಕುರಿತಾದ ವಿಷಯದ ಮೇಲೆ ಅಧ್ಯಯನ ನಡೆಯದೇ

ಇರುವುದು ಸೋಜಿಗದ ವಿಷಯವೇ ಸರಿ. ಭಾರತೀಯ ಸನಾತನ ಪರಂಪರೆಯಲ್ಲಿ ಜನರು ತಮ್ಮ ಜೀವನದುದ್ದಕ್ಕೂ ಸಾರ್ವಕಾಲಿಕ ಮೌಲ್ಯಗಳ ಸಾಧನೆಗಾಗಿ ಹಲವು ಮಾರ್ಗಗಳನ್ನು ಅನುಸರಿಸಿದ್ದಾರೆ. ಇಂಥ ಮಾರ್ಗಗಳಲ್ಲಿ ವಿಭಿನ್ನವಾಗಿ ಮತ್ತು ಸಾರ್ವತ್ರಿಕ ಅನುಸರಿಸಿದ ಶ್ರೇಷ್ಠವಾದ ಮಾರ್ಗ ಎಂದರೆ 'ದಾನ'. ಅಂತರಂಗ – ಬಹಿರಂಗಗಳೆರಡನ್ನು ಉನ್ನತಗೊಳಿಸಲು ದಾನವು ಅಧ್ಯಾತ್ಮಿಕ ಮತ್ತು ಸಾಮಾಜಿಕ ಚಹರೆಗಳನ್ನು ಹೊಂದಿ ಪ್ರಸ್ತುತದಲ್ಲೂ ತನ್ನ ಪ್ರಾಮುಖ್ಯತೆಯನ್ನು ಕಾಯ್ದುಕೊಂಡಿದೆ. ಪ್ರತಿಫಲಾಪೇಕ್ಷೆ ಇಲ್ಲದೇ ಯಾರಿಗಾದರೂ ವಸ್ತುವೊಂದನ್ನು ಉದಾರವಾಗಿ ದಾನ ನೀಡುವ ಪ್ರಕ್ರಿಯೆ ಹಲವು ವರ್ಷಗಳಿಂದ ಕುತೂಹಲದ ವಿಷಯವಾಗಿತ್ತು ಅದೇ ವಿಷಯದ ಕುರಿತಾಗಿ ನನ್ನ ಮಾರ್ಗದರ್ಶಕರಾದ ಡಾ. ಕೃಷ್ಣಕೊಲ್ಹಾರ ಕುಲಕರ್ಣಿ ಗುರುಗಳು ಸೂಚಿಸಿದಾಗ ಅದರಲ್ಲಿ ಆಸಕ್ತಿಯು ಹುಟ್ಟಿತು. ಅದರ ಪ್ರತಿಫಲವೇ ಈ ಅಧ್ಯಯನಕ್ಕೆ ಪ್ರೇರಣೆಯಾಯಿತು.

ಡಾ. ಕೆ. ಎಸ್. ಶಿವಣ್ಣ ಅವರು ಕೃತಿಯೊಂದಕ್ಕೆ ಮುನ್ನುಡಿ ಬರೆಯುತ್ತಾ "ಯಾವುದೇ ರಾಜ್ಯಾಡಳಿತ ವ್ಯವಸ್ಥೆಯಲ್ಲಿ ಆಡಳಿತಗಾರರು ಪಡೆದುಕೊಂಡ ಅಧಿಕಾರವನ್ನು ಉಳಿಸಿಕೊಳ್ಳುವುದು ಎರಡು ನಿರ್ದಿಷ್ಟ ಕ್ರಿಯೆಗಳನ್ನು ಒಳಗೊಂಡಿದೆ. ಆಡಳಿತಗಾರರು ಪ್ರಜೆಗಳನ್ನು ನಿಯಂತ್ರಿಸವುದಕ್ಕೂ ಸಮಾಜಘಾತುಕ ಶಕ್ತಿಗಳನ್ನು ಅಡಗಿಸುವುದಕ್ಕೂ ದಂಡ ಅಥವಾ ಬಲಪ್ರಯೋಗವನ್ನು ಬಳಸಬಹುದು. ಇದಲ್ಲದೆ ಬಲಪ್ರಯೋಗ ರಹಿತ ತಂತ್ರಗಳನ್ನು ಕೂಡ ಅದೇ ಉದ್ದೇಶಕ್ಕೆ ಆಡಳಿತಗಾರ ಬಳಸಬಹುದು. ಇತಿಹಾಸದ ಯಾವುದೇ ದೇಶ–ಕಾಲಗಳಲ್ಲಿ ಅಧಿಕಾರದ ಈ ಎರಡು ಕೇಂದ್ರಗಳು ಸ್ಥಿರತೆ ಮತ್ತು ವ್ಯವಸ್ಥೆಯನ್ನು ಸ್ಥಾಪಿಸಲು ಒಂದಕ್ಕೊಂದು ಪೂರಕವಾಗಿ ಕೆಲಸ ಮಾಡುವುದನ್ನು ನಾವು ಗಮನಿಸುತ್ತೇವೆ. ಅದನ್ನು 'ದಂಡ' ಮತ್ತು 'ಧರ್ಮ' ಎಂದು ಗುರುತಿಸಬಹುದು. ದಾನವು ವಿಶಾಲ ಅರ್ಥದಲ್ಲಿ ಧರ್ಮದ ವರ್ಗೀಕರಣದಲ್ಲಿ ಬರುತ್ತದೆ" ಎಂದು ಅಭಿಪ್ರಾಯ ಪಟ್ಟಿದ್ದಾರೆ.[2] ಈ ಅಭಿಪ್ರಾಯದಂತೆ 'ದಾನ' ರಾಜ್ಯಾಡಳಿತದ ಒಂದು ಪ್ರಕ್ರಿಯೆಯಾಗಿದೆ. ಇದನ್ನು ಪುರಾತನ ಕಾಲದಿಂದಲೂ ಎಲ್ಲ ದೇಶ, ಎಲ್ಲ ಕಾಲಗಳಲ್ಲಿನ ಧರ್ಮಶಾಸ್ತ್ರಗಳೂ ಪುರಸ್ಕರಿಸುತ್ತ ಬಂದಿವೆ. ನಮ್ಮ ಜನಪದರು ಬಳಸುವ ಎಂಬ ಗಾದೆ ಮಾತು ಇದಕ್ಕೆ ಉತ್ತಮ ನಿದರ್ಶನವಾಗುತ್ತದೆ. 'ಉಗುರಿನಿಂದ ಚಿವುಟುವ ಚಿಗುರನ್ನು ಕಡಿಯಲು ಕೊಡಲಿಯನ್ನು ಬಳಸಬಾರದು' ಈ ಗಾದೆ ಮಾತು ಕಡಿಮೆ ಶ್ರಮದಲ್ಲಿ ಮಾಡಿ ಮುಗಿಸಬಹುದಾದ ಕಾರ್ಯಕ್ಕೆ ಹೆಚ್ಚಿನ ಶಕ್ತಿಯನ್ನು ಬಳಸಬಾರದು. ಎಂಬುದನ್ನು ಸೂಚಿಸುತ್ತದೆ. ಈ ತಂತ್ರವನ್ನು ರಾಜ್ಯಾಡಳಿತದ ನಿಯಂತ್ರಣದಲ್ಲಿ ಕಲ್ಯಾಣ ಚಾಲುಕ್ಯರು ಬಳಸಿದ್ದಾರೆಯೇ ಎಂಬುದನ್ನು ಪರಾಮರ್ಶಿಸಿ; ವಿಶ್ಲೇಷಿಸುವುದು ಪ್ರಸ್ತುತ ಅಧ್ಯಯನದ ಉದ್ದೇಶವೂ ಆಗಿದೆ.

ಕಲ್ಯಾಣ ಚಾಲುಕ್ಯರು ಅನೇಕ ಕ್ಷೇತ್ರಗಳಲ್ಲಿ ಶ್ರೇಷ್ಠವಾದುದನ್ನು ನೀಡುವುದರ ಮೂಲಕ ಅನೇಕ ಸಂಶೋಧಕರ ಗಮನ ಸೆಳೆದಿದ್ದಾರೆ. ಈ ವಂಶದಲ್ಲಿ ಬರುವ ಪ್ರತಿಯೊಬ್ಬ ಅರಸನ ಕುರಿತು ಒಂದೊಂದು ಮಹಾಪ್ರಬಂಧ ರಚಿಸುವಷ್ಟು ಆಕರ ಸಾಮಗ್ರಿಗಳಿವೆ.

ಡಾ. ಜೆ. ಎಂ. ನಾಗಯ್ಯ ಅವರು 'ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ' ಎಂಬ ಮಹಾಪ್ರಬಂಧವನ್ನು ರಚಿಸಿದ್ದಾರೆ. ಅರನೆಯ ವಿಕ್ರಮಾದಿತ್ಯನ ಕುರಿತು ಇರುವ ಅಪಾರ ಪ್ರಮಾಣದ ಶಾಸನಗಳನ್ನು ಒಂದೇ ಮಹಾಪ್ರಬಂಧದಲ್ಲಿ ಹಿಡಿದಿಡುವುದು ಅಸಾಧ್ಯ ಎಂಬುದನ್ನು ಮನಗಂಡು ಕೇವಲ ಆಡಳಿತಾತ್ಮಕ ವಿಷಯಕ್ಕೆ ಸೀಮಿತಗೊಳಿಸಿರುವದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಇದನ್ನು ಇಲ್ಲಿ ಪ್ರಸ್ತಾಪಿಸುವ ಉದ್ದೇಶವೆಂದರೆ, ಕಲ್ಯಾಣ ಚಾಲುಕ್ಯರ ಆಕರ ಸಾಮಗ್ರಿಯ ವಿಷಯ ವಸ್ತುವಿನ ಹರವು ಎಷ್ಟು ವ್ಯಾಪಕವಾಗಿದೆ ಎಂಬುದನ್ನು ತಿಳಿಸುವುದಾಗಿದೆ. "ಒಂದನೆಯ ಸೋಮೇಶ್ವರನ ಜೀವನ ಮತ್ತು ಸಾಧನೆಗಳು" ಎಂಬ ವಿಷಯ ಕುರಿತು ಡಾ. ಗುರುಬಸಪ್ಪ ಭೋಗಪ್ಪನವರ ಅವರು ಮಹಾಪ್ರಬಂಧ ರಚಿಸಿದ್ದಾರೆ. ಇದಲ್ಲದೆ, ಕಲ್ಯಾಣ ಚಾಲುಕ್ಯರ ಕಲೆ, ವಾಸ್ತುಶಿಲ್ಪಗಳ ಕುರಿತೂ ಅಧ್ಯಯನಗಳು ನಡೆದಿವೆ. ಸುಭಾಸ ಚಿಂಚೋಳಿ ಅವರು 'ಕಲ್ಯಾಣ ಚಾಲುಕ್ಯರ ವಾಸ್ತು ಮತ್ತು ಶಿಲ್ಪಕಲೆಯ ಅಧ್ಯಯನ' ಮಾಡಿದ್ದರೆ; ಡಾ. ಎಚ್.ಎಸ್. ಗೋಪಾಲರಾವ್ ಅವರು 'ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣ ಚಾಲುಕ್ಯರ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ' ಎಂಬ ಮಹಾಪ್ರಬಂಧ ರಚಿಸಿದ್ದಾರೆ.

ಕಲ್ಯಾಣ ಚಾಲುಕ್ಯರ ಇತಿಹಾಸ ತಿಳಿಸುವ ಡಾ.ಬಿ.ಅರ್.ಗೋಪಾಲ ಅವರ "The Chalukyas of Kalyana and the Kalachuris", ಡಾ. ಕೃಷ್ಣಮುರಾರಿ ಅವರ "The Chalukyas of Kalyani" ಗಳಂಥ ಸಂಶೋಧನ ಕೃತಿಗಳು ರಚನೆಯಾಗಿವೆ. ಡಾ.ಬಸವರಾಜ ಅವರು "Administration system under the Chalukyas of Kalyana" ಎಂಬ ಸಂಶೋಧನಾ ಕೃತಿಯನ್ನು ಕಲ್ಯಾಣ ಚಾಲುಕ್ಯರ ಆಡಳಿತ ಅಧ್ಯಯನಕ್ಕೆ ಸೀಮಿತಗೊಳಿಸಿದ್ದಾರೆ. ಡಾ. ಎಚ್. ಆರ್.ದೇಸಾಯಿಯವರು 'ಕಲ್ಯಾಣ ಚಾಲುಕ್ಯರ ಕಾಲದ ಶಿಕ್ಷಣ ವ್ಯವಸ್ಥೆ'ಯ ಕುರಿತು ಅಧ್ಯಯನ ಕೈಕೊಂಡಿದ್ದಾರೆ. ಈ ಎಲ್ಲ ಅಧ್ಯಯನಗಳು ಕಲ್ಯಾಣ ಚಾಲುಕ್ಯ ಅರಸರ ಆಡಳಿತ, ಆ ಕಾಲದ ಶಿಕ್ಷಣ, ಸಾಮಾಜಿಕ, ಧಾರ್ಮಿಕ, ಕಲೆ ಮತ್ತು ವಾಸ್ತುಶಿಲ್ಪಗಳ ಬಗ್ಗೆ ಮೌಲಿಕವಾದ ಮಾಹಿತಿಗಳನ್ನು ಒದಗಿಸುತ್ತವೆ.

ಇದೇ ಅರಸುಮನೆತನದ ಆಳ್ವಿಕೆಗೊಳಪಟ್ಟ ಆಡಳಿತ ಪ್ರಾಂತಗಳ ಕುರಿತೂ ಹಲವು ಕೃತಿಗಳು ರಚನೆಗೊಂಡಿವೆ. ಅಂಥವುಗಳಲ್ಲಿ ಡಾ. ಎಸ್.ಕೆ. ಕೊಪ್ಪಾ ಅವರ 'ತರ್ದವಾಡಿ ನಾಡು', ಶ್ರೀನಿವಾಸ ರಿತ್ತಿಯವರ 'ಮುಳುಗುಂದ ನಾಡು', ಡಾ. ಧನವಂತ ಹಾಜವಗೊಳ 'ಮುಳುಗುಂದ ನಾಡು', ಡಾ. ಭೋಜರಾಜ ಪಾಟೀಲರವರ 'ನಾಗರಖಂಡ ೭೦', ಡಾ. ಸುರೇಶ ದೊಡ್ಡಮನಿಯವರ 'ನೂರಂಬಾಡ : ಒಂದು ಸಾಂಸ್ಕೃತಿಕ ಅಧ್ಯಯನ'ಗಳಂಥ ಕೃತಿಗಳು ಪ್ರಮುಖವಾಗಿವೆ.

ಕಲ್ಯಾಣ ಚಾಲುಕ್ಯರ ಮಾಂಡಳಿಕರು, ಸಾಮಂತರ ಕುರಿತಾಗಿಯೂ ಅಧ್ಯಯನಗಳು ನಡೆದಿವೆ. ಡಾ. ಚನ್ನಕ್ಕ ಎಲಿಗಾರ ಅವರ 'ಹಾನಗಲ್ಲ ಕದಂಬರು', ಡಾ. ಪಿ.ಬಿ. ದೇಸಾಯಿಯವರ

'ಕರ್ನಾಟಕದ ಕಲಚೂರಿಗಳು', ಡಾ. ಹಂ.ಪ. ನಾಗರಾಜಯ್ಯ ಅವರ 'ಸಾಂತರರು : ಒಂದು ಅಧ್ಯಯನ', ಡಾ. ನರಸಿಂಹಮೂರ್ತಿಯವರ 'Sevunas of Devegiri', ಡಾ. ಶ್ರೀನಿವಾಸ ರಿತ್ತಿಯವರ 'Sevanas: The Yadavas of Devegiri' ಮುಂತಾದ ಕೃತಿಗಳು ಕಲ್ಯಾಣ ಚಾಲುಕ್ಯ ಸಾಮಂತ ಅರಸರ ಮೇಲೆ ಬೆಳಕು ಚಲ್ಲುತ್ತವೆ. ಇದಲ್ಲದೆ ಇನ್ನು ಅನೇಕ ಕೃತಿಗಳು ಕಲ್ಯಾಣ ಚಾಲುಕ್ಯ ಅರಸು ಮನೆತನದ ಬಗೆಗೆ ವಿವರ ಒದಗಿಸುತ್ತವೆ. ಈ ಮೇಲೆ ಉಲ್ಲೇಖಿಸಿದ ಎಲ್ಲ ಕೃತಿಗಳು ಒಂದಿಲ್ಲೊಂದು ರೀತಿಯಲ್ಲಿ ಮೌಲಿಕವಾಗಿವೆ. ಆದರೆ, ಕಲ್ಯಾಣ ಚಾಲುಕ್ಯರ 'ದಾನ-ದತ್ತಿ' ವಿಷಯಗಳು ಇಲ್ಲಿನ ಪ್ರಬಂಧಗಳಲ್ಲಿ ಗೌಣವಾಗಿವೆ. ಪ್ರಾಸ್ತಾವಿಕವಾಗಿ ನಾಲ್ಕು ಮಾತು ಹೇಳಿ ಮುಗಿಸಿರುವುದನ್ನು ಮನಗಂಡು ಈ ವಿಷಯವು ಅಧ್ಯಯನಕ್ಕೆ ಅಗತ್ಯವೆಂದು ಪರಿಗಣಿಸಲಾಗಿದೆ.

## ೧.೨ ಅಧ್ಯಯನದ ಉದ್ದೇಶ ಮತ್ತು ಮಹತ್ವ :

ಪ್ರಸ್ತುತ ಅಧ್ಯಯನವು ಕಲ್ಯಾಣ ಚಾಲುಕ್ಯರ ಶಾಸನಗಳಲ್ಲಿ ದಾನ-ದತ್ತಿಗಳನ್ನು ವಿಶ್ಲೇಷಿಸುತ್ತದೆ. ಅಧ್ಯಯನದ ಸಫಲತೆಯ ದೃಷ್ಟಿಯಿಂದ ಕೆಲವು ಉದ್ದೇಶಗಳನ್ನು ಹೊಂದಲಾಗಿದೆ. ಅಧ್ಯಯನದ ಉದ್ದೇಶ ಮತ್ತು ಮಹತ್ವಗಳು ಈ ಕೆಳಕಂಡಂತಿವೆ –

೧. ಭಾರತೀಯ ಪರಂಪರೆಯಲ್ಲಿ ದಾನದ ಅರ್ಥ, ಸ್ವರೂಪ, ಮಹತ್ವ, ಸ್ಥಾನ, ಪ್ರಕಾರಗಳನ್ನು ಗುರುತಿಸುವುದು.

೨. ಕಲ್ಯಾಣ ಚಾಲುಕ್ಯ ಅರಸುಮನೆತನದ ಸಾಧನೆ-ಸಿದ್ಧಿಗಳನ್ನು ಸಾಧ್ಯಂತವಾಗಿ ಸಂಕ್ಷೇಪಿಸಿ ಚರ್ಚಿಸುವುದು.

೩. ಕಲ್ಯಾಣ ಚಾಲುಕ್ಯರ ಕಾಲದ ದಾನ-ದತ್ತಿಗಳ ಅನನ್ಯ ವಿಸ್ತಾರವನ್ನು ತಿಳಿಯುವುದು.

೪. ಕಲ್ಯಾಣ ಚಾಲುಕ್ಯರ ಕಾಲದ ಸಾಮಾಜಿಕ ಸಂಬಂಧಗಳು; ಅವುಗಳಲ್ಲಿ ವ್ಯಕ್ತಿಯ 'ತ್ಯಾಗ', 'ಉಪಕಾರಗುಣ', 'ಸಮಾಜದ ಉಳಿಕೆ – ಗಳಿಕೆಗಳು', 'ನಿಸ್ವಾರ್ಥ' ಮತ್ತು 'ನಿರಹಂಭಾವ'ದ ಕುರಿತಾಗಿ ಅರ್ಥೈಸಿಕೊಳ್ಳುವುದು.

೫. ಅಂದಿನ ಕಾಲದ ದಾನಗಳ ಉದ್ದೇಶ, ಸ್ವರೂಪಗಳನ್ನು ಗುರುತಿಸುವುದು. ದಾನಗಳು ಯಾರಿಂದ ? ಯಾರಿಗೆ ? ಯಾವ ರೂಪದಲ್ಲಿ ? ಯಾವ ಕಾರಣಕ್ಕೆ ? ಯಾವಾಗ ? ನೀಡಲ್ಪಟ್ಟಿವೆ ಎಂಬುದನ್ನು ಅಭ್ಯಸಿಸುವುದು.

೬. ಕನ್ನಡಿಗರ ಮಹಾಮೌಲ್ಯ ತ್ಯಾಗದ ಪರಂಪರೆಯಲ್ಲಿ 'ಸರ್ವೇಜನಾಃ ಸುಖಿನೋ ಭವಂತು' ಎಂಬ ಆಶಯವನ್ನು ಕಲ್ಯಾಣ ಚಾಲುಕ್ಯರ ದಾನದತ್ತಿಗಳಲ್ಲಿ ಗುರುತಿಸುವುದು.

೭. ದಾನ-ದತ್ತಿಗಳು ಪೂರ್ಣ ಫಲಾಪೇಕ್ಷೆಯಿಂದ ಮುಕ್ತವಾಗಿದ್ದವೆ? ಅಥವಾ ರಾಜಕೀಯ ಮತ್ತು ಆರ್ಥಿಕ ಲಾಭಗಳಿಂದ ಕೂಡಿದ್ದವೆ ? ಎಂಬುದನ್ನು ಚರ್ಚಿಸುವುದು.

೮. 'ದಾನ'ವನ್ನು ಒಂದು ಮೌಲ್ಯವಾಗಿ, ತಂತ್ರವಾಗಿ, ಉಪಾಯನವಾಗಿ ಅಭ್ಯಸಿಸುವುದು.

೯. ಧರ್ಮ, ಶಿಕ್ಷಣ, ದೇವಾಲಯ, ಕಲೆ ಮತ್ತು ವಾಸ್ತುಶಿಲ್ಪ, ಆರ್ಥಿಕ ಸಮತೋಲನ, ಸಂಪತ್ತಿನ ವಿತರಣೆ, ಸಾಮಾಜಿಕ ಸಾಮರಸ್ಯಗಳಲ್ಲಿ ದಾನದ ಮಹತ್ವವನ್ನು ವಿಶ್ಲೇಷಿಸುವುದು.

೧೦. ಪ್ರಜಾಸತ್ತೆಗಾಗಿ ನಡೆದ ಕಲ್ಯಾಣಕ್ರಾಂತಿಗೆ ಹಿನ್ನೆಲೆಯಾಗಿ ಚಾಲುಕ್ಯರ ಆಳ್ವಿಕೆ ಪ್ರಭಾವ ಬೀರಿತ್ತೆ ? ಎಂಬುದನ್ನು ವಿವೇಚಿಸುವುದು.

ಇವು ಪ್ರಸ್ತುತ ಸಂಶೋಧನಾ ಅಧ್ಯಯನಕ್ಕೆ ಇಟ್ಟುಕೊಂಡ ಉದ್ದೇಶಗಳು. ಇವುಗಳನ್ನು ಸಾಧ್ಯವಿದ್ದಷ್ಟು ತಲಸ್ಪರ್ಶಿಯಾಗಿ, ವಸ್ತುನಿಷ್ಠವಾಗಿ ಅಧ್ಯಯನ ಮಾಡಲು ಉದ್ದೇಶಿಸಿದೆ.

## ೧.೩ ಅಧ್ಯಯನದ ವ್ಯಾಪ್ತಿ :

ಪ್ರಸ್ತುತ ಅಧ್ಯಯನವು ಕಲ್ಯಾಣ ಚಾಲುಕ್ಯರ ಕಾಲದ ದಾನ, ದತ್ತಿಗಳಿಗೆ ಮಾತ್ರ ಸೀಮಿತವಾಗಿದೆ. ಅದಕ್ಕೆ ಪೂರಕವಾಗಿ ಭಾರತೀಯ ಪರಂಪರೆಯಲ್ಲಿ ಬೆಳೆದು ಬಂದ ದಾನದ ಪರಿಕಲ್ಪನೆಯನ್ನು ಅಭ್ಯಸಿಸುತ್ತದೆ. ದಾನ-ದತ್ತಿಗಳ ವಿವಿಧ ರೂಪಗಳನ್ನು, ಅವುಗಳನ್ನು ನೀಡಿದುದರ ಸಾರ್ವತ್ರಿಕ ಉದ್ದೇಶಗಳನ್ನು ವಿವರಿಸುತ್ತದೆ. ದಾನ ನೀಡಿದ ಸಂಖ್ಯಾಪ್ರಮಾಣದಲ್ಲಿ ಅರಸರ, ಮಹಾಮಂಡಳೇಶ್ವರರ, ಸಾಮಂತರ, ಅಧಿಕಾರಿಗಳ ಹಾಗೂ ಜನಸಾಮಾನ್ಯರ ದಾನ-ದತ್ತಿಗಳನ್ನು ಅಭ್ಯಸಿಸುತ್ತದೆ.

ಈ ಅಧ್ಯಯನಕ್ಕೆ ಕ್ರಿ.ಶ. ೯೭೩ ರಿಂದ ಕ್ರಿ.ಶ. ೧೧೫೬ರ ಕಾಲ ಮಿತಿ ಹಾಕಿಕೊಳ್ಳಲಾಗಿದೆ. ಕ್ರಿ.ಶ. ೧೧೫೬ರಿಂದ ೧೧೮೧ರ ವರೆಗಿನ ಕಲಚೂರಿಗಳ ಆಳ್ವಿಕೆಯ ಅವಧಿಯನ್ನು ಹೊರತು ಪಡಿಸಿ; ಚಾಲುಕ್ಯ ಚಕ್ರವರ್ತಿ ನಾಲ್ಕನೆಯ ಸೋಮೇಶ್ವರನ (ಕ್ರಿ.ಶ. ೧೧೮೧-೧೧೮೯) ಕಾಲದ ದಾನ-ದತ್ತಿಗಳನ್ನು ಈ ಪ್ರಬಂಧದಲ್ಲಿ ಸಾಂಕೇತಿಕವಾಗಿ ವಿಶ್ಲೇಷಿಸಲಾಗಿದೆ.

'ಕಲ್ಯಾಣ ಚಾಲುಕ್ಯ ಅರಸು ಮನೆತನ' ಕುರಿತು ಅಧ್ಯಯನಕ್ಕೆ ಪೂರಕವಾಗಿ ಸಂಕ್ಷಿಪ್ತದಲ್ಲಿ ವಿವರಿಸಲಾಗಿದೆ. ಈಗಾಗಲೇ ಈ ನಿಟ್ಟಿನಲ್ಲಿ ಸಾಕಷ್ಟು ಅಧ್ಯಯನಗಳು ನಡೆದಿರುವ ಕಾರಣದಿಂದ ಇದಕ್ಕೆ ದ್ವಿತೀಯ ಆಕರಗಳನ್ನು ವಿಪುಲವಾಗಿ ಬಳಸಿಕೊಳ್ಳಲಾಗಿದೆ. ದಾನ ದತ್ತಿಗಳಿಗೆ ಹಿನ್ನೆಲೆಯಾಗಿ ರಾಜಕೀಯ, ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ, ಕಲೆ ಮತ್ತು ವಾಸ್ತುಶಿಲ್ಪ ಮುಂತಾದ ವಿಷಯಗಳನ್ನು ಚರ್ಚಿಸಲಾಗಿದೆ.

ಪ್ರಸ್ತುತ ಅಧ್ಯಯನವನ್ನು ಒಟ್ಟು ಆರು ಅಧ್ಯಾಯಗಳಲ್ಲಿ ವಿಭಾಗಿಸಲಾಗಿದೆ. ಪರಿವಿಡಿಯಲ್ಲಿ ಸೂಚಿಸಿದಂತೆ ಮೊದಲನೆಯ ಅಧ್ಯಾಯವು ಪೀಠಿಕಾ ರೂಪದಲ್ಲಿದ್ದು; ಅಧ್ಯಯನದ ಸ್ವರೂಪ, ಉದ್ದೇಶ, ವ್ಯಾಪ್ತಿ ಮತ್ತು ಮೂಲಗಳ ವಿವರಗಳನ್ನೊಳಗೊಂಡಿದೆ.

ಎರಡನೆಯ ಅಧ್ಯಾಯವು 'ದಾನದ ಅರ್ಥ, ಸ್ವರೂಪ ಮತ್ತು ಇತಿಹಾಸ' ಎಂಬ ಶೀರ್ಷಿಕೆಯನ್ನು ಹೊಂದಿದೆ. ಇದರಲ್ಲಿ ಸ್ಮೃತಿಕಾರರು ದಾರ್ಶನಿಕರು, ರಾಜನೀತಿ ತಜ್ಞರು, ಮತ್ತು ಧರ್ಮದ ನೆಲೆಗಟ್ಟಿನ ಮೇಲೆ ಬೇರೆ ಬೇರೆ ವಿದ್ವಾಂಸರು ಹೇಳಿದ ದಾನದ ಅರ್ಥವನ್ನು ವಿಶ್ಲೇಷಿಸಲಾಗಿದೆ. ದಾನ ಮತ್ತು ಧರ್ಮ ಪದಗಳ ಸಾಮ್ಯ ಹಾಗೂ ವೈಷಮ್ಯಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ. ದಾನದ ಪ್ರಮುಖ ಅಂಗಗಳಾದ ದಾನಿ ಅಥವಾ ದಾತೃ, ಪ್ರತಿಗ್ರಹಿ ಮತ್ತು ದಾನದ ವಸ್ತುಗಳ ಕುರಿತು ಚರ್ಚಿಸಲಾಗಿದೆ. ಇದೇ ಅಧ್ಯಾಯದಲ್ಲಿ ಭಾರತದಲ್ಲಿ ದಾನದ ಪ್ರಾಚೀನತೆ, ಭಾರತೀಯ ಪರಂಪರೆಯಲ್ಲಿ ದಾನಕ್ಕೆ ಇದ್ದ ಮಹತ್ವವನ್ನು ವಿವರಿಸಲಾಗಿದೆ ದಾನದ ವಿಧಾನ ಮತ್ತು ವಸ್ತುವನ್ನಾಧರಿಸಿ ದಾನದ ಪ್ರಕಾರಗಳನ್ನು ಈ ಅಧ್ಯಾಯದಲ್ಲಿ ಕಾಣಬಹುದು.

ಮೂರನೆಯ ಅಧ್ಯಾಯವು 'ಕಲ್ಯಾಣ ಚಾಲುಕ್ಯ ಅರಸು ಮನೆತನದ ಕುರಿತು ವಿವರ ಒಳಗೊಂಡಿದೆ. ಇಲ್ಲಿ ಚಾಲುಕ್ಯ ಅರಸರ ಆಳ್ವಿಕೆಯ ಕಾಲಾವಧಿಗೆ ಪ್ರಾಧಾನ್ಯತೆ ನೀಡಲಾಗಿದೆ. ಅದರೊಂದಿಗೆ ದಾನ – ದತ್ತಿ ನೀಡುವಷ್ಟರ ಮಟ್ಟಿಗೆ ಅರಸರು, ರಾಣಿಯರು, ಪ್ರಭುಗಳು ಮತ್ತು ಆಡಳಿತಾಧಿಕಾರಿಗಳ ಅಧಿಕಾರದ ಸ್ಥಾನ–ಮಾನಗಳನ್ನು ಹೇಳಲಾಗಿದೆ.

ನಾಲ್ಕನೆಯ ಅಧ್ಯಾಯವು ಸಂಶೋಧನ ಪ್ರಬಂಧದ ಹೃದಯ ಭಾಗವಾಗಿದೆ. ಕಲ್ಯಾಣ ಚಾಲುಕ್ಯರ ದಾನ–ದತ್ತಿಗಳ ಕುರಿತಾಗಿದ್ದು, ಕಲ್ಯಾಣ ಚಾಲುಕ್ಯರ ಕಾಲದ ದಾನಗಳ ಸ್ವರೂಪ, ದಾನಕ್ಕೆ ಪ್ರೇರಕವಾದ ಅಂಶಗಳು, ದಾನದ ಉದ್ದೇಶಗಳು, ದಾನದ ಪ್ರಮುಖ ವಿಧಗಳು ಮುಂತಾದ ಘಟಕಾಂಶಗಳನ್ನು ಒಳಗೊಂಡಿದೆ.

ಐದನೆಯ ಅಧ್ಯಾಯದಲ್ಲಿ 'ಕಲ್ಯಾಣ ಚಾಲುಕ್ಯರ ದಾನ–ದತ್ತಿಗಳ ಮಹತ್ವ'ವನ್ನು ಚರ್ಚಿಸಲಾಗಿದೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ವಿದ್ಯಾಭ್ಯಾಸ ಮತ್ತು ಶಿಕ್ಷಣ ಕೇಂದ್ರಗಳು ಉಳಿದು, ಬೆಳೆದು ಬರಲು ದಾನ–ದತ್ತಿಗಳು ಹೇಗೆ ನೆರವಾದವು ಎಂಬುದನ್ನು ಇದರಲ್ಲಿ ವಿಶ್ಲೇಷಿಸಲಾಗಿದೆ. ಧರ್ಮದ ಏಳಿಗೆ ಹಾಗೂ ಪ್ರಸಾರದಲ್ಲಿ ದಾನದ ಪಾತ್ರ, ದಾನ ಮತ್ತು ರಾಜನೀತಿ, ದಾನ ಮತ್ತು ಸಾಮಾಜಿಕ ಪ್ರಗತಿ, ದಾನ ಮತ್ತು ಕಲೆ ಮುಂತಾದ ಅಂಶಗಳನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ. ಇದು ಕಲ್ಯಾಣ ಚಾಲುಕ್ಯರ ದಾನ–ದತ್ತಿಗಳ ಒಟ್ಟಾರೆ ಪರಿಣಾಮಗಳನ್ನು ದಾಖಲಿಸುತ್ತದೆ.

ಆರನೆಯ ಹಾಗೂ ಕೊನೆಯ ಅಧ್ಯಾಯವು ಒಟ್ಟು ಅಧ್ಯಯನದ ಸಮಾರೋಪವಾಗಿದೆ. ಇದರಲ್ಲಿ ಇಡೀ ಅಧ್ಯಯನದಿಂದ ತಿಳಿದುಬಂದ ವಿಷಯಗಳ ಸಾಮಾನ್ಯ ನಿರ್ಣಯಗಳನ್ನು ಹೇಳಲಾಗಿದೆ. ಮುಂದಿನ ವ್ಯಾಸಂಗಗಳಿಗೆ ಅನುಕೂಲವಾಗುವ ಕೆಲವು ವಿಷಯಗಳನ್ನು ಇಲ್ಲಿ ಚರ್ಚಿಸಲಾಗಿದೆ. ಪ್ರಬಂಧದ ಕೊನೆಯಲ್ಲಿ ಕೆಲವು ಅನುಬಂಧಗಳು ಹಾಗೂ ಆಕರ ಸಾಮಗ್ರಿಗಳನ್ನು ಪಟ್ಟಿಮಾಡಲಾಗಿದೆ.

ಈ ಅಧ್ಯಯನದ ವ್ಯಾಪ್ತಿಯಲ್ಲಿ ಕಲ್ಯಾಣ ಚಾಲುಕ್ಯರ ಮಾಂಡಲಿಕರು, ಸಾಮಂತರು, ಅಧಿಕಾರಿಗಳು ಮತ್ತು ಜನಸಾಮಾನ್ಯರನ್ನು ಪ್ರತ್ಯೇಕವಾಗಿ ಪರಿಗಣಿಸಿಲ್ಲ. ಕಲ್ಯಾಣ ಚಾಲುಕ್ಯರ ಆಳ್ವಿಕೆಯ ವ್ಯಾಪ್ತಿಯಲ್ಲಿದ್ದ ಹಾಗೂ ಚಾಲುಕ್ಯ ಚಕ್ರವರ್ತಿಗಳ ಉಲ್ಲೇಖವಿರುವ ಶಾಸನಗಳನ್ನು ಪರಿಗಣಿಸಿ ಅಧ್ಯಯನ ಕೈಕೊಳ್ಳಲಾಗಿದೆ. ಇದುವರೆಗೂ ಕಲ್ಯಾಣ ಚಾಲುಕ್ಯರ ಪ್ರಕಟಿತ ಶಾಸನಗಳ ಸಂಖ್ಯೆ ಎರಡು ಸಾವಿರಕ್ಕೂ ಹೆಚ್ಚು.[3] ಅವುಗಳಲ್ಲಿ ಕಲ್ಯಾಣ ಚಾಲುಕ್ಯ ಚಕ್ರವರ್ತಿಗಳ ಉಲ್ಲೇಖವಿರುವ ಮತ್ತು ನಮ್ಮ ಅಧ್ಯಯನದ ಕಾಲ ಮಿತಿಗೆ ಒಳಪಟ್ಟ ೧೫೦೦ ಶಾಸನಗಳಿಗೆ ಮಾತ್ರ ಸೀಮಿತಗೊಳಿಸಲಾಗಿದೆ. ಚಕ್ರವರ್ತಿಯ ಉಲ್ಲೇಖವಿರದ ಹಾಗೂ ಬಹು ತ್ರುಟಿತವಾಗಿರುವ ಶಾಸನಗಳನ್ನು ಕೈಬಿಡಲಾಗಿದೆ. ಪ್ರತಿ ದಾನಗಳನ್ನು ಕೇವಲ ಪಟ್ಟಿ ಮಾಡುವುದಿಲ್ಲ. ಸಾಮಾನ್ಯವಾಗಿ ಒಂದೇ ಲಕ್ಷಣಗಳನ್ನು ಹೊಂದಿದ ಹಾಗೂ ಒಂದೇ ರೀತಿಯ ದಾನ ವಿಷಯ ವಸ್ತುವನ್ನು ಒಳಗೊಂಡಿರುವ ದಾನಗಳನ್ನು ಪ್ರಾತಿನಿಧಿಕವಾಗಿ ಕೆಲವನ್ನು ಉದಾಹರಿಸಲಾಗಿದೆ. ಅದೇ ರೀತಿ ಇರುವ ಅನೇಕ ದಾನ ಶಾಸನಗಳಲ್ಲಿ ಹಲವನ್ನು ನಿರ್ದೇಶಿಸಲಾಗಿದೆ.

## ೧.೪ ಆಕರ ಸಾಮಗ್ರಿಗಳು :

ಯಾವುದೇ ನಾಡಿನ ಇತಿಹಾಸವನ್ನು ಅರಿತುಕೊಳ್ಳಲು ಹಲವಾರು ಆಕರ ಸಾಮಗ್ರಿಗಳನ್ನು ಆಶ್ರಯಿಸಬೇಕಾದುದು ಅನಿವಾರ್ಯ ಮತ್ತು ಅತ್ಯವಶ್ಯ. ಐತಿಹಾಸಿಕ ಮಾಹಿತಿಗಳನ್ನೊಳಗೊಂಡ ಆಕರಗಳನ್ನು ಸ್ಥೂಲವಾಗಿ ಪ್ರಾಚ್ಯವಸ್ತು ಆಕರಗಳು ಮತ್ತು ಸಾಹಿತ್ಯಿಕ ಆಕರಗಳು ಎಂದು ಎರಡು ವಿಭಾಗಗಳಲ್ಲಿ ವಿಂಗಡಿಸಬಹುದು. ಶಾಸನಗಳು, ನಾಣ್ಯಗಳು ಹಾಗೂ ಸ್ಮಾರಕಗಳು ಪ್ರಾಚ್ಯವಸ್ತು ಆಕರಗಳಾಗಿವೆ. ಸಾಹಿತ್ಯ ಬರವಣಿಗೆಗಳು ದೇಶಿಯ ಮತ್ತು ವಿದೇಶಿಯ ಸಾಹಿತ್ಯಿಕ ಆಕರಗಳಾಗಿವೆ. ಪ್ರಸ್ತುತ ಅಧ್ಯಯನಕ್ಕೆ ಈ ಕೆಳಗೆ ಉಲ್ಲೇಖಿಸಿದ ಆಕರ ಸಾಮಗ್ರಿಗಳನ್ನು ಬಳಸಿಕೊಳ್ಳಲಾಗಿದೆ.

### ಅ. ಶಾಸನಗಳು :

ಇತಿಹಾಸ ರಚನೆಗೆ ಅತ್ಯಮೂಲ್ಯ ಲಿಖಿತ ಪುರಾವೆಗಳೆಂದರೆ ಶಾಸನಗಳು. ಬಹುಕಾಲ ನಿಲ್ಲಬಲ್ಲ, ಶಾಶ್ವತವಾಗಿ ಉಳಿಯಬಲ್ಲ, ವಸ್ತುಗಳ ಮೇಲೆ ಕೊರೆಯಲ್ಪಟ್ಟ ಬರಹಗಳನ್ನೇ ಶಾಸನಗಳೆನ್ನುವರು. ಅವು ರಾಜಾಜ್ಞೆಗಳಾಗಿದ್ದು, ಕಾಲಾಂತರದಲ್ಲಿ ಸಾಮಾಜಿಕವಾದ ವಿಷಯವನ್ನು ಒಳಗೊಂಡಿವೆ. ಇದಕ್ಕೆ ಶಾಸನಗಳಲ್ಲಿನ ದಾನ, ದತ್ತಿ, ದೇವಾಲಯ ನಿರ್ಮಾಣ, ಶಿಕ್ಷಣ, ನಾಡುಗಳ ವರ್ಣನೆ ಮುಂತಾದ ವಿಷಯಗಳೇ ಸಾಕ್ಷಿ. ಕಲ್ಯಾಣ ಚಾಲುಕ್ಯರ ಕಾಲದ ಶಾಸನಗಳು ಈ ಅಧ್ಯಯನದ ಪ್ರತಿ ಹಂತದಲ್ಲೂ ಅಧಿಕೃತ ಭೂಮಿಕೆಯಾಗಿವೆ. ಕಲ್ಯಾಣ ಚಾಲುಕ್ಯರ ಕಾಲದ ಶಾಸನಗಳು ಬಹುಮಟ್ಟಿಗೆ ಪ್ರಕಟವಾಗಿವೆ. ವಿವಿಧ ಶಾಸನ ಸಂಪುಟಗಳಲ್ಲಿ ಪ್ರಕಟವಾಗಿರುವ ಶಾಸನಗಳನ್ನೇ ಮೂಲ ಆಕರಗಳನ್ನಾಗಿ ಸಂಗ್ರಹಿಸಿ ಈ ಅಧ್ಯಯನ ಕೈಕೊಳ್ಳಲಾಗಿದೆ. ಚಾಲುಕ್ಯ ಚಕ್ರವರ್ತಿಗಳ ಕಾಲಕ್ಕೆ ಸಂಬಂಧಿಸಿದಂತೆ ಸಂಗ್ರಹಿಸಲಾದ ಶಾಸನಗಳ ಸಂಖ್ಯೆ ಹೀಗಿದೆ.

| | ಚಕ್ರವರ್ತಿಗಳು | ಶಾಸನಗಳ ಸಂಖ್ಯೆ |
|---|---|---|
| ೦೧. | ಇಮ್ಮಡಿ ತೈಲಪ<br>(ಕ್ರಿ.ಶ. ೯೭೩-೯೯೭) | ೭೦ |
| ೦೨. | ಸತ್ಯಾಶ್ರಯ ಇರಿವಬೆಡಂಗ<br>(ಕ್ರಿ.ಶ. ೯೯೭-೧೦೦೮) | ೨೧ |
| ೦೩. | ೫ನೆಯ ವಿಕ್ರಮಾದಿತ್ಯ<br>(ಕ್ರಿ.ಶ.೧೦೦೮-೧೦೧೪) | ೧೦ |
| ೦೪. | ಅಯ್ಯಣದೇವ<br>(ಕ್ರಿ.ಶ.೧೦೧೫) | ೦೨ |
| ೦೫. | ಇಮ್ಮಡಿ ಜಯಸಿಂಹ (ಒಂದನೆಯ ಜಗದೇಕಮಲ್ಲ)<br>(ಕ್ರಿ.ಶ. ೧೦೧೫-೧೦೪೩) | ೧೧೫ |
| ೦೬. | ಒಂದನೆಯ ಸೋಮೇಶ್ವರ (ತ್ರೈಲೋಕ್ಯಮಲ್ಲ)<br>(ಕ್ರಿ.ಶ. ೧೦೪೩–೧೦೬೮) | ೧೫೨ |
| ೦೭. | ಇಮ್ಮಡಿ ಸೋಮೇಶ್ವರ (ಭುವನೈಕ ಮಲ್ಲ)<br>(ಕ್ರಿ.ಶ. ೧೦೬೮-೧೦೭೬) | ೬೫ |
| ೦೮. | ಆರನೆಯ ವಿಕ್ರಮಾದಿತ್ಯ (ತ್ರಿಭುವನಮಲ್ಲ, ಗಂಗಪೆರ್ಮಾಡಿ)<br>(ಕ್ರಿ.ಶ. ೧೦೭೬-೧೧೨೬) | ೬೫೦ |
| ೦೯. | ಮೂರನೆಯ ಸೋಮೇಶ್ವರ (ಸರ್ವಜ್ಞಚಕ್ರವರ್ತಿ, ಭೂಲೋಕಮಲ್ಲ)<br>(ಕ್ರಿ.ಶ. ೧೧೨೬-೧೧೩೮) | ೧೦೫ |
| ೧೦. | ಇಮ್ಮಡಿ ಜಗದೇಕಮಲ್ಲ (ಪ್ರತಾಪಚಕ್ರವರ್ತಿ, ಪೆರ್ಮಾಡಿದೇವ)<br>(ಕ್ರಿ.ಶ. ೧೧೩೯-೧೧೫೦) | ೧೦೯ |
| ೧೧. | ಮೂರನೆಯ ತೈಲಪ (ಮುಮ್ಮಡಿ ತ್ರೈಲೋಕ್ಯಮಲ್ಲ)<br>(ಕ್ರಿ.ಶ. ೧೧೫೧ – ೧೧೫೬) | ೩೯ |
| ೧೨. | ನಾಲ್ಕನೆಯ ಸೋಮೇಶ್ವರ<br>(ಕ್ರಿ.ಶ. ೧೧೮೧ – ೧೧೮೯) | ೪೮ |
| | ಇತರೆ<br>(ಕ್ರಿ.ಶ. ೯೭೩ – ೧೧೮೯) | ೧೨೪ |

ಒಟ್ಟು ಶಾಸನಗಳು = ೧೫೦೦

ಕಲ್ಯಾಣ ಚಾಲುಕ್ಯರ ಕಾಲದ ಶಾಸನಗಳನ್ನು ಸಂಗ್ರಹಿಸಲು ಭಾರತೀಯ ಪುರಾತತ್ವ ಸರ್ವೇಕ್ಷಣ ವಿಭಾಗದಿಂದ ಪ್ರಕಟವಾದ 'South Indian Inscriptions' ಸಂಪುಟಗಳು, 'Indian Antiquary', 'Epigraphia Indica' ಶಾಸನ ಸಂಪುಟಗಳು, ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯ 'Karnataka Inscriptions' ಶಾಸನ ಸಂಪುಟಗಳು, ಕನ್ನಡ ವಿಶ್ವವಿದ್ಯಾಲಯ ಹಂಪಿಯಿಂದ ಪ್ರಕಟವಾದ 'ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟಗಳು', ಪ್ರೊ. ಕೆ. ಜಿ. ಕುಂದಣಗಾರ ಅವರು ಸಂಗ್ರಹಿಸಿದ 'Inscriptions in northern Karnataka and Kolhapur State', ಡಾ.ಪಿ.ಬಿ.ದೇಸಾಯಿಯವರ 'Jainism in south India and some Jaina Epigraphs', ಡಾ.ಶ್ರೀನಿವಾಸ ರಿತ್ತಿ ಮತ್ತು ಡಾ.ಜಿ.ಸಿ.ಶೇಳ್ಕೆ ಅವರ 'Inscriptions from Nonded Districts'. ಡಾ. ಶ್ರೀನಿವಾಸ ರಿತ್ತಿ ಮತ್ತು ಆನಂದ ಕುಂಬಾರ ಅವರ 'Inscriptions from Solapur Districts', ಆಂಧ್ರಪ್ರದೇಶದ ಸರಕಾರಿ ಪ್ರಾಚ್ಯಶಾಸ್ತ್ರ ವಿಭಾಗದ ಶಾಸನ ಸರಣಿಗಳು (APGAS), ಡಾ. ಪಿ.ಬಿ. ದೇಸಾಯಿ ಅವರ 'ಶಾಸನ ಪರಿಚಯ', ಎ.ಎಂ.ಅಣ್ಣಿಗೇರಿ ಮತ್ತು ಮೇವುಂಡಿ ಮಲ್ಲಾರಿ ಅವರ 'ಶಾಸನ ಸಾಹಿತ್ಯ ಸಂಚಯ', ಶ್ರೀಮತಿ ಹನುಮಾಕ್ಷಿ ಗೋಗಿಯವರ 'ಕಲ್ಬುರ್ಗಿ ಜಿಲ್ಲೆಯ ಶಾಸನಗಳು' ಮುಂತಾದ ಶಾಸನ ಸಂಪುಟಗಳನ್ನು ಬಳಸಿಕೊಳ್ಳಲಾಗಿದೆ.

### ಆ. ಸಾಹಿತ್ಯ ಕೃತಿಗಳು :

ಸಾಹಿತ್ಯವನ್ನು ಜನಜೀವನದ ಪ್ರತಿಬಿಂಬವೆನ್ನಲಾಗಿದೆ. ಇತಿಹಾಸ ರಚನೆಯಲ್ಲಿ ಸಾಹಿತ್ಯ ಕೃತಿಗಳು ತುಂಬಾ ಮಹತ್ವವನ್ನು ಪಡೆದಿವೆ. ಕವಿಗಳು ತಮ್ಮ ಕಾವ್ಯ ಪುರಾಣಗಳಲ್ಲಿ ಆಯಾ ಕಾಲದ ಜನಜೀವನವನ್ನು ಪಡಿಮೂಡಿಸಿದ್ದಾರೆ. ಕಲ್ಯಾಣ ಚಾಲುಕ್ಯರ ಕಾಲದ ಜನಜೀವನ ಬಿಂಬಿಸುವ ಆ ಕಾಲದ ಸಾಹಿತ್ಯ ಕೃತಿಗಳಲ್ಲಿ ದಾನ-ದತ್ತಿಗಳ ಕುರಿತಾದ ಹಲವಾರು ವಿಷಯಗಳು ಉಲ್ಲೇಖಗೊಂಡಿವೆ. ಅಂಥ ಸಾಹಿತ್ಯ ಕೃತಿಗಳನ್ನು ಈ ಸಂಶೋಧನ ಅಧ್ಯಯನಕ್ಕೆ ದ್ವಿತೀಯ ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ.

ಚಾಲುಕ್ಯ ಚಕ್ರವರ್ತಿಯಾಗಿ ೩ನೆಯ ಸೋಮೇಶ್ವರನು 'ಮಾನಸೋಲ್ಲಾಸ' ಅಥವಾ 'ಅಭಿಲಾಷಿತಾರ್ಥ ಚಿಂತಾಮಣಿ' ಎಂಬ ಕೃತಿಯನ್ನು ಬರೆದಿದ್ದಾನೆ. ಇದೊಂದು ವಿಶ್ವಕೋಶದಂತಿದ್ದು ಹಲವಾರು ವಿಷಯಗಳ ಬಗ್ಗೆ ವಿವರಣೆ ಹೊಂದಿದೆ. ಮಾನಸೊಲ್ಲಾಸ ಕೃತಿಯಲ್ಲಿ ದಾನದ ವಿಷಯಗಳಿಗಾಗಿಯೇ ಒಂದು ಅಧ್ಯಾಯವನ್ನು ಮೀಸಲಿಡಲಾಗಿದೆ. ಚಕ್ರವರ್ತಿಯೊಬ್ಬನು ಈ ಕೃತಿಯನ್ನು ಬರೆದಿರುವುದರಿಂದ ಇದೊಂದು ನಂಬಲರ್ಹವಿರುವ ದಾಖಲೆಯೆಂದು ಸಾಹಿತ್ಯ ಕೃತಿಗಳಲ್ಲಿ ಇದಕ್ಕೆ ಮೊದಲ ಆದ್ಯತೆ ನೀಡಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಇದಲ್ಲದೆ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ರಚನೆಯಾದ ರನ್ನನ ಕೃತಿಗಳು, ಕಾಶ್ಮೀರ ಕವಿ ಬಿಲ್ಲಣನ 'ವಿಕ್ರಮಾಂಕ ದೇವ ಚರಿತ', ಲಕ್ಕಣ್ಣ ದಂಡೇಶನ 'ಶಿವತತ್ವ ಚಿಂತಾಮಣಿ',

ವಿಜ್ಞಾನೇಶ್ವರನ 'ಮಿತಾಕ್ಷರ', ಕೊಂಡಕುಳಿ ಕೇಶಿರಾಜನ ಕೃತಿಗಳು, ಪಂಪನ 'ಆದಿಪುರಾಣ' ಮತ್ತು 'ವಿಕ್ರಮಾರ್ಜುನ ವಿಜಯ', ನಯಸೇನನ 'ಧರ್ಮಾಮೃತ', ಸೋಮದೇವಸೂರಿಯ 'ನೀತಿ ವಾಕ್ಯಾಮೃತ' ಮುಂತಾದ ಕೃತಿಗಳು ಸಾಹಿತ್ಯಿಕ ಆಕರಗಳಾಗಿವೆ. ಇವುಗಳಲ್ಲದೆ ಶಿವಶರಣರ ವಚನಗಳು ಅಂದಿನ ಧಾರ್ಮಿಕ ಮತ್ತು ಸಾಮಾಜಿಕ ಜೀವನದ ಮೇಲೆ ಬೆಳಕು ಚಲ್ಲುತ್ತವೆ. ಹೀಗಾಗಿ ಶರಣರ ವಚನಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

**ಇ. ಸಂಶೋಧನಾತ್ಮಕ ಹಾಗೂ ಚಾರಿತ್ರಿಕ ಕೃತಿಗಳು :**

ಪ್ರಾಚೀನ ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿಯ ಮೇಲೆ ಬೆಳಕು ಚೆಲ್ಲುವಂಥ ಅನೇಕ ಸಂಶೋಧನಾ ಕೃತಿಗಳು ರಚನೆಗೊಂಡಿವೆ. ಕಲ್ಯಾಣ ಚಾಲುಕ್ಯರ ಕುರಿತಾಗಿಯೇ ಹಲವು ಸಂಶೋಧನೆ ಹಾಗೂ ಚಾರಿತ್ರಿಕ ಅಧ್ಯಯನಗಳು ನಡೆದಿವೆ. ಇವುಗಳಿಂದ ಅಂಶಿಕವಾಗಿ ಕಲ್ಯಾಣ ಚಾಲುಕ್ಯರ ದಾನ-ದತ್ತಿ ವಿಷಯಗಳ ನೆರವು ಸಿಗುತ್ತದೆ. ಲಭ್ಯವಿರುವ ಅಂಥ ಎಲ್ಲ ಸಂಶೋಧನಾತ್ಮಕ ಹಾಗೂ ಚಾರಿತ್ರಿಕ ಕೃತಿಗಳನ್ನು ಈ ಅಧ್ಯಯನಕ್ಕೆ ಪೂರಕ ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ.

ಪ್ರಾಚೀನ ಕರ್ನಾಟಕದ ಇತಿಹಾಸ ಮತ್ತು ಕಲ್ಯಾಣ ಚಾಲುಕ್ಯರ ಮೇಲೆ ಬೆಳಕು ಚೆಲ್ಲುವ ದಿನಕರ ದೇಸಾಯಿ ಅವರ 'The Mahamandalesvaras under the Chalukyas of Kalyani', ಡಾ. ಪಿ.ಬಿ ದೇಸಾಯಿಯವರ 'A History of Karnataka', 'Jainism in South India and Some Jaina Epigraphs', ಡಾ.ಯು.ಎನ್.ಘೋಷಾಲ್ ಅವರ 'Studies in Indian History and culture', ಡಾ.ಬಿ.ಅರ್.ಗೋಪಾಲ ಅವರ 'The Chalukyas of Kalyana and Kalachuri's', ಡಾ.ಕೆ.ಇಸ್ಮಾಯಿಲ್ ಅವರ 'Karnataka Temples : Their Role in Socio Economic Life', ಡಾ.ಕೆ.ವ್ಹಿ.ರಮೇಶ ಅವರ ' A History of South Kanara', ಡಬ್ರೋಯಿಲ್‌ರವರ 'Ancient History of the Deccan', ಡಾ. ಅರ್. ಜಿ. ಭಂಡಾರ್‌ಕರ್ ಅವರ 'The Early History of the Deccan', ಬಿ. ಎ. ಸಾಲತೊರೆ ಅವರ 'Ancient Karnataka', ಜಿ.ಯಾಝ್ದಾನಿಯವರ 'The Early History of the Deccan', ಎಂ.ಎಚ್. ಕೃಷ್ಣರವರ 'ಕರ್ನಾಟಕದ ಪೂರ್ವ ಚರಿತ್ರೆ', ಎಸ್.ಸಿ. ನಂದಿಮಠರವರ 'ಕನ್ನಡ ನಾಡಿನ ಚರಿತ್ರೆ', ಬೆಟಗೇರಿ ಕೃಷ್ಣಶರ್ಮರವರ 'ಕರ್ನಾಟಕದ ಜನಜೀವನ', ಡಾ. ಎಂ.ಚಿದಾನಂದಮೂರ್ತಿರವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ', ಡಾ. ಎಚ್. ತಿಪ್ಪೇರುದ್ರಸ್ವಾಮಿ ಅವರ 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ', ಡಾ. ಎಚ್. ಎಸ್. ಗೋಪಾಲರಾವ್ ಅವರ 'ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣದ ಚಾಲುಕ್ಯರ ದೇವಾಲಯಗಳು – ಒಂದು ಸಾಂಸ್ಕೃತಿಕ ಅಧ್ಯಯನ', ಡಾ. ಎಸ್. ಕೆ. ಕೊಪ್ಪ ಅವರ 'ತರ್ದವಾಡಿ ನಾಡು', ಶ್ರೀನಿವಾಸ ರಿತ್ತಿಯವರ 'ಮುಳಗುಂದ ನಾಡು', ಡಾ. ಜೆ.ಎಂ. ನಾಗಯ್ಯ ಅವರ 'ಆರನೇ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ', ಡಾ. ಬಿ. ವ್ಹಿ. ಶಿರೂರ

ಅವರ 'ಶ್ರವಣಬೆಳ್ಗೊಳ', ಡಾ. ಎಂ. ಪ್ರಸನ್ನಕುಮಾರ ಅವರ 'ಮೈಸೂರಿನ ಇತಿಹಾಸದಲ್ಲಿ ದಾನ' ಹೀಗೆ ಇನ್ನು ಅನೇಕ ಸಂಶೋಧನ ಕೃತಿಗಳು ಪ್ರಸ್ತುತ ಅಧ್ಯಯನಕ್ಕೆ ಪೂರಕ ಆಕರಗಳನ್ನು ಒದಗಿಸುತ್ತವೆ.

## ೧.೫. ಅಧ್ಯಯನದ ವಿನ್ಯಾಸ ಮತ್ತು ವಿಧಾನ :

ಕಲ್ಯಾಣ ಚಾಲುಕ್ಯರ ದಾನ-ದತ್ತಿಗಳನ್ನು ಕುರಿತು ಅಧ್ಯಯನ ಮಾಡಲು ಶಾಸನಗಳು ಮೊದಲ ಪ್ರಮಾಣಭೂತ ಆಕರಗಳಾಗಿರುವುದರಿಂದ, ಮೊದಲು ಕಲ್ಯಾಣ ಚಾಲುಕ್ಯರ ಒಟ್ಟು ಶಾಸನಗಳನ್ನು ವಿವಿಧ ಶಾಸನ ಸಂಪುಟಗಳಿಂದ ಸಂಗ್ರಹಿಸಲಾಯಿತು. ಅನಂತರ ಅಧ್ಯಯನದ ವಿವಿಧ ವಿಷಯಗಳ ಸಂಗ್ರಹಣೆಗೆ ಪಟ್ಟಿಕೆ [illegible] ವಿಧಾನವನ್ನು ಅನುಸರಿಸಲಾಯಿತು. ಪ್ರತಿಶಾಸನದಲ್ಲಿನ ದಾನದ ವಿಷಯಗಳನ್ನು ಪಟ್ಟಿಕೆಗಳಲ್ಲಿ ಸಂಗ್ರಹಿಸಿ, ವಿಷಯಾನುಕ್ರಮದಲ್ಲಿ ಅವುಗಳನ್ನು ಮರುವಿಂಗಡಣೆಗೆ ಸಹಾಯಕವಾಗುವಂತೆ ಅರಸ, ಶಾಸನದ ಕಾಲ, ಸ್ಥಳ, ದಾನದ ವಿಷಯಗಳ ವಿವರವನ್ನೊಳಗೊಂಡಂತೆ ಎಚ್ಚರವಹಿಸಲಾಯಿತು. ಇದರಂತೆ 'ಶಾಸನೇತರ'ವೆಂಬ ಶೀರ್ಷಿಕೆಯೊಂದಿಗೆ ಕಾವ್ಯ, ಪೂರಕಸಾಹಿತ್ಯ, ಸಂಶೋಧನ ಗ್ರಂಥಗಳು ಮತ್ತು ಲೇಖನಗಳಿಂದ ಮಾಹಿತಿಗಳನ್ನು ಸಂಗ್ರಹಿಸಿ ಪ್ರತ್ಯೇಕ ಗುಂಪಿನಲ್ಲಿಡಲಾಯಿತು. ನಂತರ ಈ ಎಲ್ಲಾ ಮಾಹಿತಿಗಳನ್ನು ವರ್ಗೀಕರಣ ಮಾಡಿ ಅವುಗಳಿಗೆ ಒಂದು ಸ್ಪಷ್ಟರೂಪವನ್ನು ಕೊಡುವ ಪ್ರಯತ್ನ ಮಾಡಲಾಯಿತು. ಕಲ್ಯಾಣ ಚಾಲುಕ್ಯರ ಶಾಸನಗಳ ಸಂಖ್ಯೆ ಹೆಚ್ಚಿರುವ ಕಾರಣದಿಂದ ಅವುಗಳಲ್ಲಿನ ವಿಷಯಗಳನ್ನೆಲ್ಲ ಪಟ್ಟಿಕೆಗಳಲ್ಲಿ ಸಂಗ್ರಹಿಸುವುದು ಅತ್ಯಂತ ದುಸ್ತರವಾಗಿದ್ದರಿಂದ ಕೆಲವು ವೇಳೆ ಒಂದೇ ರೀತಿಯ ಉದ್ದೇಶಗಳು, ವಿಷಯಗಳಿಗೆ ಸಂಬಂಧಿಸಿದ ಶಾಸನಗಳನ್ನು ಒಂದೆಡೆ ಕಲೆಹಾಕಿ ನೇರವಾಗಿ ವಿಷಯ ಸಂಗ್ರಹಿಸಲಾಯಿತು. ಉದಾಹರಣೆಗೆ- ದೇವರ ಅಂಗಭೋಗ, ರಂಗಭೋಗಗಳಿಗೆ ದಾನ ನೀಡಿದ ವಿವರವಿರುವ ಶಾಸನಗಳನ್ನು ಕಾಲಾನುಕ್ರಮದಲ್ಲಿ ಜೋಡಿಸುವುದು ತದನಂತರ ಅವುಗಳಲ್ಲಿನ ದಾನಗಳನ್ನು ದಾಖಲಿಸುವುದು. ಭೂಮಿದಾನ, ಹಣದಾನ, ಸುಂಕದಾನ, ಗ್ರಾಮದಾನ, ಗಾಣದಾನ ಮುಂತಾದವುಗಳಿಗೆ ಸಂಬಂಧಿಸಿದ ಶಾಸನಗಳಿದ್ದರೆ ಅವುಗಳನ್ನು ಪ್ರತ್ಯೇಕವಾಗಿ ವಿಂಗಡಿಸಿ, ನಂತರ ಅವುಗಳನ್ನು ಕಾಲಾನುಕ್ರಮದಲ್ಲಿ ಜೋಡಿಸಿ ವಿಷಯ ಸಂಗ್ರಹಿಸುವುದು. ಹೀಗೆ ಎರಡೂ ವಿಧಾನಗಳಲ್ಲಿ ಮಾಹಿತಿ ಸಂಗ್ರಹಿಸುವ ಕಾರ್ಯವನ್ನು ಮಾಡಿ ಅವುಗಳ ತಳಹದಿಯ ಮೇಲೆ ಮುಂದಿನ ಅಧ್ಯಾಯಗಳನ್ನು ರೂಪಿಸಲಾಗಿದೆ.

## ಕೊನೆಯ ಟಿಪ್ಪಣಿಗಳು

1. "ನಾಸೀದಸ್ತಿಭವಿಷ್ಯತಿ ಕ್ಷಿತಿತಲೇ ಕಲ್ಯಾಣ ಕಲ್ಪಂಪುರಂ!" ಉದ್ಧರಿತ. ಡಾ.ಜೆ.ಎಂ. ನಾಗಯ್ಯ ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ. ಪು.3.

2. ಡಾ. ಎಂ. ಪ್ರಸನ್ನಕುಮಾರ. ಮೈಸೂರಿನ ಇತಿಹಾಸದಲ್ಲಿ 'ದಾನ' ಮುನ್ನುಡಿಯಿಂದ.

3. ಇದುವರೆಗೂ ಕಲ್ಯಾಣ ಚಾಲುಕ್ಯರ ಶಾಸನಗಳ ಬಗೆಗೆ ನಿಖರವಾದ ಅಂಕಿ ಸಂಖ್ಯೆ ದೊರೆತಿಲ್ಲ. ಇನ್ನೂ ಹಲವಾರು ಸಂಶೋಧನಾ ಪ್ರಬಂಧಗಳಲ್ಲಿ ಪ್ರಕಟವಾಗುತ್ತಲೇ ಇವೆ. ಪ್ರಸ್ತುತ ಡಾ. ಜೆ.ಎಂ. ನಾಗಯ್ಯ ಅವರು ಮೈಸೂರು ವಿಶ್ವವಿದ್ಯಾಲಯದ ಕುವೆಂಪು ಅಧ್ಯಯನ ಸಂಸ್ಥೆಯಿಂದ ಕಲ್ಯಾಣ ಚಾಲುಕ್ಯರ ಶಾಸನಗಳನ್ನು ಒಂದೆಡೆ ತರುತ್ತಿದ್ದಾರೆ. ಈಗಾಗಲೇ ಮೊದಲ ಸಂಪುಟ ಪ್ರಕಟವಾಗಿದೆ. ಅವರನ್ನು ಸಂದರ್ಶಿಸಿದಾಗ ಎರಡು ಸಾವಿರಕ್ಕೂ ಹೆಚ್ಚು ಶಾಸನಗಳು ಲಭ್ಯವಿವೆ ಎಂಬ ಸಾಮಾನ್ಯ ಮಾಹಿತಿ ದೊರೆತಿದೆ. ಶಾಸನಗಳ ಸಂಖ್ಯೆ ಎರಡು ಸಾವಿರಕ್ಕೆ ಕಡಿಮೆಯಾಗಲಾರದು.

♦ ♦ ♦ ♦

ಅಧ್ಯಾಯ – ಎರಡು

# ದಾನದ ಅರ್ಥ, ಸ್ವರೂಪ ಮತ್ತು ಇತಿಹಾಸ

೨.೧ ದಾನದ ಅರ್ಥ

೨.೨ ದತ್ತಿಯ ಅರ್ಥ

೨.೩ ದಾನ ಮತ್ತು ಧರ್ಮ

೨.೪ ದಾನದ ಮೂರು ಪ್ರಮುಖ ಅಂಶಗಳು

೨.೫ ಭಾರತದ ಪರಂಪರೆಯಲ್ಲಿ ದಾನ –ದಾನದ ಪ್ರಾಚೀನತೆ

೨.೬ ಭಾರತೀಯ ಪರಂಪರೆಯಲ್ಲಿ ದಾನದ ಮಹತ್ವ

೨.೭ ದಾನದ ಪ್ರಕಾರಗಳು

# ಅಧ್ಯಾಯ – ಎರಡು

# ದಾನದ ಅರ್ಥ, ಸ್ವರೂಪ ಮತ್ತು ಇತಿಹಾಸ

ಭಾರತೀಯ ಚರಿತ್ರೆಯಲ್ಲಿ 'ದಾನ' ಎಂಬ ಪದಕ್ಕೆ ತುಂಬಾ ಮಹತ್ವವಿದೆ. ಸಂಪ್ರದಾಯಶೀಲ ಹಿಂದೂಗಳ ಜೀವನದಲ್ಲಿ ಧ್ಯೇಯಗಳ ಸಾಧನೆಗೆ ದಾನದ ಪರಿಕಲ್ಪನೆಯನ್ನು ಒಂದು ಸಾಧನವಾಗಿ ಬಳಸಲಾಗಿದೆ. ಹಿಂದೂ ಸಂಪ್ರದಾಯದ ಪುರಾತನ ಸಾಹಿತ್ಯದಲ್ಲಿ ದಾನದ ಮಹತ್ವವನ್ನು ಅನನ್ಯವಾಗಿ ವರ್ಣಿಸಲಾಗಿದೆ. ದಾನವು ನಮ್ಮ ಧರ್ಮಾಚರಣೆಯ ಪ್ರಧಾನವಾದ ವಿಧಿ ಅಥವಾ ಅಂಗ ಎಂದು ಚಿರಪರಿಚಿತ. "ಮಾನವ ಈ ಭೂಮಿಗೆ ಬರುವಾಗ ಏನನ್ನೂ ತರಲಾರ; ಹೋಗುವಾಗಲೂ ಏನನ್ನೂ ಒಯ್ಯಲಾರ. ಮರಣ ಸಮಯದಲ್ಲಿ ಅವನೊಂದಿಗೆ ಯಾವುದೂ ಬಾರದು; ಸಂಪಾದಿಸಿದ ದುಡ್ಡೆಲ್ಲ ಭೂಮಿಯೊಳಗೆ ಇಲ್ಲವೆ ಪೆಟ್ಟಿಗೆಯೊಳಗೆ ಬಿದ್ದಿರುತ್ತದೆ; ದನಕರುಗಳು ಹಕ್ಕೆಯಲ್ಲಿ ನಿಂತಿರುತ್ತವೆ; ಹೆಂಡತಿಯು ಮನೆಯ ಬಾಗಿಲ ತನಕ; ಆಪ್ತೇಷ್ಟರು ಸ್ಮಶಾನದ ತನಕ. ಶರೀರವಾದರೋ ಚಿತೆಯ ಮೇಲೆ; ಆದರೆ ಜೀವಾತ್ಮನು ಒಬ್ಬನೇ ಪರಲೋಕಕ್ಕೆ ಹೋಗುವವನಿದ್ದು, ಅವನ ಜತೆಗೆ ಕರ್ಮವೊಂದು ಮಾತ್ರ (ಸತ್ಕರ್ಮವೇ ಇರಲಿ, ದುಷ್ಕರ್ಮವೇ ಇರಲಿ) ಹೋಗುತ್ತದೆ". ಎಂಬುದು ಭಾರತೀಯ ಜನಮಾನಸದಲ್ಲಿ ಅಡಗಿರುವ ವಿಚಾರ. ಇದು ನಮಗೂ ಮತ್ತು ನಮ್ಮ ಕರ್ಮಕ್ಕೂ ಬಿಡಿಸಲಾಗದ ಸಾಂಗತ್ಯ. ಇಲ್ಲಿ 'ಪಡೆದುದನ್ನು ಇಲ್ಲಿಯೇ ಬಿಟ್ಟು ಹೋಗಬೇಕಾದಾಗ ಅದು ಸತ್ಕಾರ್ಯಕ್ಕೆ, ಸಕಾಲದಲ್ಲಿ ಸದುಪಯೋಗವಾಗಲಿ' ಎಂದು ಎಲ್ಲ ಧರ್ಮಗ್ರಂಥಗಳೂ ಹೇಳುತ್ತವೆ. ಮತ್ತು 'ದಾನ'ದ ಮಾರ್ಗವನ್ನು ತೋರುತ್ತವೆ.

ದಾನದ ಕುರಿತು ಇದುವರೆಗೆ ನಡೆದ ಅಧ್ಯಯನಗಳು ತೀರ ವಿರಳ. ಆದರೆ, ದಾನದ ಮಹತ್ವವನ್ನು ಬಿಂಬಿಸುವ ಕಾವ್ಯಗಳು, ಪುರಾಣಗಳು, ಕಥೆಗಳು, ಪ್ರಸಂಗಗಳು ಸಾಕಷ್ಟು. ಪುರಾತನ ಸಾಹಿತ್ಯವಾದ ವೇದ, ಉಪನಿಷತ್ತುಗಳು ಹಾಗೂ ಪುರಾಣ ಮಹಾಕಾವ್ಯಗಳಲ್ಲಿಯೂ 'ದಾನ'ದ ಮಹತ್ವವನ್ನು ಪರಿಪರಿಯಾಗಿ ಹೇಳಲಾಗಿದೆ. ಅವೆಲ್ಲ ಆಕರ ಸಾಮಗ್ರಿಗಳನ್ನು ಬಳಸಿಕೊಂಡು 'ದಾನ' ಎಂದರೇನು ? ದಾನದ ಅರ್ಥ, ಅದರ ಸ್ವರೂಪ, ದಾನದ ಪ್ರಾಚೀನತೆ ಹಾಗೂ ದಾನದ ಮಹತ್ವವನ್ನು ಈ ಅಧ್ಯಾಯದಲ್ಲಿ ವಿವೇಚಿಸಲಾಗಿದೆ.

## ೨.೧ ದಾನದ ಅರ್ಥ

ಶಬ್ದಕೋಶಗಳ ಪ್ರಕಾರ 'ದಾನ' ಎಂದರೆ "ಕೊಡುಗೆ, ಕಾಣಿಕೆ, ಉಪಾಯನ, ಉಡುಗೊರೆ ಎಂದರ್ಥ."[1] ಹಾಗೆಯೇ ದಾನ ಎಂದರೆ "ಸಾಮ, ದಾನ, ಭೇದ, ದಂಡಗಳೆಂಬ

ಚತುರೋಪಾಯಗಳಲ್ಲಿ ಒಂದು." ಇನ್ನೊಂದು ಅರ್ಥದಲ್ಲಿ "ಮದವೇರಿದ ಆನೆಯ ಕುಂಭ ಸ್ಥಳದಿಂದ ಸುರಿಯುವ ಮದಜಲವನ್ನು ದಾನ" ಎನ್ನುತ್ತಾರೆ. ಪವಿತ್ರವಾದ ತೀರ್ಥ ಅಥವಾ ಜಲವನ್ನೂ ಸಹ ದಾನ ಎಂದು ಅರ್ಥೈಸಲಾಗಿದೆ.[2] ಈ ಅಧ್ಯಯನದ ದೃಷ್ಟಿಯಿಂದ ಮೇಲೆ ಹೇಳಿದ ಕೊಡುಗೆ, ಕಾಣಿಕೆ, ಉಪಾಯನ, ಚತುರೋಪಾಯಗಳಲ್ಲಿ ಒಂದು ಎಂಬ ಅರ್ಥಗಳನ್ನು ಸೂಕ್ತ ಎಂದು ಗ್ರಹಿಸಲಾಗಿದೆ.

ಕನ್ನಡದ 'ದಾನ' ಅಥವಾ ಕೊಡುಗೆ, ಕಾಣಿಕೆ ಎಂಬ ಪದಗಳಿಗೆ ಆಂಗ್ಲಭಾಷೆಯಲ್ಲಿ "Gift" ಎಂಬ ಪದವನ್ನು ಸಂವಾದಿಯಾಗಿ ಬಳಲಾಗಿದೆ. ಆಂಗ್ಲ ವಿಶ್ವಕೋಶದಲ್ಲಿ "Gift" ಎಂಬ ಪದವನ್ನು ಸ್ವಯಂ ಪ್ರೇರಿತನಾಗಿ ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಗೆ ನಿರಪೇಕ್ಷಭಾವನೆಯಿಂದ ತನ್ನಲ್ಲಿರುವ ಏನಾದರೊಂದನ್ನು ವರ್ಗಾಯಿಸುವದನ್ನು ಇಲ್ಲವೆ ಕೊಡುವುದನ್ನು 'ದಾನ' ಅಥವಾ 'ಕೊಡುಗೆ' ಎಂದು ಅರ್ಥೈಸಲಾಗಿದೆ.[3]

"That which is given something voluntarily bestowed without expectation of return;"[4] ಅಂದರೆ ಯಾವುದೇ ಒಂದು ವಸ್ತುವನ್ನು ಸ್ವಯಂ ಪ್ರೇರಿತವಾಗಿ ನೀಡಿ, ಅದರ ಪ್ರತಿಯಾಗಿ ಏನನ್ನೂ ಬಯಸದೇ ನೀಡುವಂಥದ್ದೇ ದಾನ. ಕೊಡುಗೆ ಎಂಬುದು ಸ್ವಯಂ ಪ್ರೇರಿತವಾಗಿದ್ದು ಪುನಃ ಏನನ್ನು ಬಯಸದಂತಿದ್ದರೆ, ಅದು ದಾನ ಎನಿಸುತ್ತದೆ.

ದಾನ ಶಾಸನಗಳ ವಿಷಯವಸ್ತುವನ್ನು ಗಮನಿಸಿದಾಗ ಮೇಲಿನ ಅರ್ಥಗಳು ಧ್ವನಿತವಾಗುತ್ತವೆ. ದಾನ ಶಾಸನಗಳಲ್ಲಿ ವ್ಯಕ್ತಿಗಳು ಇನ್ನೊಬ್ಬ ವ್ಯಕ್ತಿಗೆ ಭೂಮಿ, ಹಣ, ವಿದ್ಯೆ, ವಸ್ತ್ರ ಮುಂತಾದ ರೂಪದಲ್ಲಿ ತಮ್ಮಲ್ಲಿರುವುದನ್ನು ಕೊಡುಗೆಯಾಗಿ ನೀಡಿರುವುದು ತಿಳಿದು ಬರುತ್ತದೆ. ಇನ್ನೂ ಕೆಲವು ಸಂದರ್ಭಗಳಲ್ಲಿ ದಾನವನ್ನು ರಾಜ್ಯಾಡಳಿತ ಸಾಧನವಾಗಿ ಬಳಸಲಾಗಿದೆ. "ಪಗೆಗೇನನಾದೊಡಂ ಕೊಟ್ಟಗಲದೆ ನೆರನಂಟು ಮಾಡಿಕೊಂಬುದು ದಾನಂ" ಎಂದು ಹಮ್ಮೀರದೇವನ ಕಾವ್ಯದಲ್ಲಿ ಉಲ್ಲೇಖವಿದೆ.[5] ಹಾಗಯೇ "ರಾಜ್ಯವನ್ನು ಪುನಃ ಪಡೆಯಲು ಸಾಮ, ದಾನ ಮತ್ತು ಭೇದೋಪಾಯಗಳನ್ನು ಬಳಸಿ ವಿಫಲವಾದ ಮೇಲೆ ಮಾತ್ರ ಯುದ್ಧ ಸನ್ನಾಹವಾಗುತ್ತದೆ"[6] ಎಂಬುದನ್ನು ಹೇಳಲಾಗಿದೆ.

ಗೌತಮನ ಧರ್ಮಸೂತ್ರದ ಪ್ರಕಾರ, ದಾನವು ಪಾಪಗಳನ್ನು ಪರಿಹರಿಸುವ ಮತ್ತು ಪ್ರಾಯಶ್ಚಿತ್ತ ಮಾಡಿಕೊಳ್ಳುವ ಒಂದು ಮಾರ್ಗ. "ಜಪ, ತಪಸ್, ಹೋಮ, ಉಪವಾಸ, ದಾನ, ಇವೇ ಆ ಪ್ರಾಯಶ್ಚಿತ್ತದ ಮಾರ್ಗಗಳು"[7]ಎಂದು ಹೇಳಲಾಗಿದೆ.

ಜೈನಧರ್ಮದ ಪ್ರಕಾರ 'ದಾನ' ಎಂಬುದು "ಪ್ರತಿಯೊಬ್ಬ ಶ್ರಾವಕನೂ ಮಾಡಬೇಕಾದ ಒಂದು ವ್ರತವಾಗಿದೆ."[8] ಹಿಂದೂಗಳ ಪ್ರಕಾರ "ಮೋಕ್ಷ ಸಂಪಾದನೆಯ ಮಾರ್ಗವನ್ನಾಗಿ ದಾನವನ್ನು ಹೇಳಲಾಗಿದೆ. 'ದಾನ ಮಾಡಿದವನಿಗೆ ಸ್ವರ್ಗವು, ಅದನ್ನು ಪಾಲಿಸಿದವನಿಗೆ ಅಕ್ಷಯ ಪದವು ಲಭಿಸುತ್ತದೆ' ಎಂಬುದು ಶಾಸನದಲ್ಲಿ ಉಲ್ಲೇಖವಾಗಿದೆ.[9] ಭಗವದ್ಗೀತೆಯಲ್ಲಿ

ದಾನವನ್ನು "ಗೃಹಸ್ಥನ ಮೋಕ್ಷ ಸಾಧನೆಯ ಉಪಕರಣ"ವೆಂದು ಹೇಳಲಾಗಿದೆ.[10] 'ದಾನ' ಎಂದರೆ ಭಿಕ್ಷೆಯಲ್ಲ "ಭೀ ಕ್ಷಾಲಯತಿ ಇತಿ ಭಿಕ್ಷಾ" ನಿರ್ಭಯರಾಗಿ ಬದುಕನ್ನು ಸಾಗಿಸುವುದೇ ಭಿಕ್ಷಾ. ರೂಢಿಯಲ್ಲಿ ಬೇಡಿ, ಉಂಡು, ಬದುಕುವುದಕ್ಕೆ 'ಭಿಕ್ಷೆ' ಎನ್ನುತ್ತಾರೆ. ಆದರೆ ದಾನವು ಬೇಡಿ ಪಡೆಯುವುದಲ್ಲ. ದಾನದಲ್ಲಿ ಸ್ವಯಂ ಪ್ರೇರಿತವಾಗಿ ನೀಡುವ ಗುಣವಿರುತ್ತದೆ.[11]

'ದಾನ' ಎಂಬುದು ಚತುರೋಪಾಯಗಳಲ್ಲಿ ಒಂದು. ಸಾಮ, ದಾನ, ಭೇದ, ದಂಡ ಇವೇ ಆ ಚತುರೋಪಾಯಗಳು. ಇದನ್ನು ಕಿಟೆಲ್ ಶಬ್ದಕೋಶದಲ್ಲಿ "ಕೊಟ್ಟು ಕೊಳ್ವುದು ದಾನಮೆನಿಸಿಕ್ಕು, ವೈರಮಂ ಪುಟ್ಟಿಸಲು ಭೇದಮೆನಿಸಿಕ್ಕು, ಶಿಕ್ಷಿಸಲೊಡಮ್ಮುಟ್ಟಡೆ ದಣ್ಡಮೆನಿಸಿಕ್ಕು, ಸಯ್ರಣೆಸಾಮಮಕ್ಕು ಇನ್ತಿವು ಆಯ್ಕೆ ಮುಟ್ಟಿ ಚತುರೋಪಾಯಮಕ್ಕು"[12] ಎಂದಿದೆ. ಅಂದರೆ, 'ಕೊಡುವುದು ಮತ್ತು ಪಡೆಯುವುದು ದಾನ ಎನಿಸುತ್ತದೆ; ವೈರವನ್ನು ಹುಟ್ಟಿಸುವುದು ಭೇದ ಎನಿಸುವುದು; ಶಿಕ್ಷಿಸುವುದು ದಂಡ ಎನಿಸಿದರೆ, ಸಹಿಸಿಕೊಳ್ಳುವುದು ಸಾಮವೆನಿಸುವುದು. ಇವು ಚತುರೋಪಾಯಗಳು'. ಇವುಗಳನ್ನು ರಾಜನಾದವನು ಸೂಕ್ತ ವಿವೇಚನೆಯಿಂದ ಬಳಸಬೇಕು ಎಂಬುದು ಸ್ಮೃತಿಕಾರರ ಅಭಿಪ್ರಾಯವೂ ಹೌದು. ರಾಜ್ಯಾಡಳಿತದಲ್ಲಿ ಬಳಸಲ್ಪಡುವ ಚತುರೋಪಾಯಗಳಲ್ಲಿ 'ದಾನ'ವೂ ಒಂದಾಗಿದೆ ಎಂಬುದನ್ನು ತಿಳಿಯಬಹುದು.

ಕಲ್ಯಾಣ ಚಾಲುಕ್ಯ ಚಕ್ರವರ್ತಿ ಮೂರನೆಯ ಸೋಮೇಶ್ವರನ ಪ್ರಕಾರ "ದಾನವು ಸರ್ವಾರ್ಥ ಸಾಧಕವಾಗಿದೆ". ಮಾನಸೋಲ್ಲಾಸದಲ್ಲಿ ಉಕ್ತವಾಗಿರುವಂತೆ "ಭೇದೋಪಾಯದಿಂದ ಸಾಧ್ಯವಾಗದೇ ಇದ್ದುದು ದಾನೋಪಾಯದಿಂದ ಸಿದ್ಧಿಸುತ್ತದೆ. ದಾನಕ್ಕೆ ವಶವಾಗದವನು ಈ ಜಗತ್ತಿನಲ್ಲಿ ಯಾವನೂ ಇಲ್ಲ. ಸರ್ವಸ್ವವನ್ನೂ ದಾನ ಮಾಡುವವರಿಗೆ ದೇವತೆಗಳೂ ವಶರಾಗುತ್ತಾರೆ. ದಾನವು ಶ್ರೇಯಸ್ಕರವು, ಶ್ರೇಷ್ಠವು; ದಾನವು ಸರ್ವಾರ್ಥ ಸಾಧಕವು".[13]

ವೈದಿಕರು, ಸ್ಮೃತಿಕಾರರು, ದಾರ್ಶನಿಕರ ಪ್ರಕಾರ "ದಾನವು ಬ್ರಾಹ್ಮಣರ ನೈತಿಕ, ಸಾರ್ವತ್ರಿಕ ಕರ್ತವ್ಯಗಳಲ್ಲಿ ಒಂದು."[14] ಇದನ್ನು ಶಾಸನಗಳೂ ಪುರಸ್ಕರಿಸುತ್ತವೆ. ಅನೇಕ ಶಾಸನಗಳಲ್ಲಿ 'ಯಜನ-ಯಾಜನ, ಅಧ್ಯಯನ-ಅಧ್ಯಾಪನ, ದಾನ-ಪರಿಗ್ರಹಣ' ಕರ್ತವ್ಯನಿರತ ಬ್ರಾಹ್ಮಣ ಆಚಾರ್ಯರನ್ನು ಹೆಸರಿಸಲಾಗಿದೆ.[15] ಯಾಜ್ಞವಲ್ಕ್ಯನ ಪ್ರಕಾರ "ದಾನ ಮಾನವನ ಒಂಭತ್ತು ಉತ್ತಮ ಗುಣಗಳಲ್ಲಿ ಒಂದು." ಅಹಿಂಸೆ, ನಿಷ್ಕಾಪಟ್ಯ, ಪ್ರಾಮಾಣಿಕತೆ, ಶುಚಿ, ಇಂದ್ರಿಯ ನಿಗ್ರಹ, ದಾನ, ಆತ್ಮಸಂಯಮ, ದಯೆ ಮತ್ತು ಸಹನೆ ಇವೆ ಆ ಒಂಬತ್ತು ಗುಣಗಳು.[16] ಅಹಿಂಸೆ ಮತ್ತು ದಾನಗಳು ಇತರರ ಹಿತಕ್ಕೆ ಸಂಬಂಧಪಟ್ಟ ಅಥವಾ ಪರೋಪಕಾರಕ್ಕೆ ಸಂಬಂಧಪಟ್ಟ ಮಾನವನ ಗುಣಗಳು. ಉಳಿದವು ಸ್ವಶೀಲ ಮತ್ತು ಸ್ವಚಿತ್ತವನ್ನು ಬೆಳೆಸಲು ಅನುಕೂಲವಾದ ಗುಣಗಳು. ಇವುಗಳನ್ನು ಸ್ಥೂಲವಾಗಿ ಆತ್ಮಾರ್ಥ ಮತ್ತು ಪರಾರ್ಥವೆಂದು ವಿಭಜಿಸುತ್ತಾರೆ.

ಬ್ರಹ್ಮಪುರಾಣ "ತಥಾ ಸದ್ವಿನಿಯೋಗಾಯ ವಿಜ್ಞೇಯ ಗಹನಂ ನೃಣಾಂ"[17] ಎಂದು ಒತ್ತಿ ಹೇಳುತ್ತದೆ. ಅಂದರೆ, 'ಐಶ್ವರ್ಯ ಸಂಗ್ರಹದ ಉದ್ದೇಶವೇ ಬಡಬಗ್ಗರಲ್ಲಿ ಉಚಿತವಾಗಿ

ಹಂಚಿಕೆ ಮಾಡುವುದು'. ಇನ್ನೊಂದರ್ಥದಲ್ಲಿ ಹೇಳುವುದಾದರೆ 'ಆರ್ಥಿಕ ಸಾಮರಸ್ಯವನ್ನುಂಟು ಮಾಡಿ ಸಮಾಜದಲ್ಲಿ ಶಾಂತಿ ಸೌಹಾರ್ದತೆಯನ್ನುಂಟು ಮಾಡುವ ವ್ಯವಹಾರಿಕ ನೀತಿಯೇ ದಾನ'.

ಭಾರತೀಯ ವೈದಿಕ ಸಾಹಿತ್ಯದ ಪ್ರಕಾರ ಧರ್ಮ, ಅರ್ಥ, ಕಾಮ, ಮೋಕ್ಷಗಳು ಮಾನವನ ಗುರಿಗಳು. ಇವುಗಳಿಗೆ ಹೊಂದಿಕೊಂಡಂತೆ ಮಾನವ ಜೀವನ ನಾಲ್ಕು ಘಟ್ಟಗಳನ್ನು ದಾಟಬೇಕಾಗುತ್ತದೆ. ಅವುಗಳನ್ನು ಆಶ್ರಮಗಳೆಂದು ಕರೆಯುತ್ತಾರೆ. ಬ್ರಹ್ಮಚರ್ಯ, ಗ್ರಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸ ಆಶ್ರಮಗಳು ಜೀವನದ ನಾಲ್ಕು ಘಟ್ಟಗಳು. ಮಾನವನ ಪರಮೋಚ್ಛ ಗುರಿಯಾದ ಮೋಕ್ಷ ಸಂಪಾದನೆಯನ್ನು ಅಂತಿಮವಾಗಿ ತಲುಪಲು ಇರುವ ಕೆಲವು ಮಾರ್ಗಗಳಲ್ಲಿ ದಾನವೂ ಮಾರ್ಗವಾಗಿದೆ. ಅಂದರೆ ಪಾಪ-ಪುಣ್ಯ, ಜನನ-ಮರಣಗಳ ಸಂಕೋಲೆಯಿಂದ ಮುಕ್ತನಾಗಲು ದಾನವು ಸಾಧನವಾಗಿದೆ.[18]

ಸೋಮದೇವ ಸೂರಿ ಕಲ್ಯಾಣ ಚಾಲುಕ್ಯರ ಸಮಕಾಲೀನ. ಈತ ಕೌಟಿಲ್ಯನ ಅರ್ಥಶಾಸ್ತ್ರವನ್ನು ಕನ್ನಡದಲ್ಲಿ ಅರ್ಥ ಸಹಿತವಾಗಿ 'ನೀತಿ ವಾಕ್ಯಾಮೃತ' ಕೃತಿಯಲ್ಲಿ ಸಂಗ್ರಹಿಸಿದ್ದಾನೆ.[19] ಇಲ್ಲಿ ಅವನು ಹೇಳುವಂತೆ 'ತನ್ನಂತೆಯೇ ಇತರರಿಗೂ ಒಳ್ಳೆಯದಾಗಬೇಕೆಂದು ಬಯಸುವುದು, ಯಥಾಶಕ್ತಿ ದಾನ ಮತ್ತು ತಪಸ್ಸನ್ನು ಮಾಡುವುದು ಇವು ಧರ್ಮವನ್ನು ಪಡೆಯುವ ಉಪಾಯಗಳು (ಪು-೩). ಸೋಮದೇವ ಸೂರಿಯ ನೀತಿವಾಕ್ಯಾಮೃತದ ಪ್ರಕಾರ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಶೂದ್ರರ ಕರ್ತವ್ಯಗಳಲ್ಲಿ ದಾನಕ್ಕೆ ಪ್ರಾಶಸ್ತ್ಯವಿದೆ. ಕೆಲವರದು ದಾನ ಸ್ವೀಕರಿಸುವ ಕರ್ತವ್ಯವಾದರೆ, ಇನ್ನು ಕೆಲವರದು ದಾನ ನೀಡುವ ಕರ್ತವ್ಯವಾಗಿದೆ. ಅವನ ಮಾತುಗಳಲ್ಲೇ ಹೇಳುವುದಾದರೆ – "ಸ್ವಾಧ್ಯಾಯ, ಯಜ್ಞ ಮಾಡುವುದು, ದಾನ ಇವು ವೈಶ್ಯರ ಸಾಧಾರಣ ಧರ್ಮ" (ಪು-೫೮), ಅಧ್ಯಾಪನ (ಓದಿಸುವುದು) ಯಾಜನ (ಯಜ್ಞ) ಪ್ರತಿಗ್ರಹ (ದಾನ ತೆಗೆದುಕೊಳ್ಳುವುದು) ಇವು ಬ್ರಾಹ್ಮಣರ ಕರ್ತವ್ಯಗಳು (ಪು-೫೯). ಜೀವಿಗಳ ಸಂರಕ್ಷಣೆ, ಆಯುಧಗಳನ್ನು ಜೀವನೋಪಾದಿಯಾಗಿ ಮಾಡಿಕೊಳ್ಳುವುದು, ಸತ್ಪುರುಷೋಪಕಾರ, ಯುದ್ಧ ರಂಗದಿಂದ ಹಿಮ್ಮೆಟ್ಟದಿರುವುದು, ಬಡವರ ಕಷ್ಟ ನಿವಾರಣೆ ಇವು ಕ್ಷತ್ರಿಯರ ಧರ್ಮಗಳು (ಪುಟ-೫೯). ಕೃಷಿ ವಾಣಿಜ್ಯಾದಿ ವ್ಯವಹಾರದಿಂದ ಜೀವಿಸುವುದು. ಅತಿಥಿ ಅಭ್ಯಾಗತರನ್ನು ಪೂಜಿಸುವುದು, ಸತ್ರ, ಅರವಟ್ಟಿಗೆ, ಪುಣ್ಯಾರಾಮಗಳು, ಬಾವಿ, ಕೆರೆ ಮೊದಲಾದವುಗಳನ್ನು ತೋಡಿಸುವುದು ವೈಶ್ಯರ ಧರ್ಮಗಳು (ಪು-೫೯). ಮೂರು ವರ್ಣದವರ ಸೇವೆ, ಶಿಲ್ಪ ಮೊದಲಾದ ಕೆಲಸಗಳನ್ನು ನಡೆಸುವದು ಶೂದ್ರರ ಧರ್ಮ (ಪು. ೬೦). ಹೀಗೆ ಸೋಮದೇವ ಸೂರಿ ನಾಲ್ಕು ವರ್ಣದವರ ಕರ್ತವ್ಯಗಳನ್ನು ಹೇಳಿದ್ದಾನೆ. ಮೇಲಿನ ಮೂರು ವರ್ಣದವರ ಕರ್ತವ್ಯಗಳಲ್ಲಿ ದಾನವೂ ಒಂದಾಗಿದೆ. ಅದರಲ್ಲೂ ಕೃಷಿ, ವಾಣಿಜ್ಯ, ವ್ಯವಹಾರ ದಂತ ಉತ್ಪಾದಕ ಚಟುವಟಿಕೆಗಳಲ್ಲಿ ತೊಡಗಿದ್ದ ವೈಶ್ಯರ ಕರ್ತವ್ಯಗಳಲ್ಲಿ ದಾನ ಮಾಡುವುದು ಪ್ರಮುಖವಾಗಿದೆ. 'ದಾನಾದಿಗಳೆನ್ನದಂ ವೈಶ್ಯನಲ್ಲ' ಎಂದು ನೀತಿ ವಾಕ್ಯಾಮೃತದಲ್ಲಿ ಉಕ್ತವಾಗಿದೆ. (ಪು.೬೦)

ಉಮಾಸ್ವಾತಿಯ ಪ್ರಕಾರ "ಅನುಗ್ರಾಹಾರ್ಥ ಸ್ವಸ್ವಾತಿ ಸರ್ಗೋದಾನಂ"[20] ಅಂದರೆ, ಅನುಗ್ರಹಾರ್ಥವಾಗಿ ಸ್ವಯಂ ಸ್ಫೂರ್ತಿಯಿಂದ ನೀಡುವುದೇ ದಾನವಾಗಿದೆ.

'ತತ್ವರತ್ನ ಪ್ರದೀಪಿಕೆ' ಕೃತಿಯ ಕರ್ತೃ ಬಾಲಚಂದ್ರಮ ಕೊಡುವವನು ತನಗೆ ಪುಣ್ಯ ಸಂಚಯವು ಪಡೆಯುವವನಿಗೆ ಸಮ್ಯಗ್ ಜ್ಞಾನಾದಿ ವೃದ್ಧಿಯೂ ಆಗುವುದಕ್ಕೆಂದು ದ್ರವ್ಯವನ್ನು ಕೊಡಬೇಕು ಇದೇ ದಾನ"[21] ಎಂದಿದ್ದಾನೆ.

ಸುಮಂತ ಭದ್ರಾಚಾರ್ಯರು ದಾನದ ಕುರಿತು ವಿಭಿನ್ನ ವ್ಯಾಖ್ಯೆ ನೀಡಿದ್ದಾರೆ. ಅವರ ಪ್ರಕಾರ "ಏಳು ಗುಣಗಳಿಂದ ಕೂಡಿದ ಶುದ್ಧ ಶ್ರಾವಕನು ಪಂಚಸೂನ ಮತ್ತು ಆರಂಭಗಳಿಲ್ಲದಂಥ ಮುನಿಗೆ ನವಧಾ ಭಕ್ತಿಯಿಂದ ಆದರ, ಸತ್ಕಾರ, ಗೌರವಗಳನ್ನು ಮಾಡುವುದಕ್ಕೆ ದಾನವೆಂದು ಹೇಳುವರು."[22] ಈ ವ್ಯಾಖ್ಯೆಯಲ್ಲಿ ಹೇಳಿರುವ ಏಳುಗುಣಗಳು, ಪಂಚಸೂನಗಳು, ನವಧಾಭಕ್ತಿ ಇವು ಗಮನಸೆಳೆಯುತ್ತವೆ. ಏಳು ಗುಣಗಳೆಂದರೆ – ಶ್ರದ್ಧಾ, ತುಷ್ಟಿ, ಭಕ್ತಿ, ವಿಜ್ಞಾನ, ಅಲುಬ್ಧತಾ, ಕ್ಷಮೆ ಮತ್ತು ಶಕ್ತಿ ಪಂಚಸೂನಗಳೆಂದರೆ – ಖಂಡನೀ, ಪೇಷಣಿ(ಬೀಸುವುದು), ಚುಲ್ಲಾ(ಕುದಿಸುವುದು), ಉದಕುಂಬಿ(ನೀರುತುಂಬಿಸುವುದು), ಪ್ರಮಾರ್ಜಿನಿ(ಕಸಹೊಡೆಯುವುದು). ನವಧಾಭಕ್ತಿ ಎಂದರೆ – ಪ್ರತಿಗ್ರಹಣ (ಸಂಗ್ರಹ), ಉಚ್ಚಾಸನ, ಪಾದ, ಪ್ರಕ್ಷಾಲನ, ನಮಸ್ಕಾರ, ಸ್ತವನ, ಮನಶುದ್ಧಿ, ವಚನಶುದ್ಧಿ ಮತ್ತು ಭೋಜನಶುದ್ಧಿ. ಏಳು ಗುಣಗಳುಳ್ಳ ಶ್ರಾವಕನು ಮಾತ್ರ ದಾನ ನೀಡಲು ಯೋಗ್ಯ. ಈ ಏಳು ಗುಣಗಳು ದಾನಿಗಿರಬೇಕಾದ ಅರ್ಹತೆಗಳು ಮತ್ತು ದಾನ ನೀಡುವಾಗ ಅವನಲ್ಲಿ ನಾನು ಕೊಡುತ್ತಿದ್ದೇನೆಂಬ ಅಹಂ ಇರದೇ ನವ ವಿಧದ ಭಕ್ತಿ ಇರಬೇಕು. ದಾನ ಸ್ವೀಕರಿಸುವ ಅಥವಾ ಪ್ರತಿಗ್ರಹಿಗೂ ಅರ್ಹತೆಗಳಿರುತ್ತವೆ. ಐದು ವಿಧದ ಕಾರ್ಯಗಳಿಂದ (ಪಂಚಸೂನ) ಮುಕ್ತನಾದ ಮುನಿಗಳಿಗೆ ಮಾತ್ರ ದಾನ ನೀಡಬೇಕೆಂಬುದು ಸುಮಂತ ಭದ್ರಾಚಾರ್ಯರ ನಿಲುವು.

ಒಟ್ಟಾರೆಯಾಗಿ ಹೇಳುವುದಾದರೆ 'ದಾನ' ಎಂಬುದು ಕೇವಲ ಬ್ರಾಹ್ಮಣರಿಗೊ, ಪುರೋಹಿತರಿಗೊ ಕಾಣಿಕೆಗಳನ್ನು ಕೊಡುವುದಷ್ಟೇ ಅಲ್ಲ. ಅದೊಂದು ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಚಟುವಟಿಕೆ–ಗಳಿಗೆ ಸಾಧನವೂ ಆಗಿದೆ. ವಿಶಾಲ ಅರ್ಥದಲ್ಲಿ ಸಸ್ಯಗಳನ್ನು ನೆಡುವುದು, ಮಹಾಮಾರ್ಗಗಳನ್ನು ರಚಿಸುವುದು, ಬಾವಿಗಳನ್ನು ತೋಡಿಸುವುದು, ಕೆರೆಗಳನ್ನು ಕಟ್ಟಿಸುವುದು, ವಿಶ್ರಾಂತಿ ಗೃಹಗಳನ್ನು ಕಟ್ಟಿಸುವುದು, ಸಕಲ ಪ್ರಾಣಿಗಳೂ ಮಾನವರೂ ಪಾಲ್ಗೊಳ್ಳಬಹುದಾದ ಕಾರ್ಯಗಳನ್ನು ನಡೆಸುವುದು ಮುಂತಾದ ಹಲವು ಔದಾರ್ಯಗಳನ್ನು ಸುತ್ತೆಲ್ಲ ಹರಡುವುದು ದಾನ ಎನಿಸುತ್ತದೆ.

## ೨.೨ ದತ್ತಿಯ ಅರ್ಥ

'ದತ್ತಿ' ಎಂಬ ಪದಕ್ಕೆ ಶಬ್ದಶಃ ಅರ್ಥ ದಾನವಾಗಿ ಕೊಟ್ಟ ಭೂಮಿ ಅಥವಾ ದಾನವಾಗಿ ಕೊಟ್ಟ ಹಣ ಇಲ್ಲವೆ ಕೊಡುಗೆ ಎಂದಾಗುತ್ತದೆ.[23] 'ದಾನ' ಮತ್ತು 'ದತ್ತಿ' ಈ

ಎರಡೂ ಪದಗಳನ್ನು ಜೋಡುನುಡಿಯಂತೆ ಬಳಕೆ ಮಾಡವುದು ಸಾಮಾನ್ಯವಾಗಿದೆ. ದತ್ತಿಯಲ್ಲಿ ದಯಾದತ್ತಿ, ಪಾತ್ರದತ್ತಿ, ಸಮದತ್ತಿ, ಸಕಲ ದತ್ತಿ ಎಂಬ ನಾಲ್ಕು ಪ್ರಕಾರಗಳಿವೆ.[24] ಶಾಸನಗಳಲ್ಲಿ 'ಪರಮೇಶ್ವರ ದತ್ತಿ'ಯಾಗಿ ಭೂಮಿಯನ್ನು, ಹಣವನ್ನು ಕೊಟ್ಟ ಉಲ್ಲೇಖಗಳಿವೆ.[25] ಇಲ್ಲಿ ದಾನ ಎಂಬ ಪದಕ್ಕೆ ಬದಲಾಗಿ ದತ್ತಿ ಎಂಬ ಪದವನ್ನು ಬಳಸಿರುವುದು ತಿಳಿದುಬರುತ್ತದೆ. ಅದೇ ರೀತಿ 'ರಾಜದತ್ತಿ'ಯಾಗಿ ಭೂಮಿ, ಹಣ, ಅಗ್ರಹಾರಗಳನ್ನು ಕೊಟ್ಟ ಉಲ್ಲೇಖಗಳಿವೆ.[26] ಇದೂ ಸಹ ದಾನಕ್ಕೆ ಸಮಾನಾರ್ಥವನ್ನು ಕೊಡುತ್ತದೆ.

ಇಜ್ಯೆ, ವಾರ್ತೆ, ದತ್ತಿ, ಸ್ವಾಧ್ಯಾಯ, ಸಂಯಮ, ತಪ ಎಂಬ ಷಟ್ಕರ್ಮಗಳಲ್ಲಿ ದತ್ತಿಯೂ ಒಂದಾಗಿದೆ. ಬ್ರಾಹ್ಮಣರ ಷಟ್ಕರ್ಮಗಳಲ್ಲಿ ದಾನವೂ ಒಂದಾಗಿರುವದನ್ನು ಈ ಹಿಂದೆ ತಿಳಿದಿದ್ದೇವೆ. ದತ್ತಿ ಪದವನ್ನು ದಾನಕ್ಕೆ ಸಮಾನವಾಗಿ ಬಳಸಲಾಗಿದೆ. 'ದತ್ತ', 'ದತ್ತಕ' ಎಂಬ ಪದಗಳು ಕೊಟ್ಟ ಮತ್ತು ಸ್ವೀಕರಿಸಿದ ಬಗೆಗಿನ ಅರ್ಥವನ್ನು ಕೊಡುತ್ತವೆ. ಹೀಗೆ ನೋಡಿದಾಗ ದಾನ ಮತ್ತು ದತ್ತಿ ಪದಗಳಿಗೆ ವ್ಯತ್ಯಾಸವಿಲ್ಲ. ಈ ಅಧ್ಯಯನದಲ್ಲಿ ದಾನ ಮತ್ತು ದತ್ತಿ ಎಂಬ ಈ ಎರಡೂ ಪದಗಳನ್ನು ಜೋಡುನುಡಿಗಳಂತೆ ಬಳಸಲಾಗಿದೆ.

## ೨.೩ ದಾನ ಮತ್ತು ಧರ್ಮ

ದಾನ ಮತ್ತು 'ಧರ್ಮ' ಎಂಬ ಪದಗಳು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಹಲವು ಬಾರಿ 'ದಾನ' ಎಂಬುದರ ಬದಲಾಗಿ 'ಧರ್ಮ' ಎಂಬ ಪದವನ್ನು ಬಳಸಲಾಗಿದೆ. 'ದಾನ ಮಾಡಿದರು' ಎಂಬುದಕ್ಕೆ 'ಧರ್ಮ ಮಾಡಿದರು' ಎಂದು ಹೇಳುವ ವಾಡಿಕೆಯಿದೆ. ಈ ಧರ್ಮದ ಕುರಿತು ಶ್ರೀನಿವಾಸ ರಿತ್ತಿಯವರು ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾಕೋಶದಲ್ಲಿ ಧರ್ಮವನ್ನು 'ಧಾರ್ಮಿಕ ಉಂಬಳಿಯನ್ನು ಅನುಭವಿಸುವ ವಿಷಯದಲ್ಲಿ ಮಾಡಿದ ನಿಬಂಧನೆ' ಎಂದು ಅರ್ಥೈಸಿದ್ದಾರೆ(ಪು.೧೧೫).

ಚಾಲುಕ್ಯರ ಅನೇಕ ಶಾಸನಗಳಲ್ಲಿ ಅರಸರು ನೀಡಿದ ದಾನವನ್ನು 'ಧರ್ಮ' ಎಂಬರ್ಥದಲ್ಲಿ ಹೇಳಲಾಗಿದೆ. ದಾನ ನೀಡಿದ ವಿವರವನ್ನು ಹೇಳಿದ ಮೇಲೆ "ಧರ್ಮ್ಮಂ ಪ್ರತಿಪಾಳಿಸಿದವರ್ಗೆ ವಾರಣಾಸಿ ಕುರುಕ್ಷೇತ್ರ ಪ್ರಯಾಗೆಯೊಳು ಸಾವಿರ ಬ್ರಾಹ್ಮರಳಿದ ಪಾತಕ ಒದಗುತ್ತದೆ ಎಂದು ಶಾಪಾಶ್ರಯ ನೀಡಲಾಗಿದೆ.[27] ದಾನದ ವಿಷಯವನ್ನು ಶಾಸನಗಳಲ್ಲಿ ಉಲ್ಲೇಖಿಸಿದ ನಂತರ, ದಾನ–ದತ್ತಿ ಬಿಟ್ಟಿರುವುದನ್ನೇ 'ಧರ್ಮ' ಎಂದು ಕರೆದಿರುವುದನ್ನು ಕಾಣಬಹುದಾಗಿದೆ.

'ಧರ್ಮ' ಎಂಬ ಪದವು ಸಂಸ್ಕೃತದ 'ಧೃ' ಎಂಬ ಮೂಲ ಪದದಿಂದ ಬಂದಿದೆ. 'ಧೃ' ಎಂದರೆ 'ಎತ್ತಿ ಹಿಡಿಯುವುದು', 'ಆಸರೆಯಾಗಿರುವುದು', 'ಪೋಷಿಸುವುದು' ಎಂದರ್ಥ.[28] 'ಧರ್ಮ' ಎಂಬ ಪದಕ್ಕಿರುವ ಅರ್ಥಗಳು ದಾನ–ದತ್ತಿಗಳ ಮೂಲಕ ದಾನ ಪಡೆದವರನ್ನು ಎತ್ತಿ ಹಿಡಿಯುವುದು, ಆಸರೆಯಾಗಿರುವುದು, ಅವರನ್ನು ಪೋಷಿಸುವುದನ್ನು ಸೂಚಿಸುತ್ತದೆ.

ಧರ್ಮದ ಮೂರು ಕೊಂಬೆಗಳಲ್ಲಿ ದಾನವೂ ಒಂದು. 'ಧರ್ಮ' ಪದವು 'ದಾನ ಪದಕ್ಕಿಂತಲೂ ವಿಶಾಲ ಅರ್ಥವನ್ನು ಹೊಂದಿದ್ದು, ಇದನ್ನು ಕುರಿತು ಛಾಂದೋಗ್ಯ ಉಪನಿಷತ್ತಿನಲ್ಲಿ ಹೀಗೆ ಹೇಳಲಾಗಿದೆ.

**"ತ್ರಯೋ ಧರ್ಮಸ್ಕಂದಾ ಯಜ್ಞೋಧ್ಯಯನಂ ದಾನ ಮಿತಿ**
**ಪ್ರಥಮ ಸ್ತಪ ಏವೇತಿ ದ್ವಿತೀಯೋ ಬ್ರಹ್ಮಚರ್ಯಾ ಕುಲವಾಸೀ**
**ತ್ರತಿಯೋತ್ಯಂತ ಮಾತ್ಮಾನಮಾಚಾರ್ಯ ಕುಲೊವ ಸಾದಯನ್"**[29]

ಅಂದರೆ, 'ಧರ್ಮಕ್ಕೆ ಮೂರು ಕೊಂಬೆಗಳು. ಮೊದಲನೆಯದು ಯಜ್ಞ; ಎರಡನೆಯದು ಅಧ್ಯಯನ ಮತ್ತು ದಾನಗಳನ್ನು ಒಳಗೊಂಡಿರುವ ತಪಸ್ಸು; ಮೂರನೆಯದು ಬ್ರಹ್ಮಚಾರಿಯು ಕುಲದಲ್ಲಿ ಮತ್ತು ಕಡೆಯವರೆಗೂ ಗುರುವಿನ ಕುಟುಂಬಕ್ಕೆ ಸೇರಿ ವಾಸಿಸುವುದು.' ಈ ಅರ್ಥದಲ್ಲಿ ವಿಶ್ಲೇಷಿಸಿದರೆ ಧರ್ಮದಲ್ಲಿ ಬೇರೆ ಬೇರೆ ಆಶ್ರಮ ಕರ್ತವ್ಯಗಳು ಗೋಚರಿಸುತ್ತವೆ. 'ದಾನ' ಎನ್ನುವುದು ಧರ್ಮದ ಒಂದು ಭಾಗವಾಗಿದೆ. ಪ್ರತಿಯೊಬ್ಬ ಧರ್ಮಿಯೂ ಬ್ರಹ್ಮನಲ್ಲಿ ಸ್ಥಿರವಾಗಿ ನೆಲೆಸಿ ಅಮೃತತ್ವವನ್ನು ಪಡೆಯಬೇಕಾದರೆ; ತನ್ನಲ್ಲಿರುವುದನ್ನು ದಾನ ನೀಡಬೇಕು.

ಇನ್ನೂ ಕೆಲವು ಸಂದರ್ಭಗಳಲ್ಲಿ; 'ಧರ್ಮ' ಪದವನ್ನು 'ಕರ್ತವ್ಯ' ಎಂಬ ಪದಕ್ಕೆ ಹೊಂದಿಕೆಯಾಗುವಂತೆ ಬಳಸಲಾಗಿದೆ. ಇದನ್ನೇ ಮನು ವರ್ಣಧರ್ಮ, ಆಶ್ರಮಧರ್ಮ, ವರ್ಣಾಶ್ರಮಧರ್ಮ, ನೈಮಿತ್ತಕಧರ್ಮ (ಪ್ರಾಯಶ್ಚಿತ), ಗುಣಧರ್ಮ ಎಂದು ಐದು ವಿಧದ ಕರ್ತವ್ಯಗಳನ್ನು ಹೇಳುತ್ತಾನೆ.[30] ಧರ್ಮವನ್ನು 'ಕರ್ತವ್ಯ'ವೆಂದು ಭಾವಿಸಿದರೆ ದಾನವೂ ಕೂಡ ಪ್ರತಿಯೊಬ್ಬ ವ್ಯಕ್ತಿ ಮಾಡಬಹುದಾದ ಒಂದು ಕರ್ತವ್ಯವಾಗಿದೆ.

ಕಲ್ಯಾಣ ಚಾಲುಕ್ಯರ ಬಹುತೇಕ ಶಾಸನಗಳಲ್ಲಿ ದಾನಕ್ಕೆ ಪ್ರತಿಫಲವನ್ನು ಹೇಳುವಾಗ, ದಾನವನ್ನು ಕಾಪಾಡುವವರಿಗೆ ಒದಗುವ ಫಲವನ್ನು ಹೇಳುವಾಗ, ಇಲ್ಲವೇ ದಾನ ಶಾಸನವನ್ನು ಕೆಡಿಸಿದವರಿಗೆ ಮತ್ತು ದಾನವನ್ನು ದುರ್ಬಳಕೆ ಮಾಡಿಕೊಂಡರೆ ಒದಗುವ ದುರ್ಗತಿಯನ್ನು ಹೇಳುವಾಗ ಶಾಪಾಶ್ರಯ ಭಾಗದಲ್ಲಿ 'ಧರ್ಮ'ಎಂಬ ಪದವನ್ನು ಬಳಸಲಾಗಿದೆ. "ಧರ್ಮ್ಮಮಂ ಪ್ರತಿಪಾಲಿಸಿದರ್ಗೆ"[31], "ಧರ್ಮಾರ್ತ್ಥಮಾಗಿ ಕೊಟ್ಟ ಕೆಯ್ಯಿ"[32], "ಧರ್ಮ ಭಾವನೆಯೊಳು ಕೊಟ್ಟರೀ ದಾನಂ"[34], "ಈದಂ (ಕೊಟ್ಟ ದಾನವನ್ನು) ಊರೊಡೆಯರ್ರೈವರುಂ ಪುರಸ್ಸಹರಾಗಿ ಧರ್ಮಮಂ ಪ್ರತಿಪಾಳಿಸುವರು."[34] ಇಂಥ ಪದಗಳನ್ನು ಅನೇಕ ದಾನ ಶಾಸನಗಳಲ್ಲಿ ಕಾಣುತ್ತೇವೆ. ಮತ್ತು ಕೆಲವು ಕಡೆ 'ಧರ್ಮ' ಪದವನ್ನು ದಾನ ಪದಕ್ಕೆ ಸಮನಾಗಿ 'ಕರ್ತವ್ಯ' ಎಂದು ಬಳಸಲಾಗಿದೆ.

ಒಟ್ಟಾರೆಯಾಗಿ 'ದಾನ ಮತ್ತು ಧರ್ಮ' ಎಂಬ ಪದಗಳು ಇಂದು ಜನ ಮಾನಸದಲ್ಲಿ ಜೋಡುನುಡಿಗಳಂತೆ ಕಂಡು ಬಂದರೂ ಧರ್ಮದಲ್ಲಿ ದಾನವು ಲೀನವಾಗುತ್ತದೆ. ಧರ್ಮದ ವಿವಿಧ ಕಾರ್ಯಗಳಲ್ಲಿ ದಾನವು ಒಂದಾಗಿದೆ ಎಂದು ಹೇಳಬಹುದು.

## ೨.೪ ದಾನದ ಮೂರು ಪ್ರಮುಖ ಅಂಶಗಳು

'ದಾನ' ಎನ್ನಬೇಕಾದರೆ ಅದರಲ್ಲಿ ಪ್ರಮುಖವಾಗಿ ಮೂರು ಅಂಶಗಳು ಇರಲೇಬೇಕು. ಈ ಅಂಶಗಳನ್ನು 'ದಾನಕಾರ್ಯದಲ್ಲಿನ ಮೂರು ಪಾತ್ರಗಳು' ಎಂತಲೂ ಕರೆಯುತ್ತಾರೆ. ಅವುಗಳೆಂದರೆ : ಮೊದಲನೆಯದು 'ದಾನಿ', ಎರಡನೆಯದು 'ಪ್ರತಿಗ್ರಹಿ', ಮೂರನೆಯದು 'ದಾನದ ವಸ್ತು'. ಇವುಗಳನ್ನು ಸ್ವಲ್ಪ ವಿವರವಾಗಿ ಹೀಗೆ ಹೇಳಬಹುದು.

**೧. ದಾನಿ ಅಥವಾ ದಾತೃ :**

ದಾನಿಯು ದಾನಕಾರ್ಯದ ಮೊದಲ ಪಾತ್ರ. ದಾನವನ್ನು ಕೊಡುವ ವ್ಯಕ್ತಿಯನ್ನು 'ದಾನಿ' ಅಥವಾ 'ದಾತೃ' ಎಂದು ಪರಿಭಾವಿಸಲಾಗುತ್ತದೆ. ದಾನಿಯು ಸಂಪತ್ತಿನ ಒಡೆಯ; ದ್ರವ್ಯ ಉಳ್ಳವನು. ತನ್ನಲ್ಲಿರುವುದನ್ನು ಇತರರಿಗೆ ನೀಡಿದಾಗಲೇ ವ್ಯಕ್ತಿ 'ದಾನಿ' ಅಥವಾ 'ದಾತೃ' ಎನಿಸುತ್ತಾನೆ. ದಾನಿಯ ಗುಣಸ್ವಭಾವಕ್ಕೆ ಅನುಗುಣವಾಗಿ ಭಗದ್ಗೀತೆಯಲ್ಲಿ ಮೂರು ದಾನದ ವಿಧಗಳನ್ನು ಹೇಳಲಾಗಿದೆ. ಅವುಗಳೆಂದರೆ : ಸಾತ್ವಿಕದಾನ, ರಾಜಸದಾನ, ತಾಮಸದಾನ. ಇವುಗಳ ಹಿನ್ನಲೆಯಲ್ಲಿ ದಾನಿಗಳನ್ನು ಮೂರು ರೀತಿಯಲ್ಲಿ ವಿಂಗಡಿಸಬಹುದು.

**ಸಾತ್ವಿಕ ದಾನಿ :**

ಈತ ಪ್ರತಿಫಲದ ನಿರೀಕ್ಷೆಯಿಲ್ಲದೆ ಯೋಗ್ಯನಾದವನಿಗೆ ಸರಿಯಾದ ಕಾಲ ಮತ್ತು ದೇಶಗಳಲ್ಲಿ ಕರ್ತವ್ಯವೆಂದು ತಿಳಿದು ದಾನ ಮಾಡುವ ಗುಣದವನು. ಈತನನ್ನು 'ಉದಾರಿ' ಎಂತಲೂ ಕರೆಯುತ್ತಾರೆ.[35] ಈತ ವಿಶ್ವಕುಟುಂಬಿ. ದಾನ ಧರ್ಮ ಮೊದಲಾದ ಪರೋಪ ಕಾರ್ಯಗಳನ್ನು ಮಾಡುವಾಗ ದ್ರವ್ಯವನ್ನು ತೃಣಕ್ಕೆ ಸಮಾನವೆಂದು ಭಾವಿಸಿ ತನ್ನ ಸರ್ವಸ್ವವನ್ನೇ ದಾನ ಮಾಡುವಂಥವನು. ಜ್ಞಾನ, ಅನ್ನ, ದ್ರವ್ಯ, ಭೂಮಿ ಅದೇನೇ ಇರಲಿ ಎಲ್ಲವನ್ನು ದಾನ ಮಾಡುವ ಔದಾರ್ಯತೆ ಈತನಲ್ಲಿರುತ್ತದೆ. ಈತ ಒಂದೇ ಒಂದು ವಿಷಯದಲ್ಲಿ ಮಾತ್ರ ತೀರ ಜಿಪುಣನಾಗಿರುತ್ತಾನೆ. ಅದೇನೆಂದರೆ, 'ಇಲ್ಲ' ಎಂಬ ಪದವನ್ನು ಎಂದೂ ಯಾವ ಯಾಚಕನಿಗೂ ಬಳಸಲಾರ.[36]

**ರಾಜಸ ದಾನಿ :**

ಪ್ರತ್ಯುಪಕಾರದ ಬಯಕೆಯಿಂದ ಅಥವಾ ಕರ್ಮಫಲಾಪೇಕ್ಷೆಯಿಂದ, ಇಲ್ಲವೆ ದಾನ ನೀಡಲು ಇಷ್ಟವಿಲ್ಲದೆಯೇ ದಾನ ಮಾಡುವವನನ್ನು ರಾಜಸದಾನಿ ಎನ್ನುವರು. ಈತನಿಗೆ ನಿಜವಾಗಿಯೂ ದಾನಮಾಡುವ ಸದುದ್ದೇಶ ಇರದೇ ಇದ್ದರೂ ಕೆಲವೊಮ್ಮೆ ಸ್ವರ್ಗಸಾಮ್ರಾಜ್ಯಕ್ಕೆ ಏರಬೇಕೆಂಬ ಆಸೆಯಿಂದ ದಾನ ಮಾಡುತ್ತಾನೆ. ತುಂಬ ಕ್ಲೇಶದಿಂದ "ನಾನು ಈ ರೀತಿಯಲ್ಲಿ ಇಷ್ಟೇಕೆ ಖರ್ಚು ಮಾಡಿದೆ ?" ಎಂದು ಮುಂದೆ ಪಶ್ಚಾತ್ತಾಪ ಪಡುವಷ್ಟು ದಾನವನ್ನು ನೀಡುತ್ತಾನೆ. ಕೆಲವೊಮ್ಮೆ ಬೇರೆಯವರು ವಿನಂತಿ ಮಾಡಿದರೆಂದು, ಉಪಕಾರ ಪ್ರಜ್ಞೆಯಿಂದ

ದಾನ ನೀಡುತ್ತಾನೆ. ವೇದ ಮತ್ತು ಧರ್ಮ ಗ್ರಂಥಗಳು ಈ ಬಗೆಯ ದಾನವನ್ನು ಮತ್ತು ದಾನಿಯನ್ನು ಸಮರ್ಥಿಸುವುದಿಲ್ಲ. ಸಾತ್ವಿಕ ದಾನ ಮಾಡುವವನೇ ನಿಜವಾದ ದಾನಿ ಎಂದು ಹೇಳುತ್ತವೆ.[37]

**ತಾಮಸ ಗುಣವುಳ್ಳ ದಾನಿ :**

ಅಶುಚಿಯಾದ ಸ್ಥಳದಲ್ಲಿ, ಅನುಚಿತವಾದ ಕಾಲದಲ್ಲಿ, ಅಪಾತ್ರನಿಗೆ ಅಥವಾ ದಾನ ಪಡೆಯಲು ಯೋಗ್ಯನಲ್ಲದ ವ್ಯಕ್ತಿಗೆ ಗೌರವವಿಲ್ಲದೆ ದಾನ ಮಾಡುವವನು ತಾಮಸ ಗುಣವುಳ್ಳ ದಾನಿ. ತಾಮಸಿಗನು ನೀಡಿದ ದಾನವು ಸಮಾಜಕ್ಕೆ, ಸತ್ಪಾತ್ರಕ್ಕೆ ಸಲ್ಲಲಾರದು. ಈತನನ್ನು 'ಕೃಪಣ' ಎಂತಲೂ ಕರೆಯುತ್ತಾರೆ.[38] ಇವನು ಬಲು ದುರ್ದೈವಿ. ಇವನಿಗೆ ಪಾರಲೌಕಿಕ ಸುಖವೂ ಇಲ್ಲ; ಐಹಿಕ ಸುಖವೂ ಇಲ್ಲ! ಏಕೆಂದರೆ, ಈತನು ಪವಿತ್ರ ಕಾರ್ಯಗಳಿಗೆಂದು ದಾನ ನೀಡುವುದಿಲ್ಲ. ಇಂಥವರು ಮಾಡುವ ದಾನ-ಧರ್ಮದಲ್ಲಿ ಅಂತಃಕರಣ, ಔದಾರ್ಯ, ಉದಾತ್ತ ಉದ್ದೇಶಗಳಿರುವುದಿಲ್ಲವಾದ್ದರಿಂದ ಅದನ್ನು 'ದಾನ' ಎಂತಲೂ ಕರೆಯಲಾಗದು. ಉದಾರಿಯ ದ್ರವ್ಯ, ಸಂಪತ್ತುಗಳು ಸತ್ಪಾತ್ರಕ್ಕೆ ಖರ್ಚಾದರೆ, ತಾಮಸಿಗನ ದ್ರವ್ಯ, ಸಂಪತ್ತುಗಳು ಅಪಾತ್ರರ ಕೈಯ್ಯಲ್ಲಿ ಹೋಗಿ ಖರ್ಚಾಗುತ್ತವೆ. ಉದಾರಿಗೆ ಪುಣ್ಯ ಪ್ರಾಪ್ತಿಯಾದರೆ ಕೃಪಣನಿಗೆ ಏನೂ ಸಿಗಲಾರದು.[39]

**೨. ಪ್ರತಿಗ್ರಹಿ :**

'ಪ್ರತಿಗ್ರಹಿ' ಎಂದರೆ ದಾನಸ್ವೀಕರಿಸುವವನು ಅಥವಾ ಪಡೆಯುವವನು ಎಂದರ್ಥ. ದಾನವನ್ನು ಬಯಸಿ ಬಂದ ಈತನನ್ನು 'ಯಾಚಕ'ನೆಂದೂ ಕರೆಯುವರು. ದಾನಕಾರ್ಯದಲ್ಲಿ ದಾನಿಗೆ ಸ್ವರ್ಗಪ್ರಾಪ್ತವಾಗಲೆಂದು ಹರಸಿ, ದಾನ ಪಡೆದು ಪ್ರತಿಯಾಗಿ ಪುಣ್ಯ ಸಂಪಾದನೆಯಲ್ಲಿ, ಸ್ವರ್ಗಪ್ರಾಪ್ತಿಯಲ್ಲಿ ಸಹಾಯಕನಾಗುತ್ತಾನೆ. ಭಾರತೀಯ ಪರಂಪರೆಯಲ್ಲಿ ದಾನಿಯನ್ನಷ್ಟೇ ಮಹಾಮಹಿಮ ಎಂದು ಭಾವಿಸುವುದಿಲ್ಲ. ನಿಜವಾಗಿಯೂ ದಾನಿಗಿಂತಲೂ ಪ್ರತಿಗ್ರಹಿಗೆ ಹೆಚ್ಚಿನ ಸ್ಥಾನವಿರುತ್ತದೆ. ಕಾರಣವೆಂದರೆ ಅವನು 'ಮೋಕ್ಷ ಸಂದೇಶವನ್ನು' ದಾನಿಗೆ ನೀಡುತ್ತಾನೆ.[35] ಇದರಿಂದ ದಾನಿಯಾದವನು ಅತ್ಯಂತ ವಿನಯಪೂರ್ವಕವಾಗಿ, ನಿಗರ್ವಿಯಾಗಿ, ಸೌಹಾರ್ದದಿಂದಲೂ ದಾನ ಪಡೆಯುವವನು ಮನನೊಂದುಕೊಂಡಾನೆಂಬ ಭಯದಿಂದಲೂ ದಾನಕೊಡಬೇಕೆಂಬುದನ್ನು ವೇದೋಪನಿಷತ್ತುಗಳು ಹೇಳುತ್ತವೆ.[41]

ಪ್ರತಿಗ್ರಹಿ ಅಥವಾ ಯಾಚಕರಲ್ಲಿ ಎರಡು ವಿಧಗಳಿವೆ. ಒಂದು : ಕೇವಲ ತಮ್ಮ ಭೋಗಕ್ಕೆ ಅಥವಾ ಜೀವನಕ್ಕೆಂದು ದಾನ ಪಡೆಯುವವರು. ಸಮಾಜದ ಅಥವಾ ನಾಡಿನ ಹಿತಕ್ಕಾಗಿ ದಾನ ಪಡೆಯುವವರು. ಇದರಲ್ಲಿ ಮೊದಲನೆ ವರ್ಗವು ನಿಂದ್ಯವಾದದ್ದು.[42] ಈ ವರ್ಗದಲ್ಲಿ ಬೇಡಿ ಪಡೆಯುವ ಸ್ವಭಾವವಿರುತ್ತದೆ. ಇದನ್ನು ಅನುಲಕ್ಷಿಸಿ ಮನುಸ್ಮೃತಿಯಲ್ಲಿ 'ಯಾಚನೆಯನ್ನು ಮಾಡದೆ ಪ್ರಯತ್ನದಿಂದ ದೊರಕಿಸಿದ್ದು ಅಮೃತವಾಗಿರುವುದು' ಎನ್ನಲಾಗಿದೆ.[43]

ಆದರೆ, ಎರಡನೆಯ ಯಾಚಕ ವರ್ಗವು ಪವಿತ್ರ ಮತ್ತು ಉತ್ತಮವಾದುದೆಂದು ಸಮ್ಮತವಾಗಿದೆ. ಈ ವರ್ಗದಲ್ಲಿ ಸ್ವಾರ್ಥದ ಆಕುಂಚಿತ ವಿಚಾರಗಳಿಗೆ ಆಸ್ಪದವಿಲ್ಲ. ಇವರು ಕೇವಲ ಪರೋಪಕಾರಕ್ಕಾಗಿ ದಾನ ಬೇಡುತ್ತಿರುತ್ತಾರೆ.

### ೩. ದಾನದವಸ್ತು :

ದಾನ ಕಾರ್ಯ ನಡೆಯಲು 'ದಾನದವಸ್ತು' ಪ್ರಮುಖವಾಗಿ ಬೇಕೇಬೇಕು. ದಾನಿ ಮತ್ತು ಪ್ರತಿಗ್ರಹಿ ನಡುವೆ 'ದಾನದವಸ್ತು'ವಿನ ವಿನಿಮಯವಾಗುತ್ತದೆ. ದಾನದಲ್ಲಿ ಇಂಥದ್ದೇ ವಸ್ತುವನ್ನು ಕೊಡಬೇಕೆಂದಿಲ್ಲ. ಯಾರಿಗೆ, ಯಾವ ಸಂದರ್ಭದಲ್ಲಿ ಅವಶ್ಯವಿರುತ್ತದೆಯೋ ಆ ಸಂದರ್ಭದಲ್ಲಿ ಬೇಡಿದ್ದನ್ನು ನೀಡುವುದು ಉತ್ತಮದಾನ ಎನಿಸುತ್ತದೆ. ದಾನದ ವಸ್ತುಗಳಲ್ಲಿ ಭೂಮಿ, ದ್ರವ್ಯ, ನಿವೇಶನ, ಗಾಣ, ಸುಂಕ, ವಸ್ತ್ರ ಮುಂತಾದವುಗಳು ಸೇರುತ್ತವೆ. ಭಾರತೀಯ ಪರಂಪರೆಯಲ್ಲಿ ಉಲ್ಲೇಖಿಸಲ್ಪಟ್ಟ ದಾನದ ವಸ್ತುಗಳ ಕುರಿತು 'ದಾನದ ಪ್ರಕಾರಗಳು' ಎಂಬ ಶೀರ್ಷಿಕೆಯಲ್ಲಿ ವಿವರವಾಗಿ ಚರ್ಚಿಸಲಾಗಿದೆ.

ದಾನ ಕಾರ್ಯದಲ್ಲಿ ದಾನಿ, ಪ್ರತಿಗ್ರಹಿ, ದಾನದವಸ್ತು ಎಂಬ ಈ ಮೂರು ಪ್ರಮುಖ ಅಂಶಗಳ ಜೊತೆಗೆ ದೇವಲನು ಇನ್ನೂ ಮೂರು ಅಂಶಗಳನ್ನು ಸೇರಿಸುತ್ತಾನೆ. ಅವನ ಪ್ರಕಾರ ದಾನಕ್ಕೆ ೧) ದಾನಿ ೨) ಪ್ರತಿಗ್ರಹಿ ೩) ದಾನದ ವಸ್ತು ೪) ಶ್ರದ್ಧೆ ೫) ಸೂಕ್ತ ಕಾಲ ೬) ಸೂಕ್ತ ಸ್ಥಳ.[44] ಎಂಬ ಆರು ಅಂಗಗಳಿವೆ. ದಾನ ಶಾಸನಗಳು ಈ ಆರು ಅಂಗಗಳನ್ನು ಸಾಮಾನ್ಯವಾಗಿ ವಿವರಿಸುತ್ತವೆ. ಹಿಂದೂ ಧರ್ಮದಲ್ಲಿ ದಾನಕ್ಕಿರುವ ಒಂದು ವಿಶೇಷ ಲಕ್ಷಣವೆಂದರೆ–ತಾನು(ದಾನಿ) ದಾನದ ಮೂಲಕ ಪ್ರತಿಗ್ರಹಿಗೆ ಸಹಾಯ ಮಾಡುತ್ತಿದ್ದೇನೆ ಎಂಬ ಪ್ರಜ್ಞೆ ದಾನಿಗೆ ಇಲ್ಲದೇ ಇರುವುದು. ಹಾಗೆಯೇ ತಾನು ಸಹಾಯ ಪಡೆಯುತ್ತಿದ್ದೇನೆ ಎಂಬ ಹಲ್ಲುಕಿರಿಯುವ ಭಾವನೆ ಪ್ರತಿಗ್ರಹಿಯಲ್ಲಿ ಇಲ್ಲದಿರುವುದು. ವಾಸ್ತವವಾಗಿ ದಾನವನ್ನು ಸ್ವೀಕರಿಸಿದ ಪ್ರತಿಗ್ರಹಿಯು ಪುಣ್ಯ ಸಂಪಾದನೆಗೆ ಉಪಕಾರ ಮಾಡುತ್ತಾನೆ. ದಾನ ನೀಡುವುದರ ಮೂಲಕ ದಾನಿಯು ಧಾರ್ಮಿಕ ಕರ್ತವ್ಯವನ್ನು ನೆರವೇರಿಸಿದ ಭಾವನೆಯನ್ನು ಪಡೆಯುತ್ತಾನೆ. ಇಲ್ಲಿ 'ಬಲಗೈ ಕೊಟ್ಟದ್ದು ಎಡಗೈಗೆ ತಿಳಿಯದಂತಿರಬೇಕು' ಎಂಬ ಆಶಯವಿದೆ. ಕೊಟ್ಟದ್ದನ್ನು ಹೇಳಿಕೊಳ್ಳುವ ಭಾವನೆ ದಾನಿಯಲ್ಲಿರಬಾರದು ಎಂಬುದು ಗೌಪ್ಯವಾಗಿ ದಾನ ಮಾಡುವುದನ್ನು ತಿಳಿಸುತ್ತದೆ. ಮಾನವೀಯ ಮೌಲ್ಯಗಳಲ್ಲಿ ಇದು ಶ್ಲಾಘನೀಯವಾದುದು. ಅದಾಗ್ಯೂ ರಾಜರು, ಅಧಿಕಾರಿಗಳು ಮತ್ತು ಇತರರು ನೀಡಿದ ದಾನಗಳನ್ನು ದಾನ ಶಾಸನಗಳು ಗಟ್ಟಿದನಿಯಲ್ಲಿ ಸಾರಿ ಹೇಳುತ್ತವೆ. ಇದಕ್ಕೆ ಹಲವು ಕಾರಣಗಳಿವೆ. ಅವುಗಳನ್ನು ಮುಂದೆ ಚರ್ಚಿಸಲಾಗಿದೆ.

## ೨.೫ ಭಾರತದ ಪರಂಪರೆಯಲ್ಲಿ ದಾನ –ದಾನದ ಪ್ರಾಚೀನತೆ

ಭಾರತದ ಪರಂಪರೆಯಲ್ಲಿ ದಾನ ಬಹಳ ಪ್ರಾಚೀನವಾಗಿದೆ. ವೇದಕಾಲದಲ್ಲಿ ಯಜ್ಞದ ಒಂದು ಭಾಗವಾಗಿ ದಾನ ನೆರವೇರಿಸಲ್ಪಡುತ್ತಿತ್ತು. ಅನೇಕ ಸ್ಮೃತಿಕಾರರು ರಾಜನ ಕರ್ತವ್ಯಗಳಲ್ಲಿ

ದಾನವನ್ನು ಹೇಳುತ್ತಾರೆ. ಮಹಾಭಾರತದ ಕಾಲದಲ್ಲಿ ಕರ್ಣನನ್ನು 'ದಾನಶೂರ'ನೆಂದು ಬಿಂಬಿಸಲಾಗಿದೆ. ದಾನಕ್ಕೆ ವೇದ ಸಾಹಿತ್ಯದಷ್ಟು ಪುರಾತನತೆ ಇದ್ದರೂ ಶಾಸನಾಧಾರವಾಗಿ ಲಿಖಿತ ದಾಖಲೆಗಳು ಸಿಗುವುದು ಅಶೋಕನ ಕಾಲದಿಂದ. ಅಶೋಕನು ಶಾಸನಗಳ ಪಿತಾಮಹನೆಂದು ಕೀರ್ತಿವೇತ್ತನಾಗಿದ್ದಾನೆ. ಬರಾಬರ್ ಮತ್ತು ನಾಗಾರ್ಜುನ ಬೆಟ್ಟಗಳ ಮೇಲಿನ ಗುಹಾಶಾಸನಗಳಲ್ಲಿ ಅಶೋಕನು ನೀಡಿದ ದಾನದ ಉಲ್ಲೇಖಗಳಿವೆ. ಅಜೀವಕ ಸನ್ಯಾಸಿಗಳ ಸಂಘವೊಂದಕ್ಕೆ ಆ ಗುಹೆಗಳ ಸಮರ್ಪಣವನ್ನು ಇಲ್ಲಿ ಹೇಳಲಾಗಿದೆ.[45]

ಕ್ಷಹರಾತ ರಾಜ ನಹಪಾನನ ಅಳಿಯ ಉಷವದತ್ತನ ನಾಸಿಕ ಶಾಸನವು ನಾಸಿಕ್‌ದ ಗುಹೆ, ಧನ ಮತ್ತು ತೆಂಗಿನ ತೋಟಗಳನ್ನು ಬೌದ್ಧಭಿಕ್ಷು ಸಂಘವೊಂದಕ್ಕೆ ಸಮರ್ಪಿಸಿದ್ದನ್ನು ತಿಳಿಸುತ್ತದೆ.[46] ಅದೇ ರೀತಿ ಕುಷಾನರ ಕನಿಷ್ಕನ ಕಾಲದ ಮಥುರಾ ಜಿಲ್ಲೆಯ ಗಣೇಶ್ರದ ಬಳಿ ದೊರೆತಿರುವ ಕ್ರಿ.ಶ. ಪೂರ್ವದ ಎರಡು ಶಾಸನಗಳು ನಾಗದತ್ತ ಮತ್ತು ನಾಗಪ್ರಿಯ ಎಂಬುವರು ತಾವು ಮಾಡಿಸಿದ ಚೈತ್ಯ ಮತ್ತು ಕುಟೀರಗಳಿಗೆ ಬೋಧಿಸತ್ವನ ಪ್ರತಿಮೆಗಳನ್ನು ದಾನ ಮಾಡಿದ್ದನ್ನು ಉಲ್ಲೇಖಿಸುತ್ತವೆ.[47] ಸ್ಕಂದಗುಪ್ತನ ಭಿತರಿ ಸ್ತಂಭಶಾಸನ ಮತ್ತು ಒಂದನೆಯ ಪರಮೇಶ್ವರವರ್ಮನ ಕೂರಮ್ ದಾನಶಾಸನಗಳು ದೇವದಾಯವಾಗಿ ದಾನ ನೀಡಿರುವುದನ್ನು ದಾಖಲಿಸುತ್ತವೆ.[48]

ಕದಂಬರ ಕಾಲಕ್ಕೆ ಬಂದಂತೆ ದಾನಪರಂಪರೆ ಹುಲಸಾಗಿ ಬೆಳೆದು ಬಂದಿತು. ಬನವಾಸಿ ಕದಂಬರ ಕಾಲದಲ್ಲಿ ಮಹಾಭುವಿಯ ಮಗಳು, ಯುವರಾಜನ ತಾಯಿಯಾದ ಶಿವಸ್ಕಂದ ನಾಗರಸಿಯು ವಿಹಾರ, ತಟಾಕ ಮತ್ತು ನಾಗವಿಗ್ರಹಗಳನ್ನು ದಾನವಾಗಿ ನೀಡಿದ್ದಾಳೆ.[49] ಇಲ್ಲಿ 'ಖದಸಾಚಿ' ಎಂಬ ಅಧಿಕಾರಿ ನಾಗಪ್ರತಿಮೆಯನ್ನು ಮಾಡಿಸಿ ದಾನ ಕಾರ್ಯವನ್ನು ನೆರವೇರಿಸುತ್ತಾನೆ. 'ಚಿಣಕ' ಎಂಬ ಹೆಸರಿನ ಶಿಲ್ಪಿಯು ಈ ಶಿಲ್ಪವನ್ನು ರಚಿಸಿದನು. ಇಲ್ಲಿ ಶಿಲ್ಪವನ್ನು ರಚಿಸಿದ ಹಾಗೂ ದಾನಕಾರ್ಯ ನೆರವೇರಿಸಿದ ಅಧಿಕಾರಿಗಳ ಉಲ್ಲೇಖವಿರುವುದರಿಂದ ಕದಂಬರ ಕಾಲಕ್ಕಾಗಲೇ ದಾನಕಾರ್ಯ ವ್ಯವಸ್ಥಿತ ರೂಪ ಪಡೆದುಕೊಂಡಿತ್ತೆನ್ನಬಹುದು. ಅನಂತರ ಗಂಗರ ಕಾಲದಲ್ಲಿ ದಾನ ಕಾರ್ಯಗಳ ವ್ಯವಸ್ಥೆ ಉತ್ತಮಗೊಂಡಿರುವುದು ಅಧ್ಯಯನದಿಂದ ತಿಳಿದು ಬರುತ್ತದೆ.[50]

ಗಂಗರ ನೆಲಮಂಗಲದ ಶಾಸನದ ಪ್ರಕಾರ ಬೆಂಗಳೂರು ಜಿಲ್ಲೆಯ ಮಣ್ಣೆಯು ಗಂಗರಾಜ ಬೀಡುಗಳಲ್ಲಿ ಒಂದಾಗಿದ್ದು, ಜೈನಬಸದಿಯೊಂದಕ್ಕೆ ದಾನ ನೀಡಿದ್ದರ ಉಲ್ಲೇಖವಿದೆ.[51] ಹಾಗೆಯೇ ಕ್ರಿ.ಶ. 500ರಲ್ಲಿ ಚಿತ್ರದುರ್ಗದ ಶಾಸನವೊಂದರಲ್ಲಿ ಗಂಜಿಗಟ್ಟೆಯಲ್ಲಿ ಚೆನ್ದಿಯಮ್ಮರಸನಿಂದ ದೇಗುಲಕ್ಕೆ ಗ್ರಾಮದಾನ ನೀಡಿದ ಉಲ್ಲೇಖವಿದೆ.[52] ಬದಾಮಿ ಚಾಲುಕ್ಯರ ಕಾಲದಲ್ಲಿ ಪರಮಭಾಗವತನಾದ ಮಂಗಳೇಶನು ಬದಾಮಿಯಲ್ಲಿ ವಿಷ್ಣುಗೃಹವನ್ನು ಕಟ್ಟಿಸಿ, ವಿಷ್ಣು ಪ್ರತಿಮೆಯನ್ನು ಪ್ರತಿಷ್ಠಾಪಿಸಿ, ನಾರಾಯಣ ಬಲಿಯ ಉಪಹಾರಾರ್ಥ ಹದಿನಾಲ್ಕು ಬ್ರಾಹ್ಮಣರ ಸತ್ರಕ್ಕಾಗಿ ಮತ್ತು ಪರಿವ್ರಾಜಕರ ಭೋಜನಕ್ಕಾಗಿ ಲಂಜೀಶ್ವರ ಗ್ರಾಮವನ್ನು ದಾನ ಮಾಡುತ್ತಾನೆ.[53]

ವಿನಯಾದಿತ್ಯನು ಲಕ್ಷ್ಮೇಶ್ವರದಲ್ಲಿ ಶಂಖದೇವತಪಾವನ ಪ್ರವರ್ತವಾಗಿ ಹಡಗಿಲೆ ಗ್ರಾಮವನ್ನು ಸರ್ವಬಾಧಾ ಪರಿಹಾರವಾಗಿ ದಾನ ನೀಡುತ್ತಾನೆ.[54]

ಹೀಗೆ ವೇದ ಕಾಲದಿಂದ ಕಲ್ಯಾಣ ಚಾಲುಕ್ಯರ ಕಾಲಕ್ಕೆ ಬಂದಂತೆ ಸಾಕಷ್ಟು ದಾನದತ್ತಿಗಳು ನೀಡಲ್ಪಟ್ಟಿದ್ದು, ಭಾರತದಲ್ಲಿ ದಾನ ಪರಂಪರೆಯ ಪ್ರಾಚೀನತೆ ತಿಳಿದು ಬರುತ್ತದೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ದಾನಕಾರ್ಯವು ಅತ್ಯಂತ ವ್ಯವಸ್ಥಿತವಾಗಿ ನಿರ್ವಹಿಸಲ್ಪಡುತ್ತಿತ್ತು. ದಾನ ಪದ್ಧತಿಯಲ್ಲಿ ಒಂದು ಅಚ್ಚುಕಟ್ಟಾದ, ಯೋಜನಾಬದ್ಧ ವ್ಯವಸ್ಥೆ ನಿರ್ಮಾಣವಾಯಿತು.

ಕಲ್ಯಾಣ ಚಾಲುಕ್ಯರ ದಾನ ಶಾಸನಗಳ ವಿಷಯ ನಿರೂಪಣೆಯಲ್ಲಿ, ದಾನವನ್ನೀಯುವ ವಸ್ತುವಿನಲ್ಲಿ ಮತ್ತು ಉದ್ದೇಶಗಳಲ್ಲಿ ವೈವಿಧ್ಯವಿದ್ದರೂ ಶಾಸನದ ಪ್ರಾರಂಭ, ಬೆಳವಣಿಗೆ ಮತ್ತು ಮುಕ್ತಾಯಗಳಲ್ಲಿ ಒಂದೇ ರೀತಿಯ ವ್ಯವಸ್ಥಿತ ಕ್ರಮ ಗೋಚರವಾಗುತ್ತದೆ. ಇವುಗಳಲ್ಲಿ ದಾನ ನೀಡಿದ ಕಾಲವನ್ನು, ವ್ಯಕ್ತಿಯನ್ನು, ದಾನ ಪಡೆದ ದೇವಾಲಯ ಮತ್ತು ಪ್ರತಿಗ್ರಹಿಗಳನ್ನು, ದಾನದ ಸ್ವರೂಪ, ಉದ್ದೇಶಗಳನ್ನು, ದಾನವನ್ನು ಯಾರು ಪಾಲಿಸಬೇಕೆಂಬುದನ್ನು ಸ್ಪಷ್ಟಪಡಿಸಲಾಗಿದೆ. ಹೀಗೆ ಕಲ್ಯಾಣ ಚಾಲುಕ್ಯರ ಕಾಲದವರೆಗೆ ದಾನ, ಪ್ರಾಚೀನತೆಯಿಂದ ಹೆಚ್ಚು ವ್ಯವಸ್ಥಿತವಾಗಿ ನಿಖರತೆಯಡೆಗೆ ಸಾಗಿದ್ದು ಗೋಚರಿಸುತ್ತದೆ.

## ೨.೬ ಭಾರತೀಯ ಪರಂಪರೆಯಲ್ಲಿ ದಾನದ ಮಹತ್ವ

ಅತಿ ಪುರಾತನ ಕಾಲದಿಂದಲೂ ಭಾರತದಲ್ಲಿ ದಾನಕ್ಕೆ ಅತ್ಯಂತ ಮಹತ್ವದ ಸ್ಥಾನವಿದೆ. ಶ್ರೀರಾಮನ ಕ್ಷತ್ರಿಯ ಕರ್ಮ; ಲಕ್ಷ್ಮಣ–ಭರತರ ಸೋದರ ಪ್ರೇಮ; ಸೀತೆ, ಸಾವಿತ್ರಿ, ದಮಯಂತಿಯರ ಪಾತಿವ್ರತ್ಯ; ಕರ್ಣನ ಔದಾರ್ಯ; ಶಿಬಿ, ಜೀಮೂತವಾಹನರ ದಯೆ; ಹರಿಶ್ಚಂದ್ರ, ಯುಧಿಷ್ಠರರ ಸತ್ಯಸಂದತೆ; ಭೀಷ್ಮನ ದೃಢ ಪ್ರತಿಜ್ಞೆ; ಧ್ರುವ–ಪ್ರಹ್ಲಾದರ ಭಕ್ತಿ; ದಧೀಚಿಯ ತ್ಯಾಗ ಮುಂತಾದವು ಯುಗ–ಯುಗಗಳಿಂದಲೂ ಭಾರತೀಯರಿಗೆ ಸಂಜ್ಞಾ ಜ್ಯೋತಿಗಳಾಗಿವೆ. ಚಂಚಲಚಿತ್ತರು, ಅಲೆಮಾರಿಗಳಿಗೆ ನಿಜದ ದಾರಿ ತೋರುವ ಬಾಳದೀವಿಗೆಗಳಾಗಿವೆ.

ಕೃತಯುಗದಲ್ಲಿ ವೃತ್ರಾಸುರನಿಂದ ಸ್ವರ್ಗವನ್ನು ರಕ್ಷಿಸುವುದಕ್ಕೋಸ್ಕರ ತನ್ನ ಪ್ರಾಣವನ್ನೇ ಬಲಿಕೊಟ್ಟು, ಬೆನ್ನೆಲುಬನ್ನು ಇಂದ್ರನಿಗೆ ದಾನ ಮಾಡಿದ ದಧೀಚಿಋಷಿ; ಕೃಷ್ಣಶರ್ಮನೆಂಬ ಬ್ರಾಹ್ಮಣನ ಮಗನನ್ನು ಸಿಂಹದ ಬಾಯಿಯಿಂದ ರಕ್ಷಿಸಿವುದಕ್ಕೋಸ್ಕರ ತನ್ನ ಅರ್ಧ ದೇಹವನ್ನೇ ಕತ್ತರಿಸಿ ಕೊಟ್ಟ ಮಯೂರಧ್ವಜ; ಗಿಡುಗನ ಬಾಯಿಯಿಂದ ಪಾರಿವಾಳವನ್ನು ರಕ್ಷಿಸಲೋಸುಗ ಪಾರಿವಾಳದ ತೂಕದಷ್ಟು ತನ್ನ ತೊಡೆಯ ಮಾಂಸವನ್ನು ಕೊಯ್ದುಕೊಟ್ಟ ಶಿಬಿ ಚಕ್ರವರ್ತಿ; ಶಂಖಚೂಡನೆಂಬ ಸರ್ಪವನ್ನು ಗರುಡನಿಗೆ ಆಹುತಿಯಾಗುವುದನ್ನು ತಪ್ಪಿಸಿ ತನ್ನ ದೇಹವನ್ನೇ ಗರುಡನಿಗೆ ದಾನ ಮಾಡಿದ ಜಿಮೂತವಾಹನ; ಇವರೆಲ್ಲ ತಮ್ಮ ದೇಹವನ್ನೇ ದಾನಮಾಡಿ ದಾನಶೂರರೆನಿಸಿದ್ದಾರೆ. ದ್ರವ್ಯದಾನ ಮಾಡಿದ ಕರ್ಣ, ಸಮಸ್ತ ರಾಜ್ಯವನ್ನೇ ದಾನ ಮಾಡಿದ

ಬಲಿಚಕ್ರವರ್ತಿ ಮತ್ತು ಹರಿಶ್ಚಂದ್ರ ಮಹಾರಾಜ ಇವರೆಲ್ಲ ತಮ್ಮ ಬದುಕಿನ ರೀತಿಯಿಂದಲೇ ದಾನದ ಮಹತ್ವವನ್ನು ಜಗತ್ತಿಗೆ ಸಾರಿದ್ದಾರೆ.

ಪ್ರಜಾಪಾಲನೆಯೇ ರಾಜರ ಮುಖ್ಯ ಗುರಿಯಾಗಿರಬೇಕು. ರಾಜನೊಬ್ಬ ಆದರ್ಶ ವ್ಯಕ್ತಿಯಾಗಿ, ತನ್ನ ನಡೆ–ನುಡಿಗಳೆರಡರಲ್ಲೂ ಶುದ್ಧನಾಗಿ ಇತರರಿಗೆ ಮಾರ್ಗದರ್ಶಿಯಾಗಬೇಕು. ಹಾಗಿಲ್ಲದಿದ್ದರೆ, ಜನ ಅವನನ್ನು ಅನೀತಿವಂತನೆನ್ನುತ್ತಾರೆ. ಈ ವಿಚಾರವನ್ನು ಸೋಮನಾಥ ಕವಿ ಹೀಗೆ ಹೇಳುತ್ತಾನೆ: "ಹೇಡಿಗಳಿಗೆ ಮೃಷ್ಟಾನ್ನವನ್ನು, ತನ್ನ ಕೀರ್ತಿಯನ್ನು ಪ್ರಸಿದ್ಧಪಡಿಸುವವರಿಗೆ ಎರಡು ಕಾಸನ್ನೂ ತನ್ನನ್ನು ಪರೋಕ್ಷವಾಗಿ ನಿಂದಿಸುವವನಿಗೆ ಕೇಳಿದಷ್ಟು ದಾನವನ್ನು, ಹೆಂಡತಿಗೆ ಅಲ್ಪ ಸುಖವನ್ನು, ವೇಶ್ಯೆಗೆ ಸರ್ವಸುಖವನ್ನು ಉಂಟುಮಾಡದೇ ಇರುವ ದೊರೆಗೆ ನೀತಿಯೆಲ್ಲಿಯದು?".[55] ಹಾಗೆಯೇ "ಭೀತನಾಗಿ ಆಶ್ರಯಬೇಡಲು ಬಂದವನಿಗೆ ಅಭಯವನ್ನು ನೀಡದೇ ವಂದಿವ್ರಾತಕ್ಕೆ ಬರಿಗೈಯನ್ನು ತೋರಿಸುವವನು ರಾಜನೇ?" ಎಂದು ನಂಜುಂಡ ಕವಿ ಪ್ರಶ್ನಿಸುತ್ತಾನೆ.[56] ಅಂದರೆ, ರಾಜನಾದವನು ಸನ್ಮಾರ್ಗದಲ್ಲಿ ನಡೆದು ತನ್ನ ಪ್ರಜೆಗಳ ಕಲ್ಯಾಣವನ್ನು ಕಾಯುವವನಾಗಿರಬೇಕು. ಇಲ್ಲಿ ರಾಜನ ದಾನ–ದಯೆಯ ಕರ್ತವ್ಯದ ಬಗ್ಗೆ ಒತ್ತಿಹೇಳಲಾಗಿದೆ.

ಪ್ರಾಚೀನ ಕಾಲದಲ್ಲಿ 'ದಾನ' ಎಂಬುದು ಆಧ್ಯಾತ್ಮಿಕ ಮಹತ್ವ ಪಡೆದಿತ್ತು ಎಂಬುದಕ್ಕೆ ಮನುಸ್ಮೃತಿಯಲ್ಲಿ ಹೀಗೆ ಹೇಳಲಾಗಿದೆ:

**ವಾರಿದ ಸ್ತೃಪ್ತಿ ಮಾಪ್ನೋತಿ ಸುಖಮಕ್ಷಯ್ಯ ಮನ್ನದಃ ।**
**ತಿಲಪ್ರದಃ ಪ್ರಜಾಮಿಷ್ಟಾಂ ದೀಪಶ್ಚ ಕ್ಷುರುತ್ತಮಂ ॥**

**ಭೂಮಿದೋ ಭೂಮಿಮಾಪ್ನೋತಿ ದೀರ್ಘವಾಯುರ್ಹಿರಣ್ಯದಃ ।**
**ಗ್ರಹದೋನ್ಯಾಣಿ ವೇಶ್ಮಾನಿ ರೂಪ್ಯದೋ ಮುತ್ತಮಂ ॥**

**ವಾಸೋದಶ್ಚಂದ್ರ ಸಾಲೋಕ್ಯ ಮಶ್ವಿಸಲೋಕ್ಯ ಮಶ್ವದಃ ।**
**ಅನುಡುಹಃ ಶ್ರೀಯಂ ಪ್ರಷ್ಟ ಗೋದೊ ಬಹ್ನಪ್ಯ ವಿಷ್ಟಪಂ ॥**

**ಯಾನಶ್ಯಪ್ರಾದೋ ಭಾಯರ್ಮೇಶ್ಚರ್ಯಮಮ ಯಪ್ರದಃ ।**
**ಧಾನ್ಯದಃ ಶಾಶ್ವತಃ ಸೌಖ್ಯ ಬ್ರಾಹ್ಮಾದೋ ಬ್ರಮ್ಮಸಾರ್ಷ್ಟಿತಾಮಂ ॥**[57]

ಈ ಮೇಲಿನ ಸಂಸ್ಕೃತಶ್ಲೋಕ ಪದ್ಯದ ಆಶಯವೆಂದರೆ, ಯಾರು ಏನನ್ನು ದಾನ ಮಾಡುತ್ತಾರೋ ಅವರಿಗೆ ಅದಕ್ಕೆ ತಕ್ಕಂತೆ ಫಲಶ್ರುತಿ ದೊರೆಯುತ್ತದೆ. 'ನೀರನ್ನು ಕೊಟ್ಟವನಿಗೆ ತೃಪ್ತಿ ದೊರಕುತ್ತದೆ. ಆಹಾರ ನೀಡಿದವನಿಗೆ ಅನಂತ ಸುಖವೂ ಭೂಮಿಯನ್ನು ನೀಡಿದವನಿಗೆ ದೇಶದ ಆಡಳಿತವೂ; ಸುವರ್ಣದಾನ ಮಾಡಿದವನಿಗೆ ದೀರ್ಘಾಯುಷ್ಯವೂ ದೊರಕುತ್ತವೆ. ಬೆಳ್ಳಿಯನ್ನು ದಾನ ಮಾಡಿದವನು ದೇಹ ಸೌಂದರ್ಯವನ್ನು ಪಡೆಯುತ್ತಾನೆ, ವಸ್ತ್ರದಾನ ಮಾಡಿದವನು ಚಂದ್ರಲೋಕವನ್ನು ಪಡೆಯುತ್ತಾನೆ, ಅಶ್ವದಾನ ಮಾಡಿದವನಿಗೆ ಅಶ್ವಿನೀ ದೇವತೆಗಳ ಲೋಕವು ದೊರಕುತ್ತದೆ. ಎತ್ತುಗಳನ್ನು ದಾನ ನೀಡಿದವನು ಐಶ್ವರ್ಯವನ್ನೂ ಗೋವುಗಳನ್ನು ದಾನ ಮಾಡಿದವನು ಸೂರ್ಯಲೋಕವನ್ನು ಪಡೆಯುತ್ತಾನೆ.'[58]

ಈ ನಂಬಿಕೆಗಳು ಅತೀ ಸಂಪ್ರದಾಯಶೀಲ ಭಾರತೀಯರಲ್ಲಿ ಬೇರೂರಿದ್ದವು. ದಾನದಿಂದ ಸಿಗುವ ಪ್ರತಿಫಲವನ್ನು ಮನುಸ್ಮೃತಿ ಹೇಳಿದ್ದರೆ, ಭಗವದ್ಗೀತೆ 'ನಿನಗೆ ಕರ್ತವ್ಯವನ್ನು ಮಾಡುವುದಕ್ಕಷ್ಟೇ ಅಧಿಕಾರ ಆದರೆ ಕರ್ಮಫಲಕ್ಕೆ ಅಧಿಕಾರವಿಲ್ಲ. ಕರ್ಮಫಲಕ್ಕೆ ನೀನು ಕಾರಣ ಎಂದು ಭಾವಿಸಬೇಡ. ಕರ್ಮವನ್ನು ಬಿಡಬೇಕೆಂದು ನಿನಗೆ ಮನಸ್ಸಾಗದಿರಲಿ'[59] ಎನ್ನುತ್ತದೆ. ಫಲಾಫಲಗಳಿಗೊಸ್ಕರವೇ ಕರ್ಮನಿರತರಾಗುವುದು ವರ್ಜ್ಯವಾದುದು. ಅಂತೆಯೇ ದಾನದಿಂದ ನಿಜವಾಗಿಯೂ ಸ್ವರ್ಗ ಪ್ರಾಪ್ತವಾಗುತ್ತದೆಯೋ ಇಲ್ಲವೋ ಅದು ಪಾರಮಾರ್ಥಿಕ ವಿಚಾರ. ಆದರೆ, ದಾನದಿಂದ ಇಹಲೋಕದಲ್ಲಿನ ಸಂಕಷ್ಟಗಳು ಕಡಿಮೆಯಾಗಿ ಇಳೆಯೇ ಸ್ವರ್ಗವಾಗಿ ಪರಿಣಮಿಸುವುದು. 'ಯಜ್ಞ, ದಾನ, ತಪಸ್ಸುಗಳು ಎಂಥವರನ್ನಾದರೂ ಮಹಾತ್ಮರನ್ನಾಗಿಸಿ, ಪರಿಶುದ್ಧ ಗೊಳಿಸುತ್ತವೆ.'[66]

ಸ್ಮೃತಿಕಾರರು ಮತ್ತು ದಾರ್ಶನಿಕರು ಬ್ರಾಹ್ಮಣರಿಗೆ ನೈತಿಕ, ಸಾರ್ವತ್ರಿಕ ಕರ್ತವ್ಯಗಳನ್ನು ಹಾಕಿಕೊಟ್ಟಿದ್ದಾರೆ. ಪರಹಿಂಸೆ, ಇತರರ ಸೊತ್ತನ್ನು ಕಸಿದುಕೊಳ್ಳುವುದು–ಇವುಗಳ ತ್ಯಾಗವು ಸಾಮಾಜಿಕ ಬಾಳ್ವೆಯ ಮೂಲ ನಿಯಮಗಳಲ್ಲಿ ಮೊದಲನೆಯದು.[61] ಎಲ್ಲ ವಿಧಗಳ ಆತ್ಮ ಸಂಯಮವು ವೈಯಕ್ತಿಕ ಪರಿಪೂರ್ಣತೆಗಳಿಗೆ ಅತ್ಯವಶ್ಯಕ. ಕಾಯಾ–ವಾಚಾ–ಮನಸಾ ಸತ್ಯಾನುಷ್ಠಾನವೂ ನೈತಿಕ ಶುದ್ಧತೆಯ ಸಾರವಾಗಿದೆ. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಈ ಅರಿಷಡ್ವರ್ಗಗಳನ್ನು ನಿಗ್ರಹಿಸಿ, ಅತಿರಕ್ತಿಯ ಎಲ್ಲ ವಿಧದ ದ್ವೇಷಗಳನ್ನು ತ್ಯಾಗಮಾಡಲು, ಆತ್ಮದ ಶಾಂತಿ ಸ್ಥಾಪಿಸಲು ದಾನವು ಭಾರತೀಯರಿಗೆ ಒಂದು ಮಾರ್ಗವಾಗಿ ಪರಿಣಮಿಸಿದೆ.

ಜನರು ಕ್ಷಮೆಯನ್ನು, ಸಹನೆಯನ್ನು ಅಭ್ಯಾಸ ಮಾಡಬೇಕೆಂದೂ ಕೆಟ್ಟದ್ದಕ್ಕೆ–ಒಳ್ಳೆಯದನ್ನು, ದ್ವೇಷಕ್ಕೆ–ಪ್ರೇಮವನ್ನು, ಕಾರ್ಪಣ್ಯಕ್ಕೆ–ದಾನವನ್ನು, ಮೋಸಕ್ಕೆ–ಪ್ರಾಮಾಣಿಕತೆಯನ್ನು ಹಿಂತಿರುಗಿಸ–ಬೇಕೆಂಬುದು ಭಾರತೀಯರ ಅಭಿಮತವಾಗಿತ್ತು. ಅಕ್ಷರಶಃ ದಾನವೆಂದರೆ, 'ಕೊಡುಗೆ', 'ಕಾಣಿಕೆ' ಎಂದಾದರೂ ವಿಶಾಲಾರ್ಥದಲ್ಲಿ ಸಕಲ ಪ್ರಾಣಿಗಳು, ಮಾನವರು ಪಾಲ್ಗೊಳ್ಳಬಹುದಾದ ಹಾಗೂ ಸರ್ವರಿಗೂ ಉಪಕಾರವಾಗುವಂಥ ಕಾರ್ಯಗಳನ್ನು ಮಾಡಿ, ಸುತ್ತೆಲ್ಲ ಔದಾರ್ಯವನ್ನು ಹರಡುವುದಾಗಿದೆ. ಈ ನಿಟ್ಟಿನಲ್ಲಿ ಅತಿಥಿಸತ್ಕಾರ, ರೋಗಿಶುಶ್ರೂಷೆ, ಮೂಕಪ್ರಾಣಿಗಳಿಗೆ, ಬಡಬಗ್ಗರಿಗೆ ಅನ್ನೌಷಧಿಗಳನ್ನು ನೀಡುವುದು ಪ್ರತಿಯೊಬ್ಬ ಗ್ರಹಸ್ಥನ ಬಾಳ್ವೆಯಲ್ಲಿ ತಪ್ಪದ ಕರ್ತವ್ಯಗಳಾಗಿವೆ. ಕೇವಲ ವೈದಿಕ ಧರ್ಮದಲ್ಲಷ್ಟೇ ಅಲ್ಲದೆ, ಜೈನ, ಬೌದ್ಧ, ಕ್ರೈಸ್ತ ಮತ್ತು ಇಸ್ಲಾಂ ಧರ್ಮಗಳಲ್ಲೂ ದಾನಕ್ಕೆ ಪ್ರಧಾನ ಸ್ಥಾನವಿದೆ.

ಯಜ್ಞ ಕಾರ್ಯಗಳಿಗೆ ಕ್ಷೋಭೆಯಾದಾಗ, ದುರ್ಬಲರನ್ನು ಬಲಶಾಲಿಗಳು ದಮನ ಮಾಡಿದಾಗ, ಸಹಾಯ ಕೋರಿ ಬಂದವರಿಗೆ ಆಶ್ರಯವಿಲ್ಲದಾಗಲೆಲ್ಲ ಭಾರತೀಯರು ತಮ್ಮದೇ ಪ್ರಾಣಕ್ಕೂ ಆಸ್ತಿಗೂ ಸಂಚಕಾರ ಬರಬಹುದೆಂಬುದು ಗೊತ್ತಿದ್ದರೂ ಮೊರೆ ಹೋದವರನ್ನು ರಕ್ಷಿಸಲು ಕಂಕಣ ಬದ್ಧರಾಗಿದ್ದರು. ಮಹಾಯಾನ ಬೌದ್ಧ ಮತದಲ್ಲಂತೂ 'ಪಾಪಿಯಾದ

ಅಥವಾ ನರಳುತ್ತಿರುವ ಜೀವಿಗೆ ಪ್ರಯೋಜನವಾಗುವುದಾದರೆ ಸಂತನೊಬ್ಬನು ತನ್ನ ನಿರ್ವಾಣ ಪ್ರವೇಶವನ್ನೂ ಮುಂದೂಡಬೇಕು'[62] ಎಂದು ಹೇಳಲಾಗಿದೆ. ಬ್ರಾಹ್ಮಣ ಹಾಗೂ ಬೌದ್ಧ ವಾಙ್ಮಯಗಳಲ್ಲಿ ಅಶಾಶ್ವತವಾದ ಅಧಿಕಾರ, ವೈಯಕ್ತಿಕ ಸುಖ, ಅಷ್ಟೇ ಅಲ್ಲದೆ ಮೋಕ್ಷವನ್ನು ಪಡೆಯುವುದರ ಬದಲು ವಿಶಾಲ ಮಾನವತೆಯ ಸೇವೆಯನ್ನು ಪ್ರಾರ್ಥನೆ ಮಾಡುವ ಉದಾತ್ತ ಭಾವನೆಗಳು ದಾನದ ಮಹತ್ವವನ್ನು ಅಭಿವ್ಯಕ್ತಗೊಳಿಸುತ್ತವೆ.

ತೈತ್ತರೀಯ ಉಪನಿಷತ್ತಿನ ಹನ್ನೊಂದನೆಯ ಅನುವಾಕವು ಬ್ರಹ್ಮಚಾರಿ ಶಿಷ್ಯನೊಬ್ಬನು ಅಧ್ಯಯನವನ್ನು ಮುಗಿಸಿ ಗ್ರಹಸ್ಥಾಶ್ರಮವನ್ನು ಸ್ವೀಕರಿಸಲೆಂದು ಮರಳುವಾಗ ಆಚಾರ್ಯರು ಅವನಿಗೆ ಸಮಾರೋಪಿತ ಹಿತೋಪದೇಶಗಳನ್ನು ಅನುಗ್ರಹಿಸುತ್ತಿದ್ದುದನ್ನು ಉಲ್ಲೇಖಿಸುತ್ತದೆ.[63] ಇಲ್ಲೆಲ್ಲ ಔದಾರ್ಯ, ಉದಾತ್ತೀಕರಣ, ದಾನದ ಮಹತ್ವವನ್ನು ಕಾಣುತ್ತೇವೆ. ಆ ಹಿತೋಪದೇಶದ ನುಡಿಗಳು ಹೀಗಿವೆ. "ಸತ್ಯ, ಶೀಲ, ವೇದಾಧ್ಯಯನಗಳನ್ನು ಅಲಕ್ಷ್ಯಮಾಡಬೇಡ, ಅವುಗಳನ್ನು ನಿನ್ನ ಕ್ಷೇಮಾಭ್ಯುದಯಗಳನ್ನು ಅಸಡ್ಡೆ ಮಾಡದಂತೆ ಜೀವನದಲ್ಲಿ ಅನುಸಂಧಾನ ಮಾಡುತ್ತಿರು. ತಾಯಿ-ತಂದೆಯರನ್ನು, ಆಚಾರ್ಯರನ್ನು, ಅತಿಥಿಗಳನ್ನು ಪ್ರತ್ಯಕ್ಷ ದೈವವೆಂದೆ ಕಂಡು, ಅವರಿಗೆ ಸರಿಯಾದ ರೀತಿಯಲ್ಲಿ ಅವಲಂಬನೆಯನ್ನು, ಒತ್ತಾಸೆಯನ್ನು ನೀಡು. ಈ ವಿಶಾಲವಿಶ್ವದಲ್ಲಿ ದೇವ-ಪಿತೃಗಳೊಡನೆ ನಿನ್ನ ಸಂಬಂಧವನ್ನು ಸ್ಮರಿಸಿಕೊಳ್ಳುತ್ತಿರು. ಅವರು ನಿನ್ನ ಅವಧಾನವನ್ನು ಪೂಜೆ (ನಿನ್ನಿಂದ ದಾನ ಅಥವಾ ಕೊಡುಗೆ) ಯನ್ನು ಅವಲಂಬಿಸಿರುತ್ತಾರೆ. ಆದರೆ ಅವರನ್ನು ಅಸಡ್ಡೆ ಮಾಡದೆ, ಶ್ರದ್ಧಾಭಕ್ತಿಗಳಿಂದ ಬಳಿ ಸಾರುತ್ತಿರು. ಅತಿಥಿಗಳನ್ನು ವಿಳಂಬವಿಲ್ಲದೆಯೂ ಉತ್ಸಾಹದಿಂದಲೂ ಕಾರ್ಪಣ್ಯವಿಲ್ಲದೆಯೂ ಸತ್ಕರಿಸು. ದೀನರಿಗೆ ನೆರವನ್ನು ನೀಡುವಾಗ ಅವರು ಕೊಡುಗೆಯ ರೀತಿಯಿಂದ ಮನನೊಂದುಕೊಂಡಾರು ಜೋಕೆ. ಆದುದರಿಂದ, ಕೊಡುವುದನ್ನು ನಿಗರ್ವಿಯಾಗಿಯೂ ಸೌಹಾರ್ದದಿಂದಲೂ ಕೈಯ್ಯೊಡ್ಡುವವನು ಮನ ನೊಂದುಕೊಂಡಾನೆಂಬ ಭಯದಿಂದಲೂ ಕೊಡು".[64] ಈ ಮಾತುಗಳು ಅಂದಿನ ಕಾಲದ ಔದಾರ್ಯತೆಗೆ, ದಾನಶೀಲತೆಗೆ ಕನ್ನಡಿ ಹಿಡಿದಂತಿವೆ.

ಭಾರತೀಯರ ಜನಜೀವನದಲ್ಲಿ ಅನುರಣಿತವಾಗಿ ಪ್ರಭಾವ ಬೀರಿರುವ ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತಗಳೂ ಸಹ ದಾನದ ಮಹತ್ವವನ್ನು ಸಾರಿ ಹೇಳುತ್ತವೆ. ತಂದೆಯ ಮಾತನ್ನು ಉಳಿಸಲೆಂದು ತ್ಯಾಗವನ್ನೇ ಜೀವನದ ಗುರಿಯನ್ನಾಗಿಸಿಕೊಂಡ ರಾಮ, ರಾಮಾಯಣದ ಅಧಿನಾಯಕ. ಅಂತೆಯೇ ಮಹಾಭಾರತದಲ್ಲಿ ಕರ್ಣ ದಾನಶೂರನೆನಿಸಿದ್ದಾನೆ. ಪಾಂಡವರಿಗೆ ರಾಜ್ಯ ನೀಡಲು ಧಿಕ್ಕರಿಸಿದ ದುರ್ಯೋಧನ ಮಹಾಭಾರತದಲ್ಲಿ ಖಳನಾಯಕನಂತೆ ಪ್ರತಿಬಿಂಬಿತನಾಗಿದ್ದಾನೆ. ಪಾಂಡವರು ತಮ್ಮಲ್ಲಿದ್ದ ಅಕ್ಷಯಪಾತ್ರೆಯಿಂದ ಹಸಿದವರಿಗೆ ನಿತ್ಯ ಅನ್ನದಾನ ಮಾಡಿ ಸ್ವರ್ಗಕ್ಕೆ ಸಂದರೆಂದು ಮಹಾಭಾರತ ಪ್ರತಿಪಾದಿಸುತ್ತದೆ.[65]

ಇನ್ನು ಹದಿನೆಂಟು ಮಹಾಪುರಾಣಗಳಲ್ಲಿ ಪದ್ಮಪುರಾಣ, ಅಗ್ನಿಪುರಾಣ, ಕೂರ್ಮಪುರಾಣ ಮತ್ತು ಗರುಡಪುರಾಣಗಳು ದಾನದ ಮಹತ್ವವನ್ನು ವಿವರಿಸುವುದಕ್ಕಾಗಿಯೇ ರಚಿತವಾದಂತಿವೆ.

ಪುರಾಣಗಳ ಪ್ರಕಾರ 'ದಾನವು ನೈತಿಕ ಗುಣಗಳಾದ ದಯೆ, ತ್ಯಾಗ, ಪ್ರಾಮಾಣಿಕತೆ (ಆರ್ಜವ) ಮತ್ತು ಸಮತೆಗಳ ಮೇಲೆ ನಿಂತ ಸಾಮಾಜಿಕ ಕರ್ತವ್ಯ.' ಶಿಬಿ, ಕರ್ಣ ಮತ್ತು ದಧೀಚಿ ಇವರ ಕಥೆಗಳಲ್ಲಿ ದಾನದ ಮಹತ್ವ ಚಿತ್ರಿತವಾಗಿದೆ. ದಾನದಿಂದಲೇ ದಯೆ, ತ್ಯಾಗ, ಪ್ರಾಮಾಣಿಕತೆ, ಸಮತೆಗಳು ಸೂಚಿತವಾಗುತ್ತವೆ. ದಾನವು ಕೊಟ್ಟವನನ್ನು ದಯಾಶೀಲ ಮತ್ತು ಉದಾತ್ತ ವ್ಯಕ್ತಿಯನ್ನಾಗಿ ಮಾಡಿದರೆ; ಪ್ರತಿಗ್ರಹಿ(ದಾನ ಪಡೆದವ)ಗೆ ಭೌತಿಕ ಪ್ರಯೋಜನವನ್ನುಂಟು ಮಾಡುತ್ತದೆ. ಸಾತ್ವಿಕದಾನವು ಆದರ್ಶ ದಾನವಾಗಿದೆ. ಲೋಕವಂದ್ಯರಿಂದ ಇದು ಶ್ಲಾಘನೆಗೆ ಪಾತ್ರವಾಗಿದೆ.[66]

ಪದ್ಮಪುರಾಣದಲ್ಲಿ ಹೇಳುವಂತೆ "ಹಿಂದಿನ ಜನ್ಮದಲ್ಲಿ ದಾನ ಮಾಡಿದ್ದರೂ ಜನ್ಮಾಂತರದಲ್ಲಿ ಅದು ಭೋಗ-ಭಾಗ್ಯಗಳಿಗೆ ಕಾರಣವಾಗುತ್ತದೆ. ದಾನ ಕೊಡುವುದಿರಲಿ, ದಾನ ಕೊಡುವುದನ್ನು ಕಣ್ಣಿಂದ ನೋಡಿದರೂ ಮನಸ್ಸಿನಿಂದ ಅನುಭವಿಸಿದರೂ ಹೃದಯದಿಂದ ಹಿಗ್ಗಿದರೂ ಭಕ್ತಿಯಿಂದ ಕೇಳಿದರೂ ಕೋಟಿ ಪಾಪಗಳು ತೊಲಗಿ ಪುಣ್ಯ ಲಭಿಸುತ್ತದೆ". ಯಜ್ಞ, ತಪಸ್ಸುಗಳಷ್ಟೇ ದಾನವೂ ಸಹ ಪುಣ್ಯಕರವಾದದ್ದು, ಎಂಬುದು ಪ್ರಾಚೀನ ಭಾರತೀಯರ ನಂಬಿಕೆಯಾಗಿತ್ತು. ಇದು ದಾನಕ್ಕಿರುವ ಪ್ರಾಮುಖ್ಯತೆಯನ್ನು ತೋರುತ್ತದೆ. "ದಾನ ಮಾಡದ ಯಜಮಾನನನ್ನು, ದಾನ ಸ್ವೀಕರಿಸದ ಆಚಾರ್ಯನನ್ನು ಯಜ್ಞವು ನಾಶಮಾಡುತ್ತದೆ."[67] "ಸರ್ವಸ್ವವನ್ನು ದಾನ ಮಾಡುವವರಿಗೆ ದೇವತೆಗಳೂ ವಶರಾಗುತ್ತಾರೆ. ದಾನಶೀಲನಾದ ರಾಜನು ಲೋಕದಲ್ಲಿ ಜನರಿಂದ ದೇವತೆಯಂತೆ ಪೂಜಿಸಲ್ಪಡುತ್ತಾನೆ".[68] ಎಂಬುದು ಕಲ್ಯಾಣ ಚಾಲುಕ್ಯ ಚಕ್ರವರ್ತಿ ಮೂರನೆಯ ಸೋಮೇಶ್ವರನ ಅಭಿಪ್ರಾಯ.

ಬ್ರಹ್ಮಪುರಾಣವು "ತಥಾ ಸದ್ವಿನಿಯೋಗಾಯ ವಿಜ್ಞೇಯಂ ಗಹನಂ ನೃಣಾಂ" ಎನ್ನುತ್ತದೆ.[69] ಅಂದರೆ ಐಶ್ವರ್ಯವನ್ನು ಸಂಗ್ರಹಿಸುವುದೇ ಬಡಬಗ್ಗರಿಗೆ ದಾನ ಮಾಡಲು ಎಂದರ್ಥ. ಆರ್ಥಿಕ ಸಾಮರಸ್ಯವನ್ನುಂಟು ಮಾಡಿ; ಸಮಾಜದಲ್ಲಿ ಶಾಂತಿ ಸೌಹಾರ್ಧತೆಯನ್ನುಂಟು ಮಾಡುವ ದಾನದ ಪ್ರಾಮುಖ್ಯತೆಯನ್ನು ಅದು ಹೇಳುತ್ತದೆ. ವಿಷ್ಣುಪುರಾಣವು "ಯಜನಂ ಯಾಜನಂ ದಾನಂ ಬ್ರಾಹ್ಮಣಸ್ಯ ಪರಿಗ್ರಹಃ। ಅಧ್ಯಾಪನಂ ಬೌಧ್ಯಾಯನ ಷಟ್ ಕರ್ಮಾಣಿದ್ವಿಜೋತ್ತಮಃ॥" ಎಂದು ಹೇಳುತ್ತದೆ.[70] ಅಂದರೆ, ಅಧ್ಯಯನ-ಅಧ್ಯಾಪನ, ಯಜನ-ಯಾಜನ, ಮತ್ತು ದಾನ-ಪರಿಗ್ರಹಗಳು ಬ್ರಾಹ್ಮಣನ ಷಟ್ಕರ್ಮಗಳು. ಇಲ್ಲಿಯೂ ಬ್ರಾಹ್ಮಣರ ಆರು ಕರ್ತವ್ಯಗಳಲ್ಲಿ ದಾನ ಮತ್ತು ಪರಿಗ್ರಹ (ದಾನ ಸ್ವೀಕರಿಸುವುದು) ಎಂಬ ಎರಡು ಕರ್ತವ್ಯಗಳು ದಾನಕ್ಕಿದ್ದ ಪ್ರಾಧಾನ್ಯತೆಯನ್ನು ವಿಷದಪಡಿಸುತ್ತವೆ.

ಮಾನವನ ಗುರಿ ಅಂತಿಮವಾಗಿ ಮೋಕ್ಷ ಸಂಪಾದನೆ. ಮಾನವ ಜೀವನದ ನಾಲ್ಕು ಘಟ್ಟಗಳಾದ ಬ್ರಹ್ಮಚರ್ಯ, ಗ್ರಹಸ್ಥ, ವಾನಪ್ರಸ್ಥ, ಸಂನ್ಯಾಸಾಶ್ರಮಗಳ ಮೂಲಕ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳನ್ನು ಸಾಧಿಸಲೂ ಸಹ ದಾನದ ಅವಶ್ಯಕತೆಯನ್ನು ಭಾರತೀಯ ಪರಂಪರೆಯಲ್ಲಿ ಬಿಂಬಿಸಲಾಗಿದೆ. ಶ್ರದ್ಧೆಯೇ ಆಧಾರವಾಗಿರುವ ಅಶನ, ವಸನ,

ದಕ್ಷಿಣೆ (ಉಣ್ಣುವುದು, ಉಡುವುದು, ಸಂಭಾವನೆ ಪಡೆಯುವುದು) ಇವುಗಳನ್ನು ಒಳಗೊಂಡಿರುವ ಶ್ರಾದ್ಧಗಳಲ್ಲೂ ದಾನ-ಧರ್ಮಕ್ಕೆ ವಿಶೇಷ ಸ್ಥಾನವಿದೆ.

ವೇದಗಳು, ಸ್ಮೃತಿಗಳು, ಧರ್ಮಸೂತ್ರಗಳು, ಮಹಾಪುರಾಣಗಳು ಮಾತ್ರವೇ ದಾನವನ್ನು, ದಾನಕ್ಕಿರುವ ಮಹತ್ವವನ್ನು ಹೇಳುವುದಿಲ್ಲ. ರಾಜನೀತಿ ಗ್ರಂಥಗಳು, ಅರ್ಥಶಾಸ್ತ್ರದ ಸಿದ್ಧಾಂತಗಳು ಸಹ ದಾನದ ಮಹತ್ವವನ್ನು ಪುರಸ್ಕರಿಸುತ್ತವೆ.

'ಅರ್ಥಶಾಸ್ತ್ರ' ಕೃತಿಯ ಕರ್ತೃವಾದ ಕೌಟಿಲ್ಯ ರಾಜ, ಮಂತ್ರಿ, ಬಲ, ಕೋಶ, ದುರ್ಗ, ಜನಪದ ಮತ್ತು ಮಿತ್ರ ಎಂಬ ರಾಜ್ಯದ ಸಪ್ತಾಂಗಗಳ ಬಗ್ಗೆ ವಿವರಿಸುತ್ತಾ, ಅವುಗಳಲ್ಲಿ ಅತ್ಯಂತ ಮುಖ್ಯವಾದ 'ಜನಪದ' ಎಂಬ ಅಂಗವನ್ನು ಅಂದರೆ, ರಾಜ್ಯದ ಪ್ರಜೆಗಳನ್ನು ಹತೋಟಿಯಲ್ಲಿಟ್ಟುಕೊಂಡು ಪ್ರಭುತ್ವವನ್ನು ಹೊಂದಲು 'ದಾನ'ವನ್ನು ಒಂದು ಸಾಧನವಾಗಿ ಬಳಸಲು ಸೂಚಿಸುತ್ತಾನೆ[71].

ಶುಕ್ರನೀತಿಸಾರವು 'ರಾಜ್ಯಾಡಳಿತದ ವೆಚ್ಚದಲ್ಲಿ ನಾಲ್ಕು ಪ್ರಧಾನ ಅಂಶಗಳಿದ್ದು, ಅವುಗಳ ದಾನವೂ ಒಂದಾಗಿದೆ' ಎಂದು ಹೇಳುತ್ತಾ ರಾಜ್ಯದ ಒಟ್ಟು ಉತ್ಪತ್ತಿಯ ಶೇಕಡಾ ಎಂಟರಷ್ಟನ್ನು ರಾಜನಾದವನು ದಾನಕ್ಕೆ ಬಳಸಬೇಕೆಂದು ಹೇಳುತ್ತದೆ.[72]

ದಾನದ ಕುರಿತು ಡಾ. ಪಿ. ವ್ಹಿ. ಕಾಣೆಯವರು "ಕೃತ, ತ್ರೇತ, ದ್ವಾಪರ ಮತ್ತು ಕಲಿಯುಗಗಳಲ್ಲಿ ಕ್ರಮವಾಗಿ ತಪಸ್ಸು, ಜ್ಞಾನ, ಯಜ್ಞ ಮತ್ತು ದಾನಗಳು ಆತ್ಮೋನ್ನತಿಯ ಮಾರ್ಗಗಳಾಗಿದ್ದವು" ಎಂದು ಹೇಳುತ್ತಾರೆ.[73]

ಇನ್ನು ಕವಿ ಸರ್ವಜ್ಞನಂತೂ ದಾನದ ಮಹತ್ವವನ್ನು ಪರಿಪರಿಯಾಗಿ ಹೇಳಿದ್ದಾನೆ. "ಗಾನ ವಿದ್ಯೆಯೆ ಲೇಸು, ಮಾನವತಿ ಸತಿಲೇಸು ಸಾನುಭಾವಿಗಳ ಕಳೆಲೇಸು। ಎಲ್ಲಕ್ಕೂ ದಾನಿಯೇ ಲೇಸು", "ಸಿರಿಬಂದ ಕಾಲಕ್ಕೆ ಕರೆದು ದಾನವ ಮಾಡು । ಪರಿಣಾಮವಕ್ಕು ಪದವಕ್ಕೂ ಕೈಲಾಸ ಬಿನ್ನಾಣವಕ್ಕು ।", "ಹುಟ್ಟುವಾಗಲೆ ಧನವ ಮೊಟ್ಟೆಗಟ್ಟಿಳಿದಿಹನೇ? । ಕಟ್ಟಕಡೆಯಲ್ಲಿ ಕೊಂಡೊಯ್ಯನಿದನರಿದು । ಕೊಟ್ಟುಂಬ ದಾನಿ", "ಕೊಡುವಾತನೇ ಹರನು ಪಡೆವಾತನೇ ನರನು । ಒಡಲ ಒಡವೆಗಳು ಕೆಡೆದು ಹೋಗದ ಮುನ್ನ । ಕೊಡು ಪಾತ್ರವರಿದು", "ಇಕ್ಕಿದಾತನು ಉಂಡು ನಕ್ಕು ಸ್ವರ್ಗಕ್ಕೆ ಹೋಹ । ಇಕ್ಕದವನು ಹೋಹ ನರಕಕ್ಕೆ, ಲೋಕದೊಳ। ಗಿಕ್ಕಲೇಬೇಕು", "ದೇಶವನ್ನು ಆಳುವರೆ ಹಾಸಿಗೆಯಲೊರಗುವರೆ । ಈಶನ ಒಲುಮೆ ಪಡೆಯುವರೆ ದಾನವನು ಸಂತೋಷದಿಂ ಮಾಡು. ಹೀಗೆ ಸರ್ವಜ್ಞನ ಅನೇಕ ವಚನಗಳು ದಾನದ ಮಹತ್ವವನ್ನು ಸಾರುತ್ತವೆ."[69] ಸರ್ವಜ್ಞನಂತೆ ಅನುಭಾವಿಗಳು, ಕವಿಗಳು ತಮ್ಮದೇ ಆದ ರೀತಿಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ.

ಕಲ್ಯಾಣ ಚಾಲುಕ್ಯರು ಇದೇ ಪರಂಪರೆಯನ್ನೇ ಮುಂದುವರಿಸಿಕೊಂಡು ಬಂದಿದ್ದಾರೆ. ಅವರ ಅನೇಕ ಶಾಸನಗಳಲ್ಲಿ ಕೂಡ ದಾನದ ಮಹತ್ವ ಮತ್ತು ದಾನವನ್ನು ಕಾಯುವವರಿಗೊದಗುವ ಪ್ರತಿಫಲವನ್ನು ಹೇಳಲಾಗಿದೆ. ನಾಲ್ಕನೆಯ ಅಧ್ಯಾಯದಲ್ಲಿ ಇದನ್ನು ನೋಡಬಹುದು.

## ೨.೭ ದಾನದ ಪ್ರಕಾರಗಳು

ಭಾರತೀಯ ಪರಂಪರೆಯಲ್ಲಿ ಹಲವಾರು ವಿಧದ ದಾನಗಳ ಉಲ್ಲೇಖವಿದೆ. ಭೂಮಿಯ ರೂಪದಲ್ಲಿ, ಹಣದ ರೂಪದಲ್ಲಿ, ವಸ್ತುಗಳ ರೂಪದಲ್ಲಿ ಸೇವೆಯ ರೂಪದಲ್ಲಿ ಹಲವು ರೀತಿಯ ದಾನಗಳು ಪ್ರಾಚೀನ ಕಾಲದಲ್ಲಿ ಪ್ರಚಲಿತವಿದ್ದವು. ಹಾಗೆಯೇ ದಾನದ ವಿಧಗಳನ್ನು ಹುಡುಕುತ್ತ ಹೊರಟರೆ ಮೂವತ್ತಕ್ಕೂ ಹೆಚ್ಚು ವೈವಿಧ್ಯಮಯ ದಾನಗಳ ಉಲ್ಲೇಖಗಳು ದೊರೆಯುತ್ತವೆ. ಈ ಎಲ್ಲ ದಾನಗಳು ವಸ್ತುಗಳನ್ನಾಧರಿಸಿವೆ ಎಂಬುದನ್ನು ಗಮನಿಸಬಹುದಾಗಿದೆ. ಇವಲ್ಲದೆ ದಾನದ ವಿಧಾನವನ್ನಾಧರಿಸಿ ಹದಿನಾರು ವಿಧದ ದಾನಗಳಿವೆ. ವಸ್ತುಗಳನ್ನಾಧರಿಸಿದ ವಿಧಗಳನ್ನು ಈ ಕೆಳಗಿನಂತೆ ಪಟ್ಟಿಮಾಡಬಹುದು.

| | |
|---|---|
| 1) ಭೂಮಿದಾನ | 2) ಅನ್ನದಾನ (ಆಹಾರದಾನ) |
| 3) ತಿಲದಾನ/ಎಳ್ಳುದಾನ | 4) ಗೋದಾನ (ಕವಿಲೆ ದಾನ) |
| 5) ಸುವರ್ಣದಾನ (ಹಿರಣ್ಯದಾನ) | 6) ದೀಪದಾನ |
| 7) ತಂಡುಲದಾನ (ಅಕ್ಕಿದಾನ) | 8) ಉದಕದಾನ |
| 9) ಕನ್ಯಾದಾನ | 10) ಮನೆದಾನ |
| 11) ಕೊಡೆದಾನ | 12) ಪಾದರಕ್ಷೆದಾನ |
| 13) ದೇಹದಾನ | 14) ಅಶ್ವದಾನ |
| 15) ದ್ರವ್ಯದಾನ | 16) ಅಭಯದಾನ (ರಕ್ಷಣೆ) |
| 17) ಗ್ರಾಮದಾನ | 18) ವಸ್ತುದಾನಗಳು |
| 19) ಶಾಸ್ತ್ರದಾನ | 20) ಉಭಯಮುಖದಾನ (ಈಯಲಿರುವ ಆಕಳು) |
| 21) ಗೋಸಹಸ್ರದಾನ | 22) ಭೈಷಜ್ಯದಾನ (ಔಷಧದಾನ) |
| 23) ಸಪ್ತಸಾಗರದಾನ | 24) ಸರ್ವಸ್ವದಾನ |

25) ಸುವರ್ಣಮೇರುದಾನ (ಬಂಗಾರದಿಂದ ಮಾಡಿದ ಪರ್ವತಾಕಾರದ ವಸ್ತುದಾನ)

26) ಹಿರಣ್ಯಗರ್ಭದಾನ (ಚಿನ್ನದಿಂದ ಮಾಡಿದ ಗರ್ಭದಾನ)

| | |
|---|---|
| 27) ಹೇಮಾಶ್ವದಾನ (ಕುದುರೆ) | 28) ದೋಣಿದಾನ |
| 29) ಬಲಿದಾನ | 30) ಅಂಗಡಿದಾನ |

31) ಎಣ್ಣೆ ಮತ್ತು ಗಾಣದಾನ

ಹೀಗೆ ಅನೇಕ ದಾನಗಳು ಮತ್ತು ದಾನದ ಹೆಸರುಗಳು ಉಲ್ಲೇಖವಾಗಿವೆ. ಪ್ರಾಚೀನ ಭಾರತದಲ್ಲಿ ಇಂಥ ದಾನಗಳು ಚಲಾವಣೆಯಲ್ಲಿದ್ದವು ಎಂಬುದನ್ನು ಅನೇಕ ಪುರಾವೆಗಳಿಂದ

ತಿಳಿದುಬರುತ್ತದೆ. ಬಿಜಾಪೂರ ಜಿಲ್ಲೆಯ ಸಿಂಧಗಿ ತಾಲೂಕಿನ ಕಡ್ಲೆವಾಡ ಗ್ರಾಮದಲ್ಲಿ ಸಿಕ್ಕಿರುವ ಶಾಸನದಲ್ಲಿ "ಸ್ವಯಂಭು ಸೋಮನಾಥ ದೇವಾಲಯಕ್ಕೆ ಬಂದು ಅಲ್ಲಿ ಷೋಡಷ ಮಹಾದಾನ (ಹದಿನಾರು ವಿಧದ ದಾನ) ಮಾಡಿ ಆ ದೇವರಿಗೆ ಆಲಂದೆಸಾಸಿರದ ಕಂಪನ ಬಾಗವಾಡಿ 30ರ ಬಳಿಯ ಹಿಂಚಗೇರಿ ಮೇಲಾಳ್ಕೆಯನ್ನು ಬಿಟ್ಟು ಕೊಟ್ಟ ಉಲ್ಲೇಖವಿದೆ.[75]

ಕಲ್ಯಾಣ ಚಾಲುಕ್ಯ ಅರಸುಮನೆತನದ ಶ್ರೇಷ್ಠ ದೊರೆಗಳಲ್ಲಿ ಒಬ್ಬನಾದ ಮೂರನೇ ಸೋಮೇಶ್ವರನು ತನ್ನ "ಮಾನಸೋಲ್ಲಾಸ" ಕೃತಿಯಲ್ಲಿ ಷೋಡಷ ಮಹಾದಾನಗಳ ಬಗ್ಗೆ ಹೇಳುತ್ತಾನೆ. ಅವುಗಳನ್ನು ಈ ರೀತಿಯಲ್ಲಿ ಸೂತ್ರೀಕರಿಸಿ ಹೇಳಬಹುದಾಗಿದೆ. ಅಭೀಷ್ಟ, ಹಾಯನ, ದೇಷ್ಯ, ಕರಜ, ದಂತಿಜ, ಸಪ್ತಿಜ, ಗ್ರಾಮಜ, ಶಾಸನ, ಭೂಷಾ, ವಸನ, ಪ್ರತಿಪತ್ತಿಜಾ, ಆಕರ, ರುಕ್ಮಜ, ಕನ್ಯಾ, ವೈಶ್ಯ, ಮೇಲಾಕರವೆಂದು ಹೀಗೆ ಹದಿನಾರು ವಿಧದ ದಾನಗಳು.[76] ಈ ಎಲ್ಲ ದಾನಗಳ ಬಗ್ಗೆ ಒಂದಿಷ್ಟು ಚರ್ಚಿಸುವುದು ಅಗತ್ಯವೆನಿಸುತ್ತದೆ.

೧. **ಅಭೀಷ್ಟದಾನ** : ಯಾವ ವ್ಯಕ್ತಿಗೆ ಯಾವ ವಸ್ತು ರುಚಿಸುತ್ತದೆಯೋ ಆ ವ್ಯಕ್ತಿಗೆ ಯೋಗ್ಯತಾನುಸಾರವಾಗಿ ದಾನವನ್ನು ಕೊಡುವುದಕ್ಕೆ ಅಭೀಷ್ಠದಾನ ಎಂದು ಕರೆಯುತ್ತಾರೆ. ಶಾಸ್ತ್ರಕಾರರು ಇದೊಂದು ಉತ್ತಮ ದಾನ ಎಂದು ಅಭಿಪ್ರಾಯಿಸಿದ್ದಾರೆ.

೨. **ಹಾಯನದಾನ** : ಒಂದು ಕುಟುಂಬದ ಪಾಲನೆ ಪೋಷಣೆ ಒಂದು ವರ್ಷದವರೆಗೆ ಸಾಕಾಗುವಷ್ಟು ಕಾಣಿಕೆ ಕೊಟ್ಟರೆ ಅದಕ್ಕೆ ಹಾಯನ ಎಂದು ಕರೆಯುತ್ತಾರೆ.

೩. **ದೇಷ್ಯದಾನ** : ಒಂದು ವಿಶಿಷ್ಟವಾದ ಪ್ರದೇಶವನ್ನು ದಾನಮಾಡುವುದಕ್ಕೆ ದೇಷ್ಯದಾನ ಎನ್ನುತ್ತಾರೆ.

೪. **ಕರಜದಾನ** : ರಾಷ್ಟ್ರದಲ್ಲಿ ದೊರೆಯುವ 'ಕರ'ವನ್ನು ದಾನಮಾಡಿದರೆ, ಅದು 'ಕರಜ' ಎನಿಸಿಕೊಳ್ಳುತ್ತದೆ. ಅಂದರೆ ಯಾವುದೇ ವಸ್ತುವಿನಿಂದ ಬಂದ ಸುಂಕವನ್ನು ದಾನ ಮಾಡುವದು ಎಂದರ್ಥ.

೫. **ದಂತಿಜದಾನ** : ದಂತಿ ಅಂದರೆ ಆನೆ. ಆನೆಯನ್ನು ದಾನವಾಗಿ ಕೊಡುವದು ದಂತಿಜದಾನ.

೬. **ಸಪ್ತಿಜದಾನ** : ಸಪ್ತಿಜ ಎಂದರೆ ಕುದುರೆ; ಕುದುರೆಯನ್ನು ದಾನವಾಗಿ ಕೊಡುವದು ಸಪ್ತಿಜದಾನ.

೭. **ಗ್ರಾಮಜದಾನ** : ದಾನ ಪಡೆದವನು ಪಾಲಿಸಲಿ ಅಥವಾ ಬಿಡಲಿ ಅವನಿಗೆ ಗ್ರಾಮವನ್ನು ದಾನವಾಗಿ ಕೊಟ್ಟರೆ ಅದಕ್ಕೆ ಗ್ರಾಮಜದಾನ ಎಂದು ಕರೆಯಲಾಗಿದೆ.

೮. **ಶಾಸನದಾನ** : ಶಾಸನದಾನ ಅಂದರೆ ಪುತ್ರ, ಪೌತ್ರ, ಪ್ರಪೌತ್ರ್ಯನಿಂದ ಕೊಡಲ್ಪಟ್ಟದಾನವು ವ್ಯರ್ಥವಾಗುವದಲ್ಲ ಎಂದು ಏಕಮನಸ್ಸಿನಿಂದ ನೀಡಿದ ದಾನ.

೯. **ಭೂಷಾದಾನ** : ಶ್ರೇಷ್ಠವಾದ ರತ್ನದಿಂದ ಕೂಡಿದ ಆಭರಣವನ್ನು ದಾನವಾಗಿ ಕೊಡುವದಕ್ಕೆ ಭೂಷಾದಾನ ಎನ್ನುವರು.

೧೦. **ವಸನದಾನ** : ನಾನಾಬಗೆಯ ಬಣ್ಣ, ನೂಲುಗಳುಳ್ಳ ನಾನಾ ದೇಶಗಳಲ್ಲಿ ತಯಾರಿಸಲ್ಪಟ್ಟ ಸೂಕ್ಷ್ಮವಾದ ಶ್ರೇಷ್ಠವಾದ, ಅತೀ ಸುಂದರವಾದ ಸಾಕಷ್ಟು ಸಂಖ್ಯೆಯ ವಸ್ತ್ರಗಳನ್ನು ದಾನವಾಗಿ ಕೊಡುವದಕ್ಕೆ ವಸನದಾನ ಎಂದು ಹೇಳುತ್ತಾರೆ.

೧೧. **ಪ್ರತಿಪತ್ತಿಕದಾನ** : ಆಸನ, ಚಾಮರ, ಛತ್ರ, ವಾಹನ ಮುಂತಾದವುಗಳನ್ನು ಉಚಿತವಾದ ಸಮ್ಮಾನಪೂರ್ವಕವಾಗಿ ದಾನಮಾಡುವುದಕ್ಕೆ ಪ್ರತಿಪತ್ತಿಕದಾನ ಎಂದು ಹೇಳಲಾಗಿದೆ.

೧೨. **ಆಕರದಾನ** : ಯಾವ ಭೂಮಿಯಲ್ಲಿ ಬೆಳ್ಳಿ, ಬಂಗಾರ, ಹಾಗೂ ರತ್ನಗಳ ಖಣಿ ಇರುತ್ತವೆಯೋ ಆ ಪ್ರದೇಶವನ್ನು ದಾನಮಾಡುವದು.

೧೩. **ರುಕ್ಮಜದಾನ** : ಶ್ರೇಷ್ಠವಾದ ವಿಪುಲ ಪ್ರಮಾಣದಲ್ಲಿರುವ ಬಂಗಾರದ ನಾಣ್ಯಗಳನ್ನು ದಾನ ಮಾಡುವದಕ್ಕೆ ರುಕ್ಮಜದಾನ ಎನ್ನುವರು.

೧೪. **ಕನ್ಯಾದಾನ** : ಆಭರಣಗಳಿಂದ ಭೂಷಿತೆಯಾದ ಸುಲಕ್ಷಣಿಯಾದ ಕನ್ಯೆಯನ್ನು ವಿಧಿ ಪೂರ್ವಕವಾಗಿ ದಾನ ಮಾಡುವದಕ್ಕೆ ಕನ್ಯಾದಾನ ಎಂದು ಕರೆಯುವರು.

೧೫. **ವೈಶ್ಯದಾನ** : ರೂಪ, ಯೌವ್ವನ ಸಂಪನ್ನೆಯಾದ ನೃತ್ಯ–ಗೀತ ವಿಶಾರದೆಯಾದ ವೇಶ್ಯೆಯನ್ನು ದಾನ ಮಾಡುವದು.

೧೬. **ಮೇಲಾಕರದಾನ** : ಎಲ್ಲಿ ನೌಕಾ ವ್ಯಾಪಾರ ಮಾಡುವ ಶ್ರೀಮಂತ ವ್ಯಾಪಾರಿಗಳು ಬಹುಸಂಖ್ಯೆಯಲ್ಲಿದ್ದು, ಸಮುದ್ರತೀರದಲ್ಲಿ ಬಹಳಷ್ಟು ಸರಕು ಮಳಗಿಗಳನ್ನು ಹೊಂದಿದ್ದಾರೊ ಅಂತಹ ಪಟ್ಟಣ(ಬಂದರು)ವನ್ನು ದಾನ ಮಾಡುವದಕ್ಕೆ ಮೇಲಾಕರದಾನ ಎಂದು ಕರೆಯುವರು.

ಈ ಮೇಲೆ ಉಲ್ಲೇಖಿಸಿದ ಹದಿನಾರು ವಿಧದ ದಾನಗಳಲ್ಲಿ ಆಕರದಾನ, ಮೇಲಾಕರ ದಾನಗಳನ್ನು ಬಿಟ್ಟರೆ, ಉಳಿದ ಎಲ್ಲ ದಾನಗಳನ್ನು ನೀಡಿದ್ದರ ಬಗ್ಗೆ ಕಲ್ಯಾಣ ಚಾಲುಕ್ಯರ ಶಾಸನಗಳಲ್ಲಿ ಉಲ್ಲೇಖಗಳು ಕಂಡುಬರುತ್ತವೆ. ಅವುಗಳನ್ನು ನಾಲ್ಕನೇ ಅಧ್ಯಾಯಗಳಲ್ಲಿ ವಿಶ್ಲೇಷಿಸಲಾಗಿದೆ.

ಇದಲ್ಲದೆ ಜೈನಧರ್ಮದ ಪ್ರಕಾರ ನಾಲ್ಕು ಪ್ರಮುಖ ದಾನಗಳಿವೆ. ಪ್ರತಿಸೊಬ್ಬ ಶ್ರಾವಕನೂ ಚತುರ್ವಿಧ ದಾನಗಳನ್ನು ಮಾಡಲೇಬೇಕೆಂದು ಜೈನಧರ್ಮ ಅಪೇಕ್ಷಿಸುತ್ತದೆ. ಅವುಗಳೆಂದರೆ : ಅಭಯದಾನ, ಆಹಾರದಾನ, ಔಷಧದಾನ, ಶಾಸ್ತ್ರದಾನ. ಇದನ್ನು ಜೈನಗ್ರಂಥಗಳ ಶ್ಲೋಕದಲ್ಲಿ ಹೀಗೆ ಹೇಳಲಾಗಿದೆ. "ಅಭಯಾಹಾರ, ಬೈಷಜ್ಯ,ಶಾಸ್ತ್ರ ಭೇದಾಚ್ಚತವಿದಂ ದಾನ"[77] ಇದಕ್ಕೆ ಪೂರಕ ಎಂಬಂತೆ ಅನೇಕ ಜೈನಶಾಸನಗಳಲ್ಲಿ ಈ ಮೇಲಿನ ದಾನಗಳನ್ನು ನೀಡಿದ ಉಲ್ಲೇಖಗಳಿವೆ.

ದಾನವನ್ನು ಮಹಾಕವಿ ಪಂಪ 'ತ್ಯಾಗ' (ಚಾಗ) ಎಂದು ಕರೆದಿದ್ದಾನೆ. ಸಾಮಾಜಿಕವಾಗಿ ದಾನ ಪ್ರತಿಷ್ಠೆಯ ವಿಷಯವಾಗಿತ್ತು. ಪ್ರಾಚೀನ ಕಾಲದಿಂದಲೂ ಬ್ರಾಹ್ಮಣರ ಷಟ್ಕರ್ಮಗಳಲ್ಲಿ ದಾನವು ಒಂದು ಮಹತ್ವದ ಕ್ರಿಯಾಕಾರ್ಯವಾಗಿತ್ತು. ಧರ್ಮ ನಿಯಮದ ರೀತಿಗಳಲ್ಲಿರುವ ಯಜನ-ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪರಿಗ್ರಹಣ ಇವು ಷಟ್ಕರ್ಮಗಳಾಗಿದ್ದವು. ವೈದಿಕ ಪರಂಪರೆಯನ್ನು ಅನುಸರಿಸುವ ಪ್ರತಿಯೊಬ್ಬ ವ್ಯಕ್ತಿಯು ಇವುಗಳನ್ನು ಪಾಲಿಸಬೇಕು. ಅಂದರೆ 'ದಾನ' ಎನ್ನುವದು ವೈದಿಕರು ಅನುಸರಿಸಲೇಬೇಕಾದ ಒಂದು ನಿಯಮ ಆಗಿತ್ತು. ಹಾಗೆಯೇ ಪರಿಗ್ರಹಣ ಅಂದರೆ ದಾನ ಸ್ವೀಕರಿಸುವದು. ಇದೂ ಕೂಡ ಬ್ರಾಹ್ಮಣರ ಆದ್ಯ ಕರ್ತವ್ಯವಾಗಿತ್ತು. ದಾನವನ್ನು ನೀಡುವದು ಮತ್ತು ಪಡೆಯುವದು ನಿಯಮರೂಪದಲ್ಲಿ ಅಥವಾ ಮಾಡಬೇಕಾದ ಕರ್ತವ್ಯರೂಪದಲ್ಲಿ ಕಂಡು ಬಂದಿರುವ ಒಂದಂಶವಾಗಿದೆ. ಜೈನರು ವೈದಿಕರ ನಿಯಮಗಳೆಲ್ಲವನ್ನು ತಿರಸ್ಕರಿಸಿದರೂ ಕೂಡ ದಾನವನ್ನು ತಮ್ಮ ಪಂಚವ್ರತಗಳಲ್ಲಿ ನಿಯಮಗೊಳಿಸಿದ್ದಾರೆ. ಜೈನರಲ್ಲಿ ಅಪರಿಗ್ರಹವೆಂಬುದು ದಾನಕ್ಕೆ ಪ್ರತಿಯಾದ ಪದ. ಅಪರಿಗ್ರಹ ಎಂದರೆ ಆಸ್ತಿಯನ್ನು ಕೂಡಿಡದಿರುವದು ಎಂದರ್ಥ. ಆಸ್ತಿಕೂಡಿಡದಿರುವದು ಎಂದರೆ ತ್ಯಾಗಮಾಡುವದು ಅಥವಾ ಸಂಪತ್ತನ್ನು ದಾನಮಾಡುವದು ಎಂಬುದನ್ನೇ ಎತ್ತಿ ಹಿಡಿಯುತ್ತದೆ.

೧೨ನೇ ಶತಮಾನದ ಕ್ರಾಂತಿಪುರುಷ ಬಸವಣ್ಣನವರು ಹಾಗೂ ಶಿವಶರಣರು ದಾನ ಮತ್ತು ತ್ಯಾಗವನ್ನು ಎತ್ತಿ ಹಿಡಿದಿದ್ದಾರೆ. ದಾನ ಮತ್ತು ತ್ಯಾಗಗಳ ಮುಂದಿನ ವ್ಯಕ್ತಿನಿರಸನದ ಪರಮೋಚ್ಛ ಸ್ಥಿತಿಯನ್ನು ತಲುಪುವ 'ದಾಸೋಹಂ ಭಾವ'ವನ್ನು ಅವರು ರೂಢಿಗೆ ತಂದರು. ಈ ದಾಸೋಹದ ಮೂಲನೆಲೆಯೂ ತ್ಯಾಗವೇ ಆಗಿದೆ.

**"ಅನ್ನದೊಳಗೆ ಒಂದಗುಳ**
**ಹೊನ್ನಿನೊಳಗೆ ಒಂದು ವರೆಯ**
**ವಸ್ತ್ರದೊಳಗೆ ಒಂದೆಳೆಯ**
**ಇಂದಿಗೆ, ನಾಳಿಂಗೆ ಬೇಕೆಂದೆನಾದೊಡೆ,**
**ನಿಮ್ಮಾಣೆ ನಿಮ್ಮ ಪ್ರಮಥರಾಣೆ."**

ಎಂಬ ಬಸವಣ್ಣನವರ ವಚನದಾಶಯ, ವಸ್ತು ವ್ಯಕ್ತಿಯ ಉಪಭೋಗಕ್ಕಲ್ಲ; ಸಮಾಜದ ಒಳಿತಿಗೆ ಬಳಸಬೇಕೆಂಬುದೇ ಆಗಿದ್ದು ಅದು ದಾಸೋಹದ ಮೂಲಕ ಸವೆಸಬೇಕೆಂಬುದನ್ನು ನಿರ್ದೇಶಿಸುತ್ತದೆ.

## ಕೊನೆಯ ಟಿಪ್ಪಣಿಗಳು

1. ಕನ್ನಡ ನಿಘಂಟು : ಕ.ಸಾ.ಪ.ಸಂ 4 ಪು–3862
2. ಅದೇ.
3. Something that is voluntarily Tronsterred by one person to another person without compensation.(Webster's New Intrnational Dictionary page – 956)
4. Standard Dictionary of English language and wrag – page -1031
5. ಹಮ್ಮೀರಕಾವ್ಯ ಸಂಧಿ – 2, ಪದ್ಯ 121
6. ಭಾರತೀಯ ಸಂಸ್ಕೃತಿ ದರ್ಶನ – ಸಂ: ಅ.ನ.ಕೃ. ಪು. 99
7. ಕಾಣೆ ಪಿ. ವ್ಹಿ. ಧರ್ಮಶಾಸ್ತ್ರದ ಇತಿಹಾಸ ಸಂಪುಟ–1. ಪು. 18
8. ಬಾಳಾಸಾಹೇಬ ಲೋಕಾಪುರ– 'ಆಧುನಿಕ ಕನ್ನಡ ಕಥನ ಸಾಹಿತ್ಯದಲ್ಲಿ ಜೈನ ಸಂವೇದನೆ', ಪು.50
9. K.I. VI. 7; ಕ್ರಿ.ಶ. 12ನೇ ಶತಮಾನ
10. 'ಭಗವದ್ಗೀತೆ'– ಅಧ್ಯಾಯ –17
11. ರಾಜಪುರೋಹಿತ ನಾ.ಶ್ರೀ.– 'ದಾನ–ಧರ್ಮ ಪದ್ಧತಿ', ಪು, 10
12. Rev. F. kittel-Kannada-English Dictionary. ಪು, 589
13. ಸರ್ವಜ್ಞ ಸೋಮೇಶ್ವರ– 'ಮಾನಸೋಲ್ಲಾಸ', ಪು. 143
14 'ಯಜನಂ ಯಾಜನಂ ದಾನಂ ಬ್ರಾಹ್ಮಣಸ್ಯ ಪರಿಗ್ರಹಃ
    ಅಧ್ಯಾಪನಂ ಚಾಧ್ಯಾಯನ ಷಟ್ ಕರ್ಮಾಣಿ ದ್ವಿಜೋತ್ತಮಃ ॥
    ಉದ್ಧರಿತ: 'ಯುಗಯಾತ್ರೀ ಭಾರತೀಯ ಸಂಸ್ಕೃತಿ'. ಸಂಪುಟ– 2. ಪು. 211
15. ಕ.ವಿ.ವಿ.ಶಾ.ಸಂ. 1, 24– ಮೋರಿಗೇರಿ. ಕ್ರಿ.ಶ. 1045; ಅದೇ 23– ಮೈಲಾರ. ಕ್ರಿ.ಶ. 1046; S.I.I. XV. 48- ಲಕ್ಕುಂಡಿ; ಕ್ರಿ.ಶ. 1152
16. ಅಹಿಂಸಾ ಸತ್ಯಾಮಸ್ತೋಯಂ ಶೌಚಮಿಂದ್ರಿಯ ನಿಗ್ರಹ:
    ದಾನಂ ದಮೋದಯಾ ಶಾಂತಿಃ ಸರ್ವೇಷಾಂ ಧರ್ಮಸಾಧನಮ್ ।
    ಉದ್ಧರಿತ: 'ಯುಗಯಾತ್ರೀ ಭಾರತೀಯ ಸಂಸ್ಕೃತಿ'. ಸಂಪುಟ– 3. ಪು. 457
17. 'ಬ್ರಹ್ಮಪುರಾಣ'– CCXXIX. 73 ಉದ್ಧರಿತ: 'ಯುಗಯಾತ್ರೀ ಭಾರತೀಯ ಸಂಸ್ಕೃತಿ' ಸಂ: 2 ಪು.211
18. ರಾಜಪುರೋಹಿತ ನಾ.ಶ್ರೀ.– 'ದಾನ–ಧರ್ಮ ಪದ್ಧತಿ' ಪು. 10
19. ಸೋಮದೇವ ಸೂರಿ– 'ನೀತಿವಾಕ್ಯಾಮೃತ'; ಸಂ: ಜಿ.ಎಸ್. ದೀಕ್ಷಿತ್ ಮತ್ತು ಇತರರು. ಕನ್ನಡ ವಿ. ವಿ. ಹಂಪಿ, 2000
20. 'ತತ್ವಾರ್ಥ ಸೂತ್ರ'– ಪು. 7–38. ಉದ್ಧರಿತ : 'ನಯಸೇನನ ಧರ್ಮಾಮೃತಂ' ಸಂ: ಡಾ. ಆರ್. ಶಾಮಾಶಾಸ್ತ್ರಿ ಮೈಸೂರು ವಿ. ವಿ. ಪು. 247
21. 'ತತ್ವರತ್ನ ಪ್ರದೀಪಿಕೆ'– ಪು. 185: ಸಂ: ಎ. ಶಾಂತಿರಾಜಶಾಸ್ತ್ರಿ ಮೈಸೂರು ವಿ.ವಿ.
22. 'ರತ್ನಕಂಡ ಶ್ರಾವಕಾಚಾರ; ಶ್ಲೋಕ 113. ಉದ್ಧರಿತ 'ನಯಸೇನನ ಧರ್ಮಾಮೃತಂ' ಪು. 247
23. 'ಕನ್ನಡ ನಿಘಂಟು'– ಸಂಪುಟ– ೪ ಪು. 3795
24. 'ಪ್ರಾಚೀನ ಕರ್ನಾಟಕ ಆಡಳಿತ ಪರಿಭಾಷಾಕೋಶ'– ಪು. 175; ಸಂ: ಶ್ರೀನಿವಾಸ ರಿತ್ತಿ

25. E.C. XI. ದಾವಣಗೆರೆ-41; ಕ್ರಿ.ಶ. 1148

26. E.C. XVI. 54-58; ಕ್ರಿ.ಶ. 1148

27. ಕ.ವಿ.ವಿ.ಶಾ.ಸಂ. 1. 11. ದೋರನಹಳ್ಳಿ; ಕ್ರಿ.ಶ. 1017

28. ಕಾಣೆ ಪಿ.ವಿ. : 'ಧರ್ಮಶಾಸ್ತ್ರದ ಇತಿಹಾಸ'- ಸಂಪುಟ. 1, ಭಾ.1, ಪು. 1

29. ಅದೇ.

30. ಅದೇ.

31. ಕ.ವಿ.ವಿ.ಶಾ.ಸಂ.1. 29. ಬಲ್ಲಕುಂದೆ; ಕ್ರಿ.ಶ. 1017

32. ಕ.ಜಿ.ಶಾ. 18 ಮದ್ರಕಿ; ಕ್ರಿ.ಶ. 1028

33. ಕ.ವಿ.ವಿ.ಶಾ.ಸಂ. 2. 125. ಕೊಪ್ಪಳ; ಕ್ರಿ.ಶ. 1030

34. ಕ.ವಿ.ವಿ.ಶಾ.ಸಂ.7. 126. ಕಿಲಾರಟ್ಟಿ; ಕ್ರಿ.ಶ. 1046

35. ರಾಜಪುರೋಹಿತ ನಾ.ಶ್ರೀ.- 'ದಾನ-ಧರ್ಮ ಪದ್ಧತಿ' ಪು. 22

36. ದಾತುರಾಪತ್ತಿ ಸಂಪ್ರಾಪ್ತೌ ಯಾಚಕೇ ಸಮೂಪಸ್ಥಿತೆ ।
ನಾ ಸ್ತೀತಿ ವಾಗ್ಜೀ ವಿತ ಯೋರ್ಬಿಹಿರ್ನಿಃ ಸರಣಿ ರಣಃ ॥

37. ಭಕ್ತಿ ವೇದಾಂತ ಸ್ವಾಮಿ ಪ್ರಭುಪಾದ ಎ.ಸಿ. : 'ಭಗವದ್ಗೀತಾ ಯಥಾರ್ಥ ರೂಪ'- ಪು. 724

38. ರಾಜಪುರೋಹಿತ ನಾ.ಶ್ರೀ.- 'ದಾನ-ಧರ್ಮ ಪದ್ಧತಿ' ಪು. 20

39. "ಉಳ್ಳಲ್ಲಿ ಉಣಲಿಲ್ಲ, ಉಳ್ಳಲ್ಲಿ ಉಡಲಿಲ್ಲ ।
ಉಳ್ಳಲ್ಲಿ ದಾನ ಕೊಡದವನ ಒಡವೆಯು ।
ಕಳ್ಳಗೆ ನೃಪಣೆ : ಸರ್ವಜ್ಞ ॥" ಎಂಬ ಸರ್ವಜ್ಞನ ವಚನ ಇಂಥ ತಾಮಸ ಗುಣವುಳ್ಳವನಿಗೆ ಅನ್ವಯಿಸುವಂತಿದೆ.

40. 'ಯುಗಯಾತ್ರೀ ಭಾರತೀಯ ಸಂಸ್ಕೃತಿ'- ಸಂಪುಟ. 3, ಪು. 456

41. ಅದೇ. ಪು. 457

42. ಅದೇ.

43. "ಅಮೃತಂ ಸ್ಯಾದಯಾಚಿತಮ್ । ಮೃತಂ ತು ಯಾಚಿತಮ್ ॥"
ಉದ್ಧರಿತ: ರಾಜಪುರೋಹಿತ ನಾ.ಶ್ರೀ.- 'ದಾನ-ಧರ್ಮ ಪದ್ಧತಿ' ಪು. 23

44. ಕಾಣೆ ಪಿ.ವಿ.- 'ಧರ್ಮ ಶಾಸ್ತ್ರದ ಇತಿಹಾಸ'- ಸಂಪುಟ.8 ಪು. 843

45. I.A. 20. 361

46. E.I. 8. 82

47. ಬಾಜಪ್ಯೆ ಕೆ.ಡಿ.- Ludnes I.st No. 14. Jarnal.3 Mathura Insc. ಪು. 116

48. S.I.I. I. 144

49. S.I.I. XIV. 1-ಬನವಾಸಿ

50. ಸಿ.ಪಿ.ಕೆ. 'ಭಾರತೀಯ ಶಾಸನಶಾಸ್ತ್ರ ಪರಿಚಯ' ಪು. 99

51. I.A. IX. 60. ನೆಲಮಂಗಲ; ಕ್ರಿ.ಶ. 797

52. ಅದೇ.

53. I.A. X. ಪು. 60

54. S.I.I. XX. 4. ಲಕ್ಷ್ಮೇಶ್ವರ; ಕ್ರಿ.ಶ. 890
55. ಪುಲಿಗೆರೆ ಸೋಮನಾಥ– 'ಸೋಮೇಶ್ವರ ಶತಕ' ಪದ್ಯ.60
56. ನಂಜುಂಡ ಕವಿ : 'ರಾಮನಾಥ ಚರಿತೆ' ಭಾಗ. 2. ಪದ್ಯ.3
57. 'ಮನುಸ್ಮೃತಿ'– ಅಧ್ಯಾಯ–4, ಶ್ಲೋಕ 226, 230, 231, 232
58. ಪ್ರಸನ್ನಕುಮಾರ ಎಂ.– 'ಮೈಸೂರಿನ ಇತಿಹಾಸದಲ್ಲಿ ದಾನ' ಪು. 2
59. "ಕರ್ಮಣ್ಯೇ ವಾಧಿಕಾರಸ್ತೇ ಮಾ ಫಲೇಷು ಕದಾಚನ ।
ಮಾ ಕರ್ಮಫಲ ಹೇತುರ್ಭೂರ ಮಾ ತೇಸಙ್ಗೋs ಸ್ತ್ವ ಕರ್ಮಣೆ ॥"
ಸ್ವಾಮಿ ಪ್ರಭುಪಾದ– 'ಭಗವದ್ಗೀತಾ ಯಥಾರೂಪ' ಪು. 124
60. ಸ್ವಾಮಿ ಪ್ರಭುಪಾದ– 'ಭಗವದ್ಗೀತಾ ಯಥಾರೂಪ' ಪು. 735
61. 'ಯುಗಯಾತ್ರೀ ಭಾರತೀಯ ಸಂಸ್ಕೃತಿ' ಸಂಪುಟ.3, ಪು. 450
62. ಅದೇ.
63. ಅದೇ. ಪು. 457
64. ಅದೇ.
65. ಸ್ವಾಮಿ ಪ್ರಭುಪಾದ : 'ಭಗವದ್ಗೀತಾ ಯಥಾರೂಪ' ಪು. 723
66. 'ಪದ್ಮಪುರಾಣ' ಭಾ.2, ಪು. 4
67. ಮೂರನೇ ಸೋಮೇಶ್ವರ–'ಮಾನಸೋಲ್ಲಾಸ' ಸಂ. 1, ಪು. 42
68. ಅದೇ. ಪು. 143
69. 'ಬ್ರಹ್ಮಪುರಾಣ' CCXXIX, 73 ಉದ್ಧರಿತ : 'ಯುಗಯಾತ್ರೀ ಭಾರತೀಯ ಸಂಸ್ಕೃತಿ' ಸಂ.2, ಪು. 211
70. 'ವಿಷ್ಣುಪುರಾಣ' ಸಂಪುಟ. III, ಅಧ್ಯಾಯ 8, ಶ್ಲೋಕ. 22
71. ಉದ್ಧರಿತ : ಪ್ರಸನ್ನಕುಮಾರ ಎಂ.– 'ಮೈಸೂರಿನ ಇತಿಹಾಸದಲ್ಲಿ ದಾನ' ಪು. 24
72. ಕಾಣೆ ಪಿ.ವ್ಹಿ.– 'ಧರ್ಮಶಾಸ್ತ್ರದ ಇತಿಹಾಸ' ಸಂಪುಟ. VI, II. ಪು. 837
73. ಚೇರಮಾಂಕ ಕವಿ– 'ಚೇರಮಕಾವ್ಯ' 2. 4, ಉದ್ಧರಿತ : ಡಾ. ಕೆ. ಶ್ರೀಕಂಠಯ್ಯ– 'ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ'
74. 'ಸರ್ವಜ್ಞನ ವಚನಗಳು'– ವ. 348, 356, 364, 365, 368; ಶಾಬಾದಿಮಠ ಬುಕ್ ಡಿಪೊ, ಗದಗ.
75. SII, XX. 98. ಕಡ್ಲೇವಾಡ; ಕ್ರಿ.ಶ. 1127
76. ಸರ್ವಜ್ಞ ಸೋಮೇಶ್ವರ– 'ಮಾನಸೋಲ್ಲಾಸ' ಸಂ.1. ದ್ವಿತೀಯ ವಿಂಶತಿ ಸಂ: ಡಾ. ಎಂ.ಎಂ. ಕಲಬುರ್ಗಿ
77. ಸೆಟ್ಟರ ಎಸ್.– 'Inviting death' ಪು. 14

*****

## ಅಧ್ಯಾಯ - ಮೂರು

# ಕಲ್ಯಾಣ ಚಾಲುಕ್ಯ ಅರಸು ಮನೆತನ

೩.೧ ಕಲ್ಯಾಣ ಚಾಲುಕ್ಯರ ಮೂಲ

೩.೨ ಚಕ್ರವರ್ತಿಗಳು

೩.೩ ರಾಣಿಯರು

೩.೪ ಪ್ರಭುಗಳು ಮತ್ತು ಅಧಿಕಾರಿಗಳು

೩.೫ ಆಡಳಿತಾಧಿಕಾರಿಗಳು

# ಅಧ್ಯಾಯ - ಮೂರು

# ಕಲ್ಯಾಣಚಾಲುಕ್ಯ ಅರಸುಮನೆತನ

ಕಲ್ಯಾಣ ಚಾಲುಕ್ಯ ಅರಸು ಮನೆತನದ ಇತಿಹಾಸದ ಕುರಿತು ಸಂಶೋಧನೆಗಳು ಈಗಾಗಲೇ ಸಾಕಷ್ಟು ರೀತಿಯಲ್ಲಿ ನಡೆದಿರುವ ಕುರಿತು "ಅಧ್ಯಯನದ ಮತ್ತು ವ್ಯಾಪ್ತಿ, ಸ್ವರೂಪ ಉದ್ದೇಶಗಳು" ಎಂದು ಚರ್ಚಿಸಲಾಗಿದೆ. ಕಲ್ಯಾಣ ಚಾಲುಕ್ಯರ ಅರಸು ಮನೆತನ ಅಧ್ಯಯನ ಮಾಡಿದಂತೆ ಈ ಮನೆತನದ ಒಬ್ಬೊಬ್ಬ ಅರಸರ ಕುರಿತು ಒಂದೊಂದು ಮಹಾಪ್ರಬಂಧ-ಗಳಾಗುವಷ್ಟು ವಿಷಯವಸ್ತು ಲಭಿಸುತ್ತದೆ. ಈ ಅಧ್ಯಾಯದಲ್ಲಿ ಕಲ್ಯಾಣಿ ಚಾಲುಕ್ಯ ಎಲ್ಲ ಅರಸರ, ರಾಣಿಯರ ಹಾಗೂ ಅಧಿಕಾರಿಗಳ ಬಗ್ಗೆ ವಿಸ್ತೃತ ವರದಿಯನ್ನು ನೀಡದೆ; ಪ್ರಸ್ತುತ 'ದಾನ-ದತ್ತಿ' ವಿಷಯಕ್ಕೆ ಸಂಬಂಧಿಸಿದಂತೆ ದಾನ ನೀಡಿದ ಚಕ್ರವರ್ತಿಗಳು, ಪಟ್ಟ ಮಹಿಷಿಗಳು, ಪಿರಿಯರಸಿಯರು, ಯುವರಾಜರು ಹಾಗೂ ಅರಸು ಮನೆತನದ ಅಧಿಕಾರಿಗಳು ಹೊಂದಿದ್ದ ಸ್ಥಾನಮಾನಗಳನ್ನು ಮತ್ತು ಅವರು ಸಾಧಿಸಿದ ಸಿದ್ಧಿಗಳನ್ನು ಸಂಕ್ಷಿಪ್ತವಾಗಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ದಾನ ನೀಡಿದ ವ್ಯಕ್ತಿಗಳು ಯಾವ ಯಾವ ಪ್ರಾಂತಗಳನ್ನು ಆಳುತ್ತಿದ್ದರು ? ಅವರು ಕೈಕೊಂಡ ಕಾರ್ಯಕ್ಷೇತ್ರಗಳಾವುವು ? ಎಂಬುದರ ಕಡೆಗೆ ವ್ಯಾಪಕ ಗಮನ ಹರಿಸದೇ 'ದಾನ-ದತ್ತಿ'ಗಳನ್ನು ನೀಡುವಷ್ಟರ ಮಟ್ಟಿಗೆ ಅವರ ಅಧಿಕಾರ ಯೋಗ್ಯತೆಗಳೇನಾಗಿದ್ದವು ? ಎಂಬುದನ್ನು ತಿಳಿಯಲು ಇಲ್ಲಿ ಪ್ರಯತ್ನಿಸಲಾಗಿದೆ.

## ೩.೧ ಕಲ್ಯಾಣಚಾಲುಕ್ಯರ ಮೂಲ

ಕಲ್ಯಾಣಚಾಲುಕ್ಯರು ಬದಾಮಿ ಚಾಲುಕ್ಯರ ವಂಶಜರೆಂದು ಹೇಳಿಕೊಂಡಿದ್ದಾರೆ.[1] ಕ್ರಿ.ಶ. ೮ನೇ ಶತಮಾನದಲ್ಲಿ ಏಳಿಗೆಗೆ ಬಂದ ರಾಷ್ಟ್ರಕೂಟರು ಬದಾಮಿ ಚಾಲುಕ್ಯರ ಆಳ್ವಿಕೆಯನ್ನು ಅಂತ್ಯಗೊಳಿಸಿ ಕ್ರಿ.ಶ. ೭೫೪ರಲ್ಲಿ ಅಧಿಕಾರಕ್ಕೆ ಬಂದರು. ಕ್ರಿ.ಶ. ೯೭೩ರವರೆಗೆ ಅಂದರೆ ಎರಡು ಶತಮಾನಗಳ ಕಾಲ ರಾಜ್ಯಭಾರ ಮಾಡಿದರು. ಕಲ್ಯಾಣ ಚಾಲುಕ್ಯರ ಇಮ್ಮಡಿ ತೈಲಪನು ಕ್ರಿ.ಶ. ೯೭೩ರಲ್ಲಿ ರಾಷ್ಟ್ರಕೂಟರ ಇಮ್ಮಡಿ ಕರ್ಕನನ್ನು ಸೋಲಿಸಿ ಪುನಃ ಚಾಲುಕ್ಯ ಸಾಮ್ರಾಜ್ಯವನ್ನು ಸ್ಥಾಪಿಸಿದನು.[2]

ಕಲ್ಯಾಣ ಚಾಲುಕ್ಯರ ಸಾಮ್ರಾಜ್ಯ ಇಮ್ಮಡಿ ತೈಲಪನಿಂದ ಸ್ಥಾಪಿತವಾದರೂ ಅವರು ಬದಾಮಿ ಚಾಲುಕ್ಯರ ವಂಶಜರೆಂದೇ ಹೇಳಿಕೊಂಡಿದ್ದಾರೆ.[4] ಚಾಲುಕ್ಯರ ವಂಶಾವಳಿಯನ್ನು

ತಿಳಿಸುವ ಕವಿ ಬಿಲ್ಹಣನ 'ವಿಕ್ರಮಾಂಕ ದೇವಚರಿತಂ' ಕಾವ್ಯ ಕೃತಿಯಲ್ಲಿ ಕಲ್ಯಾಣ ಚಾಲುಕ್ಯರ ಮೂಲ ಬ್ರಹ್ಮನಿಂದ ಆರಂಭಬಾದರೆ; ಕೆಲವು ಶಾಸನಗಳು ನಾಲ್ಕನೆ ವಿಕ್ರಮಾದಿತ್ಯ ಮತ್ತು ಬೊಂಥಾದೇವಿಯರ ಪುತ್ರ ಇಮ್ಮಡಿ ತೈಲಪನಿಂದ ಪ್ರಾರಂಭವಾಯಿತೆಂದು ಹೇಳುತ್ತವೆ. (ಕ್ರಿ.ಶ.೧೦೭೪ರ ಬಳ್ಳಿಗಾವೆಯ ಶಾಸನ). ಬಿಲ್ಹಣನ 'ವಿಕ್ರಮಾಂಕದೇವ ಚರಿತಂ'[6] ಹಾಗೂ ಶಾಸನಾಧಾರಗಳಿಂದ.[7] ಕಲ್ಯಾಣಚಾಲುಕ್ಯರ ವಂಶಾವಳಿಯನ್ನು ಈ ಕೆಳಗಿನಂತೆ ಕಟ್ಟಬಹುದಾಗಿದೆ.

ಬ್ರಹ್ಮ
↓
ಚಳುಕ
↓
ಹಾರೀತ ಮತ್ತು ಮಾನವ್ಯ
↓
ಜಯಸಿಂಹ
↓
ರಣರಾಗ
↓
ಪುಲಿಕೇಶಿ
↓
ಒಂದನೇ ಕೀರ್ತಿವರ್ಮ | ಮಂಗಳೇಶ

ಒಂದನೇ ಕೀರ್ತಿವರ್ಮ
↓
ಒಂದನೇ ಸತ್ಯಾಶ್ರಯ-I
↓
ಆದಿತ್ಯವರ್ಮ
↓
ಒಂದನೇ ವಿಕ್ರಮಾದಿತ್ಯ-I
↓
ಯುದ್ಧಮಲ್ಲ
↓




ಇದೇ ರೀತಿಯ ವಂಶಾವಳಿಯನ್ನು ಅಯ್ಯಣದೇವನ ಇಂಡಿ ತಾಲೂಕಿನ ರೂಗಿ ಶಾಸನ[8] ಇರಿವಬೆಡಂಗ ಸತ್ಯಾಶ್ರಯನ ಕುಕನೂರ ಶಾಸನ[9], ಇಮ್ಮಡಿ ಜಯಸಿಂಹನ ಮುರಮ್ ಶಾಸನ[10]. ಆರನೇ ವಿಕ್ರಮಾದಿತ್ಯನ ಸೇಡಂ ಶಾಸನಗಳು[11] ಆಯಾ ರಾಜರವರೆಗಿನ ವಂಶಾವಳಿಯನ್ನು, ನಾಲ್ಕನೆಯ ಸೋಮೇಶ್ವರನ ಕುರಿತು ಕೊಣ್ಣೂರು ಶಾಸನವು ಆರನೆಯ ವಿಕ್ರಮಾದಿತ್ಯನಿಂದ ಆರಂಭವಾದ ವಂಶಾವಳಿಯನ್ನು ಹೀಗೆ ಹೇಳಿದೆ.[11-1]

ಆರನೆ ವಿಕ್ರಮಾದಿತ್ಯ
↓
ಮುಮ್ಮಡಿ ಸೋಮೇಶ್ವರ (ಸರ್ವಜ್ಞ ಚಕ್ರವರ್ತಿ)
↓
ಇಮ್ಮಡಿ ಜಗದೇಕ ಮಲ್ಲ | ಮುಮ್ಮಡಿ ತೈಲಪ
↓
ನಾಲ್ವಡಿ ಸೋಮೇಶ್ವರ (ವೀರ ಸೋಮೇಶ್ವರ)

## ೩.೨ ಚಕ್ರವರ್ತಿಗಳು

ಕಲ್ಯಾಣ ಚಾಲುಕ್ಯರಲ್ಲಿ ಇಮ್ಮಡಿ ತೈಲಪನು ಮೊದಲ ಚಕ್ರವರ್ತಿಯಾದರೆ; ಸೋಮೇಶ್ವರ ತ್ರಿಭುವನಮಲ್ಲ ನಾಲ್ಕನೆಯ ಮತ್ತು ಕೊನೆಯ ಚಕ್ರವರ್ತಿಯಾಗಿದ್ದಾನೆ. ಕಲ್ಯಾಣ ಚಾಲುಕ್ಯ ಚಕ್ರವರ್ತಿಗಳ ವಿವರ ಹೀಗಿದೆ :

### ಇಮ್ಮಡಿ ತೈಲಪ (ಕ್ರಿ.ಶ. ೯೭೩–೯೯೭)

ರಾಷ್ಟ್ರಕೂಟರ ಇಮ್ಮಡಿ ಕರ್ಕರಾಜನಿಂದ ಕ್ರಿ.ಶ ೯೭೩-೭೪ರಲ್ಲಿ ಕರ್ನಾಟಕ ರಾಜ್ಯವನ್ನು ಕಸಿದುಕೊಂಡು ಪುನಃ ಚಾಲುಕ್ಯ ವೈಭವವನ್ನು ಸ್ಥಾಪನೆ ಮಾಡಿದ ಕೀರ್ತಿ ತೈಲಪನಿಗೆ ಸಲ್ಲುತ್ತದೆ. ತನ್ನನ್ನು ತಾನು ಚಾಲುಕ್ಯ ವಂಶಜನೆಂದು ಹೇಳಿಕೊಂಡಿದ್ದಾನೆ.[12] ಕ್ರಿ.ಶ. ೧೦೦೯ರ ಕೌಥೆಮ್ ಶಾಸನವು ಬದಾಮಿಯ ಚಾಲುಕ್ಯರು ಹಾಗೂ ಕಲ್ಯಾಣ ಚಾಲುಕ್ಯರಿಗೂ ಇದ್ದ ಬಾಂಧವ್ಯವನ್ನು ಪ್ರಸ್ತಾಪಿಸಿದೆ.[13] ಅದರಲ್ಲಿ ಎರಡನೆಯ ತೈಲಪನ ಪೂರ್ವಿಕರಲ್ಲಿ ಮೊದಲ ಹೆಸರು ವಿಜಯಾದಿತ್ಯನದೆಂದು ಹೇಳಲಾಗಿದೆ.  ಆದರೆ ರನ್ನನ ಗದಾಯುದ್ಧದಲ್ಲಿ ಕೊಟ್ಟಿರುವ ವಂಶವೃಕ್ಷದಲ್ಲಿ ಮೊದಲ ಹೆಸರು ಸತ್ಯಾಶ್ರಯನದು. ಇದನ್ನು ಗಮನಿಸಿದಾಗ ಕಲ್ಯಾಣ ಚಾಲುಕ್ಯರು ಬಾದಾಮಿ ಚಾಲುಕ್ಯರ ವಂಶಕ್ಕೆ ಸೇರಿದವರೆಂಬುದು ನಿರ್ವಿವಾದ.

ಎಂಟನೆಯ ಶತಮಾನದ ಮಧ್ಯಭಾಗದಲ್ಲಿ ರಾಷ್ಟ್ರಕೂಟರಿಂದ ಪರಾಜಿತನಾದ ಇಮ್ಮಡಿ ಕೀರ್ತಿವರ್ಮನಿಗೆ ಭೀಮನೆಂಬ ಚಿಕ್ಕಪ್ಪನಿದ್ದನು. ಆ ಭೀಮನ ವಂಶಜರಲ್ಲಿ ಕೊನೆಯವನಾದ ನಾಲ್ಕನೆಯ ವಿಕ್ರಮಾದಿತ್ಯನ ನಾಲ್ಕನೆಯ ಮಗನೇ ಇಮ್ಮಡಿ ತೈಲಪ. ತ್ರಿಪುರಿಯ ಕಳಚೂರಿ ಲಕ್ಷ್ಮಣನ ಮಗಳಾದ ಬೊಂಥಾದೇವಿಯು ತೈಲಪನ ತಾಯಿ.[14] ಈತನಿಗೆ ತೈಲಪ್ಪ, ತೈಲಪಯ್ಯ ಎಂಬ ಹೆಸರುಗಳಿಂದ ಕರೆಯುತ್ತಿದ್ದರೆಂಬುದು ಶಾಸನಗಳಲ್ಲಿ ಉಕ್ತಗೊಂಡಿದೆ. ಅಲ್ಲದೆ 'ಅಹವಮಲ್ಲ' ಮತ್ತು 'ಭುವನೈಕಮಲ್ಲ'ಎಂಬ ಬಿರುದುಗಳನ್ನು ಧರಿಸಿದ್ದನು. ಶಾಸನಗಳಲ್ಲಿ ಇಮ್ಮಡಿ ತೈಲಪನನ್ನು

"ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರಂ ಪರಮಭಟ್ಟಾರಕಂ ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಾಭರಣ ಶ್ರೀ ಮದಾಹವಮಲ್ಲದೇವ....." ಎಂಬುದಾಗಿ ಬಣ್ಣಿಸಲಾಗಿದೆ.[15]

ಇಮ್ಮಡಿ ತೈಲಪನು ಮೊದಲು ತರ್ದವಾಡಿ ಸಾವಿರ ನಾಡಿನಲ್ಲಿ ರಾಷ್ಟ್ರಕೂಟ ಮೂರನೆಯ ಕೃಷ್ಣರಾಜನ ಸಾಮಂತನಾಗಿದ್ದನು. ಕ್ರಿ.ಶ. ೯೯೩ರ ವರೆಗೆ ಮಾನ್ಯಖೇಟವೇ ತೈಲಪನ ರಾಜಧಾನಿಯಾಗಿತ್ತು.

ಬಿಲ್ಹಣನ ಪ್ರಕಾರ : ಬ್ರಹ್ಮನು ಅರ್ಘ್ಯವನ್ನು ಕೊಡುತ್ತಿರುವಾಗ ಇಂದ್ರನು ಬಂದು, ಭೂಮಿಯ ಮೇಲಿನ ಅರಾಜಕತೆಯನ್ನು ಹೋಗಲಾಡಿಸಲು 'ಶ್ರೇಷ್ಠ ವ್ಯಕ್ತಿ'ಯೊಬ್ಬನ ಅವಶ್ಯಕತೆಯನ್ನು ನಿವೇದಿಸುತ್ತಾನೆ. ಇದನ್ನು ಕೇಳಿದ ಬ್ರಹ್ಮನು ಬೊಗಸೆಯಲ್ಲಿಯ ಅರ್ಘ್ಯವನ್ನು ನೋಡಿದ ತಕ್ಷಣವೇ ಬೊಗಸೆಯಲ್ಲಿ ವೀರನೊಬ್ಬ ಜನಿಸುತ್ತಾನೆ. ಆ ವೀರನಿಂದಲೇ ಚಾಳುಕ್ಯವಂಶ ಪ್ರಾರಂಭವಾಯಿತು. ಹಾರೀತ ಮತ್ತು ಮಾನವ್ಯ ಎಂಬುವವರು ಈ ವಂಶದ ಮೂಲ ಪುರುಷರು. ಇವರಿಂದ ಹುಟ್ಟಿದ ಅರಸರು ಅಯೋಧ್ಯಾ ನಗರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದರು. ಈ ಅರಸರಲ್ಲಿ ಕೆಲವರು ದಕ್ಷಿಣಾಪಥಕ್ಕೆ ಬಂದು ಸಾಮ್ರಾಜ್ಯ ಕಟ್ಟಿದರು. ಈ ವಂಶದಲ್ಲಿ ಮುಂದೆ ತೈಲಪನೆಂಬ ದೊಡ್ಡ ಅರಸನು ಹುಟ್ಟಿದ. ಇವನು ಚಾಳುಕ್ಯ ರಾಜ್ಯಕ್ಕೆ ಕಂಟಕ ಪ್ರಾಯರಾಗಿದ್ದ ರಾಷ್ಟ್ರಕೂಟರನ್ನು ಸಂಹರಿಸಿ ಸಾರ್ವಭೌಮ ರಾಜನಾದ. ಇವನಿಂದಲೇ ಚಾಳುಕ್ಯ ಸಾಮ್ರಾಜ್ಯ ಬೆಳೆದು ಪ್ರಖ್ಯಾತವಾಯಿತು.

ಅಧಿಕಾರಕ್ಕೆ ಬಂದೊಡನೆ ಕೃಷ್ಣಾ ಮತ್ತು ನರ್ಮದಾ ನದಿಗಳ ನಡುವಣ ರಾಜ್ಯವನ್ನೆಲ್ಲ ತನ್ನ ಏಕ ಚಕ್ರಾಧಿಪತ್ಯಕ್ಕೆ ಒಳಪಡಿಸಲು ನಿರಂತರವಾಗಿ ಶ್ರಮಿಸಿದನು. ಇವನ ಪ್ರಗತಿಯ ಹಾದಿಯಲ್ಲಿ ಪ್ರಬಲ ತಡೆಯೊಡ್ಡುತ್ತಿದ್ದವನು ಗಂಗರಾಜ್ಯಾಧಿಪತಿಯಾಗಿದ್ದ ಪಾಂಚಾಲದೇವ. ಕ್ರಿ.ಶ. ೯೭೫ರಲ್ಲಿ ಇವನ ರಾಜ್ಯ ಮುಳಗುಂದ೧೨, ಬೆಳವೊಲ ೨೦೦ ಮುಂತಾದ ನಾಡುಗಳನ್ನು ಒಳಗೊಂಡು ಉತ್ತರದಲ್ಲಿ ಕೃಷ್ಣಾನದಿಯವರೆಗೂ ವ್ಯಾಪಿಸಿ, ಪಾಂಚಾಲದೇವನು ತನ್ನನ್ನು ತಾನು 'ಚಾಲುಕ್ಯ ಪಂಚಾನನ'ನೆಂದು ಕರೆದುಕೊಂಡು, ಇಮ್ಮಡಿ ತೈಲಪನ ದರ್ಪಕ್ಕೆ ಮಣಿಯದೆ ಯುದ್ಧಕ್ಕೆ ಸಿದ್ಧನಾಗುತ್ತಾನೆ.[16] ಇಮ್ಮಡಿ ತೈಲಪನು ಗಂಗ ಭೂತುಗದೇವ ಹಾಗೂ ಮತ್ತಿತರ ಸಾಮಂತರ ನೆರವಿನಿಂದ ಪಾಂಚಾಲದೇವನನ್ನು ರಣರಂಗದಲ್ಲಿ ಎದುರಿಸಿದನು. ಕ್ರಿ.ಶ. ೯೭೦ರ ಪೂರ್ವದಲ್ಲಿ ಭೂತುಗದೇವನು ವೀರಾವೇಶದಿಂದ ಹೋರಾಡಿ ಪಾಂಚಾಲದೇವನನ್ನು ಸೆರೆ ಹಿಡಿದು ಸಂಹರಿಸಿದನು. ಇದರಿಂದ ತೈಲಪನ ಪ್ರಭಾವ ಉತ್ತರ ಮೈಸೂರಿನ ಸಮಸ್ತ ನಾಡುಗಳಿಗೂ ವ್ಯಾಪಿಸಿತು.[17] ಇದೇ ಕಾಲದಲ್ಲಿ ರಾಷ್ಟ್ರಕೂಟ ಅರಸ ಎರಡನೆಯ ಕರ್ಕನ ಮಿತ್ರನಾಗಿದ್ದ ರಣಸ್ತಂಭನನ್ನು ಪರಾಭವಗೊಳಿಸಿ ಕೊಂದನು. ಕ್ರಿ.ಶ. ೯೮೦ರ ಸುಮಾರಿಗೆ ಚೋಳ ಅರಸ ಉತ್ತಮ ಚೋಳನ ಮೇಲೆ ವಿಜಯ ಸಾಧಿಸಿ ದಕ್ಷಿಣದತ್ತ ತನ್ನ ಪ್ರಭುತ್ವವನ್ನು ಸ್ಥಾಪಿಸಿದ. ಮುಂದೆ ದಕ್ಷಿಣ ಕೊಂಕಣದ ಮೇಲೆ ದಂಡೆತ್ತಿ ಹೋದ ಇಮ್ಮಡಿ ತೈಲಪನಿಗೆ ಸವದತ್ತಿಯ ರಟ್ಟರು ಶರಣಾದರು.[18] ಉತ್ತರ ಕೊಂಕಣವನ್ನು ಶಿಲಾಹಾರ ವಂಶದ ಇನ್ನೊಂದು ಶಾಖೆಯ ಅರಸನಾದ ಅಪರಾಜಿತ ಮೃಗಾಂಕನು ಆಳುತ್ತಿದ್ದನು. ಧಾರಾ ನಗರವು ಅವನ ರಾಜಧಾನಿಯಾಗಿತ್ತು. ಈ ಪ್ರಾಂತವು ಚಾಲುಕ್ಯ ಸಾಮ್ರಾಜ್ಯಕ್ಕೆ ಸೇರಿರಲಿಲ್ಲ ಈ ಸಮಯದಲ್ಲಿ

ಯಾದವ (ಸೇವುಣ)ರ ಅರಸನಾದ ಎರಡನೆಯ ಭಿಲ್ಲಮನು ರಾಷ್ಟ್ರಕೂಟರ ಪಕ್ಷವನ್ನು ತೊರೆದು ಚಾಲುಕ್ಯರ ಪಕ್ಷವನ್ನು ಸೇರಿದನು. ಇದಾದ ಮೇಲೆ ಹಿಂದೊಮ್ಮೆ ರಾಷ್ಟ್ರಕೂಟರ ಅಂಕೆಗೊಳಗಾಗಿದ್ದ ಉತ್ತರ ಪ್ರಾಂತಗಳನ್ನು ವಶಪಡಿಸಿಕೊಳ್ಳಬೇಕೆಂದು ಇಮ್ಮಡಿ ತೈಲಪನು ಬಯಸಿದನು. ಈ ನಿಟ್ಟಿನಲ್ಲಿ ಸಾಬರಮತಿ ಹಾಗೂ ಅಂಬಿಕಾ ನದಿಗಳ ನಡುವಿನ ಲಾಟ ಪ್ರಾಂತವನ್ನು ಮುತ್ತಿ ವಶಪಡಿಸಿಕೊಂಡು, ಅದನ್ನು ಚಾಲುಕ್ಯ ಮನೆತನದ 'ಬಾರಪ್ಪ' ಎಂಬ ದಳಪತಿಯ ಆಳ್ವಿಕೆಯಲ್ಲಿರಿಸಿದನು. ಈ ಬಾರಪ್ಪನು ಚಾಲುಕ್ಯ ವಂಶದ ಒಂದನೆಯ ಮೂಲರಾಜನು ಆಳುತ್ತಿದ್ದ ಘೂರ್ಜರ ರಾಜ್ಯದ ಮೇಲೆ ದಾಳಿ ಮಾಡಿ, ಸ್ವಲ್ಪ ಮಟ್ಟಿಗೆ ಜಯಶೀಲನಾದನು. ಸ್ವಲ್ಪ ಕಾಲದಲ್ಲಿಯೇ ಚಾಹಮಾನ ವಂಶದ ಒಂದನೆಯ ವಿಗ್ರಹರಾಜನಿಂದ ಬಾರಪ್ಪನ gÁd ಶ AÁಕಸಿಯಲ್ಪಟ್ಟಿತು. ಈ ಯುದ್ಧದಲ್ಲಿ ಬಾರಪ್ಪನು ಮೃತನಾದನು.[19]

ಇಮ್ಮಡಿ ತೈಲಪನು ಹಿಂದೆ ರಾಷ್ಟ್ರಕೂಟ ರಾಜ್ಯಕ್ಕೆ ಸೇರಿದ್ದ ಮಾಳವ ರಾಜ್ಯವನ್ನು ವಶಪಡಿಸಿಕೊಳ್ಳುವ ಬಯಕೆಯಿಂದ ಮಾಳವದ ಮೇಲೆ ಆರು ಸಲ ದಂಡೆತ್ತಿ ಹೋದಾಗ್ಯೂ ಪರಮಾರರ ರಾಜನಾದ ಮುಂಜನು ತೈಲಪನನ್ನು ಹಿಂದಕ್ಕಟ್ಟಿದ್ದನು.[20] ಕೊನೆಗೆ ತೈಲಪನ ಕಿರುಕುಳದಿಂದ ರೊಚ್ಚಿಗೆದ್ದ ಮುಂಜನು ತಾನೇ ಚಾಲುಕ್ಯರ ಮೇಲೆ ದಂಡೆತ್ತಿ ಹೋದನು. ತನ್ನ ಸಾಮಂತನಾದ ಯಾದವ ಇಮ್ಮಡಿ ಭಿಲ್ಲಮನ ಸಹಾಯದಿಂದ ಇಮ್ಮಡಿ ತೈಲಪನು ಮುಂಜನನ್ನು ಸೋಲಿಸಿ ಸೆರೆಹಿಡಿದನು. ಅವನನ್ನು ತನ್ನ ರಾಜಧಾನಿಯಾದ ಮಾನ್ಯಖೇಟಕ್ಕೆ ಸಾಗಿಸಿದನು. ಈ ವಿಜಯದಿಂದ ಪರಮಾರರ ದಕ್ಷಿಣ ಭಾಗವೆಲ್ಲ ಚಾಲುಕ್ಯರ ಪ್ರಭಾವಕ್ಕೊಳಗಾಯಿತು. ಮಾನ್ಯಖೇಟದ ಕಾರಾಗೃಹದಿಂದ ತಪ್ಪಿಸಿಕೊಳ್ಳಲು ಹವಣಿಸಿದ ಮುಂಜನ ರಹಸ್ಯವನ್ನು ತನ್ನ ಸಹೋದರಿಯಾದ 'ಮೃಣಾಳವತಿ'ಯಿಂದ ತೈಲಪನು ಪಡೆದು ಮುಂಜನನ್ನು ವಧಿಸಿದನು. "ಈ ಘಟನೆ ನಿಜವಾದರೆ ಇದೊಂದು ದುರಂತ ಹಾಗೂ ಅಸಾಮಾನ್ಯ ಸಾಹಸಿಯೊಬ್ಬನು ಕ್ರೂರವಿಧಿಯನ್ನು ಕೆಣಕಿ, ಸೆಣಸಾಡಿ, ಸೋತು ಕೊನೆಗೆ ಬಲಿಯಾದ ಘೋರ ದುರಂತ ವೇಸರಿ" ಎಂದು ಡಾ.ಎಂ.ವಿ ಕೃಷ್ಣರಾವ್‌ರವರು ಅಭಿಪ್ರಾಯಪಡುತ್ತಾರೆ.[21]

ಇಮ್ಮಡಿ ತೈಲಪನು ದಕ್ಷಿಣದಲ್ಲಿ ರಾಜ್ಯಭಾರ ಮಾಡುತ್ತಿದ್ದ ಚೋಳರ ದೊರೆ ರಾಜ ಚೋಳನೊಡನೆ ಸೆಣಸಿ ೧೫೦ ಯುದ್ಧಾನೆಗಳನ್ನು ಕಳೆದುಕೊಂಡನೆಂದು ನೀಲಕಂಠ ಶಾಸ್ತ್ರೀಯವರು ತಿಳಿಸುತ್ತಾರೆ.[22] ಚೋಳರ ಮತ್ತು ಚಾಲುಕ್ಯರ ನಡುವಿನ ಈ ಹೋರಾಟದಲ್ಲಿ ಚೋಳರಿಗೆ ಅಲ್ಪಮಟ್ಟಿನ ಜಯದೊರೆತಿರಬಹುದೆಂದು ಅವರು ಅಭಿಪ್ರಾಯಪಡುತ್ತಾರೆ.

ಇಮ್ಮಡಿ ತೈಲಪನು ರಾಷ್ಟ್ರಕೂಟರ ಇಮ್ಮಡಿ ಕರ್ಕನ ಮಗಳಾದ ಜಾಕಬ್ಬೆಯನ್ನು ವಿವಾಹವಾಗಿದ್ದನು. ಈಕೆಯ ಉದರದಲ್ಲಿ ಸತ್ಯಾಶ್ರಯ ಮತ್ತು ದಶವರ್ಮ ಎಂಬ ಇಬ್ಬರು ಮಕ್ಕಳು ಜನಿಸಿದರು. ದಶವರ್ಮನಿಗೆ ಯಶೋವರ್ಮ ಎಂಬ ಇನ್ನೊಂದು ಹೆಸರಿತ್ತು. ತೈಲಪನು ಇಪ್ಪತ್ತನಾಲ್ಕು ವರ್ಷ ಅಧಿಕಾರದಲ್ಲಿದ್ದು ಕ್ರಿ.ಶ.೯೭೭ರವರೆಗೆ ಜೀವಿಸಿದಂತೆ ತಿಳಿದುಬರುತ್ತದೆ.[23]

**ಸತ್ಯಾಶ್ರಯ (ಕ್ರಿ.ಶ. ೯೯೭-೧೦೦೮) :**

ಇಮ್ಮಡಿ ತೈಲಪನ ಹಿರಿಯ ಮಗನಾದ ಸತ್ಯಾಶ್ರಯನು ತನ್ನ ತಂದೆಯ ಮರಣಾನಂತರ ಸಿಂಹಾಸನಾರೂಢನಾದನು. ಈತ 'ಸತ್ತಿಗ' ಮತ್ತು 'ಸತ್ತಿಮ' ಎಂಬ ಹೆಸರುಗಳಿಂದ ಕರೆಸಿಕೊಂಡಲ್ಲದೆ 'ಇರಿವ ಬೆಡಂಗ', 'ಅಹವಮಲ್ಲ', 'ಅಕಲಂಕ ಚರಿತ' ಎಂಬ ಬಿರುದುಗಳನ್ನು ಹೊಂದಿದ್ದನು.[24] ಈತನು ಅಧಿಕಾರಕ್ಕೆ ಬಂದ ಮೇಲೆ ತಂದೆಯ ರಾಜ್ಯ ವಿಸ್ತರಣನೀತಿಯನ್ನು ಮುಂದುವರಿಸಿದನು. ಇದೇ ವೇಳೆಗೆ ಗಂಗವಾಡಿ ಮತ್ತು ನೊಳಂಬವಾಡಿಗಳಿಗೆ ಧೈರ್ಯದಿಂದ ನುಗ್ಗಿದ್ದ ಚೋಳರೊಡನೆ ಯುದ್ಧ ಮಾಡಿದನು. ತಮ್ಮ ರಾಜಕೀಯ ವೈಭವದ ಪ್ರತೀಕವಾಗಿ ಒಂದನೆಯ ರಾಜರಾಜ ಮತ್ತು ರಾಜೇಂದ್ರಚೋಳರ ಕೈಕೆಳಗೆ ಚೋಳರು ವೆಂಗಿಯ ಚಾಲುಕ್ಯರ ರಾಜಕಾರಣದಲ್ಲಿ ಹಸ್ತಕ್ಷೇಪ ಮಾಡಿದರು. ಕ್ರಿ. ಶ. ೯೯೯-೧೦೦೦ದ ವೇಳೆಗೆ ದಾವಾರ್ಣವನ ಮಕ್ಕಳಲ್ಲಿ ದೇಶ ಭ್ರಷ್ಟನಾಗಿದ್ದ ಶಕ್ತಿವರ್ಮನಿಗೆ ಸಿಂಹಾಸನವನ್ನೇರಲು ರಾಜರಾಜನು ನೆರವಾದನು. ಸಹಜವಾಗಿಯೇ ಇದರಿಂದ ಚಾಲುಕ್ಯ ರಾಜ್ಯಕ್ಕೆ ಪೂರ್ವ ಹಾಗೂ ದಕ್ಷಿಣಗಳಲ್ಲಿ ವಿಸ್ತಾರಗೊಳ್ಳುತ್ತಿದ್ದ ತಮಿಳು ಶಕ್ತಿಯಿಂದ ಆತಂಕವಾಗಿತ್ತು. ತಮಿಳು ರಾಜ್ಯದ ವಿಸ್ತಾರದಿಂದ ಆತಂಕಗೊಂಡ ಸತ್ಯಾಶ್ರಯನು ವೆಂಗಿ ರಾಜ್ಯದ ಮೇಲೆ ಆಕ್ರಮಣ ಮಾಡಿದನು.[25]

ಕ್ರಿ.ಶ. ೧೦೦೬ರ ಸುಮಾರಿನಲ್ಲಿ ಸತ್ಯಾಶ್ರಯನು ಧನ್ಯಕಟಕ ಮತ್ತು ಯಾಣಮಂಡಲ ದುರ್ಗಗಳಿಗೆ ಬೆಂಕಿಯಿಟ್ಟನು. ಚೋಳರು ಇದನ್ನು ಉಗ್ರವಾಗಿ ಪ್ರತಿಭಟಿಸಿದರು. ಉತ್ತಮ ಚೋಳನ ಮಗನಾದ ರಾಜರಾಜ ಚೋಳನು ೯,೦೦,೦೦೦ ಸೈನಿಕರೊಡಗೂಡಿದ ಸೈನ್ಯವನ್ನು ಚಾಲುಕ್ಯ ರಾಜ್ಯದ ಮೇಲೆ ಯುದ್ಧಕ್ಕೆ ತಂದನು. ಚಾಲುಕ್ಯ ರಾಜ್ಯದ ದಕ್ಷಿಣ ಸೀಮೆಗಳಾದ ಸಾಂತಳಿಗೆ, ಬನವಾಸಿ, ಕಡಂಬಾಳಿಗೆ ಮತ್ತು ಕೋಗಳಿ ನಾಡುಗಳನ್ನು ಜಯಿಸಿ ಧಾರವಾಡ ಜಿಲ್ಲೆಯ ಉಣಕಲ್ಲುದುರ್ಗವನ್ನು ಹಿಡಿದನು. ಸತ್ಯಾಶ್ರಯನ ದಂಡನಾಯಕ ಲೆಂಕಕೇತನು ದುರ್ಗದ ರಕ್ಷಣೆಗಾಗಿ ಹೋರಾಡುತ್ತಲೇ ಅಸು ನೀಗಿದನು. ಅಲ್ಲಿಂದ ಹೊರಟ ರಾಜರಾಜನು ಬಿಜಾಪುರ ಜಿಲ್ಲೆಯ ಬಾಗೇವಾಡಿ ತಾಲೂಕಿನ ಧನವೂರಿನವರೆಗೆ ವಿಜೃಂಭಿಸಿಕೊಂಡು ಬಂದನು. ಸತ್ಯಾಶ್ರಯನು ರಾಜರಾಜಚೋಳನೊಂದಿಗೆ ಹೋರಾಡುತ್ತಿದ್ದ ವೇಳೆಗೆ ರಾಜರಾಜನ ಮಗನಾದ ರಾಜೇಂದ್ರಚೋಳನು ಎಡದೊರೆನಾಡು, ಬನವಾಸಿ ಮತ್ತು ಹೈದರಾಬಾದಿನ ಸಮೀಪದ ಕುಲಾಕ ಎಂಬ ನಾಡುಗಳನ್ನು ಜಯಸಿದನು.[26]

ಧನವೂರಿನಲ್ಲಿ ತಂಗಿದ್ದ ರಾಜರಾಜನು ಸುತ್ತಮುತ್ತಲಿನ ನಾಡುಗಳನ್ನೆಲ್ಲಾ ಸೂರೆ ಮಾಡಿ ಬ್ರಾಹ್ಮಣರನ್ನೂ ಅಬಾಲಸ್ತ್ರೀಯರನ್ನು ಕೊಲೆ ಮಾಡಿದನು. ಬ್ರಾಹ್ಮಣ ಬಾಲಿಕೆಯರನ್ನು ಅಪಹರಿಸಿ ವಿವಿಧ ಜಾತಿಗಳ ಜನರಿಗೆ ಮದುವೆ ಮಾಡಿಸಿದನು. ಈ ವಿಷಯ ಬಹುಭಾಗ ಉತ್ಪ್ರೇಕ್ಷೆಯಿಂದ ಕೂಡಿದ್ದಾದರೂ ಸತ್ಯಾಶ್ರಯನ ರಾಜ್ಯ ಲೂಟಿಯಾಗಿರುವುದು ಸ್ಪಷ್ಟವಾಗಿದೆ. ಸತ್ಯಾಶ್ರಯನಿಗೆ ಇದನ್ನು ಎದುರಿಸುವುದು ಒಂದು ಪಣವಾಗಿತ್ತು. ಆದ್ದರಿಂದ ತಾವರೆಗಟ್ಟ ಎಂಬಲ್ಲಿ ರಾಜರಾಜನನ್ನು ಸಂಧಿಸಿ ಭೀಕರವಾಗಿ ಕಾದಾಡಿದನು. ಎಲ್ಲಾ ಕಡೆಗೂ ಗೆದ್ದು

ಬಂದ ರಾಜರಾಜನು ಸತ್ಯಾಶ್ರಯನ ಪರಾಕ್ರಮಕ್ಕೆ ಮಣಿಯಬೇಕಾಯಿತು. ಈ ಕಾದಾಟದಲ್ಲಿ 'ಶ್ರುತಿಮಾನ್ ನಕ್ಕನ್ ಚಂದಿರನ್' ಎಂಬ ಚೋಳ ಸೇನಾಪತಿಯು ಯುದ್ಧರಂಗದಲ್ಲಿ ಮಡಿದನು. ರಾಜರಾಜನು ಸೋತು ಹಿಮ್ಮೆಟ್ಟಬೇಕಾಯಿತು. ಸತ್ಯಾಶ್ರಯನು ಅವನನ್ನು ಬೆನ್ನಟ್ಟಿ ಅಪಾರ ಸಾಮಗ್ರಿಗಳನ್ನು ವಶಪಡಿಸಿಕೊಂಡನು. ರಾಜರಾಜನು ತಪ್ಪಿಸಿಕೊಂಡು ಪಲಾಯನ ಮಾಡಿದರೂ ಅಪಾರ ಧನಕನಕಾದಿಗಳನ್ನು ಕೊಳ್ಳೆ ಹೊಡೆದುಕೊಂಡು ಹೋಗಿ, ಅವುಗಳನ್ನೆಲ್ಲ ತಂಜಾವೂರಿನ ದೇವಾಲಯಕ್ಕೆ ಸಮರ್ಪಿಸಿದನೆಂದು ತಂಜಾವೂರಿನ ಶಾಸನಗಳಿಂದ ತಿಳಿದುಬರುತ್ತದೆ.[27]

ರಾಜರಾಜಚೋಳನ ಆಕ್ರಮಣದ ನಂತರ ಸತ್ಯಾಶ್ರಯ ತನ್ನ ರಾಜ್ಯದ ಗಣನೀಯ ಭಾಗವನ್ನು, ಬನವಾಸಿ ಹಾಗೂ ಮಾನ್ಯಖೇಟ ಮೊದಲಾದ ನಗರಗಳನ್ನು ಕಳೆದುಕೊಂಡನು. ಚೋಳರ ಈ ಆಕ್ರಮಣದಲ್ಲಿ ಸತ್ಯಾಶ್ರಯನ ಸಹೋದರ ದಶವರ್ಮನೂ ವೀರಾವೇಶದಿಂದ ಕಾದಾಡಿ ಮರಣ ಹೊಂದಿದನು. ಬಳಿಕ ಸತ್ಯಾಶ್ರಯನು ದಕ್ಷಿಣ ರಾಜ್ಯಗಳ ಮೇಲೆ ದಿಗ್ವಿಜಯ ಕೈಕೊಂಡು ಗುಂಟೂರು, ಕರ್ನೂಲ ಜಿಲ್ಲೆಗಳವರೆಗೆ ಎಲ್ಲ ರಾಜ್ಯಗಳನ್ನು ತನ್ನ ಆಳ್ವಿಕೆಗೆ ಒಳಪಡಿಸಿಕೊಂಡನು.[28] ಕ್ರಿ.ಶ. ೧೦೦೪ರಲ್ಲಿ ಕರ್ನೂಲು ಜಿಲ್ಲೆಯ ಮಾರ್ಕಾಪುರ ತಾಲೂಕಿನ ಶ್ರೀಪರ್ವತದಲ್ಲಿ ಅಂದರೆ ಶ್ರೀಶೈಲದಲ್ಲಿ ಕೆಲಕಾಲ ತಂಗಿದ್ದನು. ಅನಂತರದ ಕಾಲದಲ್ಲಿ ಸತ್ಯಾಶ್ರಯನ ತಮ್ಮ ದಶವರ್ಮನ ಮಗ ಐದನೆಯ ವಿಕ್ರಮಾದಿತ್ಯನು ಪಟ್ಟಕ್ಕೆ ಬಂದನು. ಸತ್ಯಾಶ್ರಯನಿಗೆ ಕುಂದಮರಸ ಎಂಬ ಮಗನಿದ್ದರೂ ಅವನಿಗೆ ಪಟ್ಟಭಾಗ್ಯ ಲಭಿಸಲಿಲ್ಲ. ಅವನು ಮಾಂಡಳಿಕ ಪದವಿಯಲ್ಲಿಯೇ ತೃಪ್ತಿಪಟ್ಟುಕೊಳ್ಳಬೇಕಾಯಿತು. ಇದಕ್ಕೆ ಕಾರಣವೇನೆಂದು ತಿಳಿದು ಬಂದಿಲ್ಲ.[29]

**ಐದನೆಯ ವಿಕ್ರಮಾದಿತ್ಯ : (ಕ್ರಿ.ಶ. ೧೦೦೮-೧೦೧೪)**

ಇರಿವಬೆಡಂಗ ಸತ್ಯಾಶ್ರಯನ ತರುವಾಯ ಪಟ್ಟಕ್ಕೆ ಬಂದ ಐದನೆಯ ವಿಕ್ರಮಾದಿತ್ಯನು ಕ್ರಿ.ಶ. ೧೦೦೮ರಲ್ಲಿ ರಾಜ್ಯಭಾರ ವಹಿಸಿಕೊಂಡನು. ಈತನಿಗೆ 'ತ್ರಿಭುವನಮಲ್ಲ', 'ವಲ್ಲಭ ನರೇಂದ್ರ' ಎಂಬ ಬಿರುದುಗಳು ಇದ್ದವು. ಇವನ ಕಾಲದಲ್ಲಿ ಚಾಲುಕ್ಯರು ಪೂರ್ವಾಭಿಮುಖವಾಗಿ ತಮ್ಮ ರಾಜ್ಯವನ್ನು ವಿಸ್ತರಿಸತೊಡಗಿದರು. ಕೋಸಲರಾಜ್ಯದ ಸೋಮವಂಶಿಭೀಮರಥ ಇಮ್ಮಡಿ ಮಹಾಭಾವಗುಪ್ತನನ್ನು ವಿಕ್ರಮಾದಿತ್ಯನು ಸೋಲಿಸಿದನೆಂದು ತಿಳಿದು ಬರುತ್ತದೆ.[30] ಐದನೆಯ ವಿಕ್ರಮಾದಿತ್ಯನ ಕಾಲದಲ್ಲಿ ಈತನ ಸೋದರಿ ಅಕ್ಕಾದೇವಿ ಕಿಸುಕಾಡು-೭೦ರ ನಾಡಿನ ಮಂಡಲೇಶ್ವರಿಯಾಗಿದ್ದಳು.[31] ಐದನೆಯ ವಿಕ್ರಮಾದಿತ್ಯನ ಕಾಲದಲ್ಲಿ ಮಹಿಳೆಯರಿಗೂ ಸ್ವಾತಂತ್ರ್ಯ ಮತ್ತು ಪ್ರಸಿದ್ಧಿಗಳು ಲಭಿಸಿದ್ದವು ಎಂದು ಶ್ರೀ ನೀಲಕಂಠಶಾಸ್ತ್ರಿಗಳು ಅಭಿಪ್ರಾಯಪಡುತ್ತಾರೆ.[32]

**ಅಯ್ಯಣ : (ಕ್ರಿ.ಶ. ೧೦೧೫)**

ಐದನೆಯ ವಿಕ್ರಮಾದಿತ್ಯನ ನಂತರ ಅವನ ತಮ್ಮನಾದ ಇಮ್ಮಡಿ ಅಯ್ಯಣನು ಸುಮಾರು ಒಂದು ವರ್ಷಕಾಲ ರಾಜ್ಯಭಾರ ನಡೆಸಿದನು. ಈತನ ಕಾಲದಲ್ಲಿ ಹೆಚ್ಚಿನ ಘಟನೆಗಳೇನೂ ನಡೆಯಲಿಲ್ಲವೆಂದು ಇತಿಹಾಸಕಾರರು ಅಭಿಪ್ರಾಯಪಡುತ್ತಾರೆ.[28] ಕ್ರಿ.ಶ. ೧೦೧೫ರ ರೂಗಿ ಶಾಸನ[33] ಅಯ್ಯಣನವರೆಗಿನ ಚಾಲುಕ್ಯರ ವಂಶಾವಳಿಯನ್ನು ಹೇಳುತ್ತದೆ.

## ಇಮ್ಮಡಿ ಜಯಸಿಂಹ (ಕ್ರಿ.ಶ. ೧೦೧೫-೧೦೪೨)

ಇಮ್ಮಡಿ ಜಯಸಿಂಹನು ಐದನೆಯ ವಿಕ್ರಮಾದಿತ್ಯನ ಕೊನೆಯ ತಮ್ಮ. ಅಯ್ಯಣನ ಅಲ್ಪಾವಧಿಯ ಆಳ್ವಿಕೆಯ ನಂತರ ಈತನು ಕ್ರಿ.ಶ. ೧೦೧೫ರಲ್ಲಿ ಅಧಿಕಾರಕ್ಕೆ ಬಂದನು. ಈತನನ್ನು ಸಿಂಗದೇವ ಎಂಬ ಹೆಸರಿನಿಂದಲೂ ಕರೆಯುತ್ತಿದ್ದರು. 'ಇಮ್ಮಡಿ ಜಗದೇಕಮಲ್ಲ', ತ್ರೈಲೋಕ್ಯಮಲ್ಲ', 'ಮಲ್ಲಿಕಾಮೋದ', 'ವಿಕ್ರಮಸಿಂಹ' ಎಂಬ ಬಿರುದುಗಳು ಇದ್ದವು.[34] ಇಮ್ಮಡಿ ಜಯಸಿಂಹನ ಕಾಲದಲ್ಲಿ ಅನೇಕ ಶಾಸನಗಳು ರಚನೆಯಾಗಿವೆ. (ಪ್ರಸ್ತುತ ಅಧ್ಯಯನಕ್ಕೆ ೧೧೫ ಶಾಸನಗಳನ್ನು ಬಳಸಿಕೊಳ್ಳಲಾಗಿದೆ.) ಜಯಸಿಂಹನು ಕಲ್ಯಾಣ ಚಾಲುಕ್ಯ ಸಾಮ್ರಾಜ್ಯವನ್ನು ರಕ್ಷಿಸಿಕೊಳ್ಳಲು ಕಳಚುರಿಯ ಗಾಂಗೇಯದೇವ, ಪರಮಾರರ ಭೋಜ, ಚೋಳರ ರಾಜೇಂದ್ರಚೋಳ ಮುಂತಾದವರೊಂದಿಗೆ ಹೋರಾಡಬೇಕಾಯಿತು. ೧೦೨೪ರಲ್ಲಿ ಜಯಸಿಂಹನು ದಂಡನಾಯಕ ಚವನರಸನೊಡನೆ ದಂಡೆತ್ತಿ ಹೋಗಿ ಪರಮಾರ ಭೋಜನನ್ನು ಸೋಲಿಸಿ ಧಾರಾನಗರವನ್ನು ಸುಟ್ಟು, ಕೊಂಕಣವನ್ನು ವಶಪಡಿಸಿಕೊಂಡನು.[35] ರೂಗಿಯ ಶಾಸನವು[36] ಜಗದೇಕಮಲ್ಲ ಇಮ್ಮಡಿ ಜಯಸಿಂಹನನ್ನು "ಗಂಡರೊಳ್ಗಣ್ಡಂ ಗಣ್ಡಬಂಗಾರಂ ತೇಜ ಮಾರ್ತ್ತಣ್ಡಂ ಮಾರ್ಪ್ಪಡೆ ಭೀಮಂ ಮಲ್ಲಿಕಾಮೋದಂ ಕೀರ್ತಿ ವಿದ್ಯಾಧರಂ ಕೋದಣ್ಡ ಚತುರ್ಭುಜಂ ರಾಜೇನ್ದ್ರ ಚೋಳಮದ ಭಂಜನಂ ಭೋಜಕುಳಕಾಳಾನಳಂ ಗೂರ್ಜ್ಜರವಜ್ರಪಾತ ಮಾಳವನಿರ್ಮೂಳನಂ ಜಗದೇಕಮಲ್ಲಂ ಶ್ರೀ ಮಜ್ಜಯಸಿಂಹದೇವ" ಎಂದು ವಿವಿಧ ಪ್ರಶಸ್ತಿಗಳ ಸಮೇತ ಬಣ್ಣಿಸಿದೆ. ಅವನಿಗಿದ್ದ ಪ್ರಶಸ್ತಿಗಳಿಂದ ರಾಜೇಂದ್ರ ಚೋಳನನ್ನು, ಭೋಜರಾಜನನ್ನು, ಗೂರ್ಜರು, ಮಾಳವರನ್ನು ಆತ ಸೋಲಿಸಿದ್ದನೆಂದು ತಿಳಿಯಬಹುದಾಗಿದೆ.

ಆಲಂಪುರದ ಶಾಸನವು ಜಯಸಿಂಹನು ಕನ್ನನಾಡನ್ನು ವಶಪಡಿಸಿಕೊಂಡನೆಂದು ಹೇಳುತ್ತದೆ[37]. ಇಷ್ಟೆಲ್ಲ ವಿಜಯಗಳನ್ನು ಸಾಧಿಸಿದ್ದರೂ ಕೊನೆಯ ಅವಧಿಯಲ್ಲಿ ಚೋಳರ ರಾಜೇಂದ್ರಚೋಳನು ಚಾಲುಕ್ಯರ ಪ್ರದೇಶವಾಗಿದ್ದ ಬನವಾಸಿವರೆಗೆ ನುಗ್ಗಿ ಇಡೈತುರೈಯನ್ನು ಗೆದ್ದು ರಾಜ್ಯಪಾಡಿಯನ್ನು ಕೈವಶ ಮಾಡಿಕೊಂಡನೆಂದು ತಿಳಿದು ಬರುತ್ತದೆ.[38] ಇಮ್ಮಡಿ ಜಗದೇಕಮಲ್ಲ ಜಯಸಿಂಹನು ತನ್ನ ಹೆಂಡತಿ ಸುಗ್ಗಲಾದೇವಿಯ ಗುರು ವೀರಶೈವಶರಣ ದೇವರ ದಾಸಿಮಯ್ಯನ ಪ್ರಭಾವದಿಂದ ಲಿಂಗಾಯತ ಧರ್ಮಕ್ಕೆ ಮತಾಂತರಗೊಂಡನೆಂದು 'ದೇವರ ದಾಸಿಮಯ್ಯ ಪುರಾಣ'ದಲ್ಲಿ ಉಕ್ತವಾಗಿದೆ.[39]

ಇಮ್ಮಡಿ ಜಯಸಿಂಹನು ಪರಾಕ್ರಮಿಯಾಗಿದ್ದಂತೆ ಸಾಹಿತ್ಯಪ್ರೇಮಿಯೂ ಆಗಿದ್ದನು. ಅನೇಕ ಪ್ರತಿಭಾವಂತ ಕವಿಗಳೂ ವಿದ್ವಾಂಸರೂ ಶರಣರೂ ಅವನ ಆಸ್ಥಾನವನ್ನು ಅಲಂಕರಿಸಿದ್ದರು. ಎರಡನೆಯ ನಾಗವರ್ಮ, ದುರ್ಗಸಿಂಹ, ನಾಗವರ್ಮಾಚಾರ್ಯ, ದೇವರ ದಾಸಿಮಯ್ಯ, ಶಂಕರ ದಾಸಿಮಯ್ಯ, ಲಕುಮೀಶ್ವರ ಮುಂತಾದವರು ಅಂಥವರಲ್ಲಿ ಅಗ್ರಗಣ್ಯರು. ಇವರೆಲ್ಲ ಕನ್ನಡ ಸಾಹಿತ್ಯಕ್ಕೆ ಅಮೂಲ್ಯ ಕಾಣಿಕೆ ಸಲ್ಲಿಸಿದ್ದಾರೆ.

## ಒಂದನೆಯ ಸೋಮೇಶ್ವರ : (ಕ್ರಿ.ಶ. ೧೦೪೨-೧೦೬೮)

ಒಂದನೆಯ ಸೋಮೇಶ್ವರನು ಇಮ್ಮಡಿ ಜಯಸಿಂಹನ ಮಗ ಮತ್ತು ಉತ್ತರಾಧಿಕಾರಿ. ಈತನಿಗೆ 'ತ್ರೈಲೋಕ್ಯಮಲ್ಲ', 'ಅಹವಮಲ್ಲ' ಮತ್ತು 'ರಾಜನಾರಾಯಣ' ಎಂಬ ಬಿರುದುಗಳೊಂದಿಗೆ 'ವೀರಮಾರ್ತಾಂಡ' ಎಂಬ ನಾಮಾಂಕಿತವೂ ಇದ್ದಿತು. ಒಂದನೆಯ ಸೋಮೇಶ್ವರ ಕಲ್ಯಾಣ ಚಾಲುಕ್ಯರ ಪ್ರಸಿದ್ಧ ಅರಸರಲ್ಲೊಬ್ಬ. ತಂದೆಯ ಕಾಲದಲ್ಲಿ ಚೋಳರೊಡನೆ ಪ್ರಾರಂಭವಾದ ಘರ್ಷಣೆಯು ಈತನ ಕಾಲದಲ್ಲಿಯೂ ಮುಂದುವರೆಯಿತು. ದಕ್ಷಿಣಾಪಥದ ಸಾರ್ವಭೌಮತ್ವಕ್ಕಾಗಿ ಚಾಲುಕ್ಯರು ಮತ್ತೂ ಚೋಳರ ನಡುವೆ ನಡೆದ ಈ ಸಂಘರ್ಷ ಭಾರತದ ಚರಿತ್ರೆಯಲ್ಲಿ ಚಿರಸ್ಥಾಯಿಯಾಗಿದೆ. ರಾಜಾಧಿರಾಜಚೋಳ ಮತ್ತು ಅವನ ಉತ್ತರಾಧಿಕಾರಿಗಳು ಕರ್ನಾಟಕವನ್ನು ಪದೇ ಪದೇ ಆಕ್ರಮಿಸುತ್ತಿದ್ದರಿಂದ ರಾಜ್ಯರಕ್ಷಣೆಯಲ್ಲಿಯೇ ತನ್ನ ಕಾಲಾವಧಿಯನ್ನು ಸೋಮೇಶ್ವರ ಚಕ್ರವರ್ತಿ ಕಳೆಯಬೇಕಾಯಿತು. ಈತ ಚಾಲುಕ್ಯರ ರಾಜಧಾನಿಯನ್ನು ಮಳಖೇಡದಿಂದ ಕಲ್ಯಾಣಕ್ಕೆ ವರ್ಗಾಯಿಸಿದ.[40]

ತಡಖೇಲ್ ಶಾಸನದ ಪ್ರಕಾರ ಸೋಮೇಶ್ವರನು ಮಗಧ, ಕಳಿಂಗ, ಮತ್ತು ಆಂಗ ಮತ್ತು ಕೊಂಕಣದ ಅರಸರನ್ನು ಸೋಲಿಸಿ ತನ್ನ ಸಾಮ್ರಾಜ್ಯವನ್ನು ವಿಸ್ತರಿಸಿದನು.[41] ಅವನ ಸಾಮ್ರಾಜ್ಯ ವಿಸ್ತರಣೆಯಲ್ಲಿ ಅವನ ದಂಡನಾಯಕರಾದ ನಾಗವರ್ಮ ಹಾಗೂ ಮಾಧವರು ಪರಾಕ್ರಮಗೈದರು. ಒಂದನೆಯ ಸೋಮೇಶ್ವರನು ಲಾಟ ದೇಶದ ಒಂದನೆಯ ಚಾಲುಕ್ಯ ಭೀಮನ ಮೇಲೂ ಘೂರ್ಜರ ಚಾಲುಕ್ಯ ವತ್ಸರಾಜ, ಅವನ ಉತ್ತರಾಧಿಕಾರಿಯಾದ ತ್ರಿಲೋಚನ ದೇವನ ಮೇಲೂ ಅಭಿಯೋಗ ಹೂಡಿ ವಿಜಯಿಯಾದನು.[42] ತರುವಾಯ ಉಜ್ಜಯಿನಿಯನ್ನೂ ಮಂಡಪವನ್ನೂ ಪರಮಾರ ಭೋಜರಾಜನ ರಾಜಧಾನಿ ಧಾರಾನಗರಿಯನ್ನು ಸೂರೆಮಾಡಿದನು.[43] ಭೋಜರಾಜನನ್ನು ಧಾರಾನಗರದಿಂದ ಓಡಿಸಿ, ಕಲಚುರಿಯ ಅರಸ ಕರ್ಣನ ಸಾಮರ್ಥ್ಯವನ್ನೂ ಅಡಗಿಸಿದನು.[44] ಅನೇಕ ಅರಸರನ್ನು ಪಾದಾಕ್ರಾಂತಗೊಳಿಸಿ ಕೀರ್ತಿವೇತ್ತ ಒಂದನೆಯ ಸೋಮೇಶ್ವರನು ಚೋಳರಿಂದ ಮಾತ್ರ ಮರ್ಮಾಘಾತವನ್ನು ಅನುಭವಿಸಬೇಕಾಗಿತ್ತು. ಕ್ರಿ.ಶ. ೧೦೪೩-೪೪, ೧೦೪೭, ೧೦೫೧–೫೨, ೧೦೬೩-೬೪ರಲ್ಲಿ ಚೋಳರು ಒಂದನೇ ಸೋಮೇಶ್ವರನ ಸಾಮ್ರಾಜ್ಯದ ಮೇಲೆ ಆಕ್ರಮಣ ಮಾಡಿದರು. ಕ್ರಿ.ಶ. ೧೦೪೩-೪೪ ರಲ್ಲಿ ದಾಳಿಮಾಡಿದ ರಾಜಾಧಿರಾಜನನ್ನು ಹಿಮ್ಮೆಟ್ಟಿಸಿದನು. ಕ್ರಿ. ಶ. ೧೦೪೭ರಲ್ಲಿ ಪುನಃ ಆಕ್ರಮಣಮಾಡಿದ ರಾಜಾಧಿರಾಜಚೋಳನು ಚಾಲುಕ್ಯರ ದಳಪತಿಗಳಾದ ದಿನಕರ, ನಾರಾಯಣ, ಗಣಪತಿ ಮತ್ತು ಕಾಲಿದಾಸನ ಮಗನಾದ ಮಧುಸೂದನ ಮುಂತಾದವರನ್ನು ಸೋಲಿಸಿ, ಕಂಪಿಲಿಯನ್ನು ವಶಪಡಿಸಿಕೊಂಡು, ಕೃಷ್ಣಾನದಿ ತೀರದ 'ಪುಂಡೂರು' ಎಂಬ ನಗರವನ್ನು ಸೂರೆ ಮಾಡಿದನು. ಹೀಗೆ ಪದೇ ಪದೇ ಚೋಳರಿಂದ ಆಕ್ರಮಣಗಳು ನಡೆದರೂ ಸೋಮೇಶ್ವರನಿಗೆ ರಾಜ್ಯನಷ್ಟವೇನೂ ಒದಗಿರಲಿಲ್ಲ. ಬನವಾಸಿಯ ಮಾಂಡಲಿಕನಾದ ಚಾಮುಂಡರಾಯನು ಕ್ರಿ.ಶ. ೧೦೪೭ರೊಳಗಾಗಿ ಚೋಳರನ್ನು ಚಾಲುಕ್ಯ ರಾಜ್ಯದಿಂದ ಉಚ್ಚಾಟನೆ ಮಾಡಿದನು.[45]

ಕ್ರಿ.ಶ. ೧೦೫೧-೫೨ ರಲ್ಲಿ ರಾಜಾಧಿರಾಜಚೋಳನು ಒಂದನೆಯ ಸೋಮೇಶ್ವರನ ಮೇಲೆ ಮತ್ತೊಮ್ಮೆ ಆಕ್ರಮಣ ಮಾಡಿ, ಅನೇಕ ಜೈನಬಸದಿಗಳನ್ನು ಸುಟ್ಟು ಹಾಕಿದನು. ಕೊಲ್ಲಾಪುರದಿಂದ ದಕ್ಷಿಣದ ಕಡೆಗೆ ಬರುತ್ತಿದ್ದ ಚೋಳ ಸೈನ್ಯವನ್ನು 'ಕೊಪ್ಪಂ' ಎಂಬಲ್ಲಿ ಸಂಧಿಸಿ ಭೀಕರವಾಗಿ ಹೋರಾಡಿದನು.[46] ಈ ಯುದ್ಧದಲ್ಲಿ ಸೋಮೇಶ್ವರನ ಸಾಮಂತ ಪೆರ್ಮಾಣಿ ಮಾದರಸನೆಂಬುವನು ಚೋಳರ ರಾಜಾಧೀರಾಜನನ್ನು ಹೊಡೆದುರುಳಿಸಿದನು. ಭೂಶಾಯಿಯಾದ ಚೋಳರಾಜನು ಅಲ್ಲೇ ಅಸು ನೀಗಿದನು. ಒಡೆಯನ ಮರಣದಿಂದ ದಿಗ್ಭ್ರಾಂತವಾದ ಚೋಳರ ಸೈನ್ಯವನ್ನು ಇಮ್ಮಡಿ ರಾಜೇಂದ್ರನು ಯಶಸ್ವಿಯಾಗಿ ಮುನ್ನಡೆಸಿದನು. ಮತ್ತೆ ಇಮ್ಮಡಿ ರಾಜೇಂದ್ರನಿಗೂ ಮತ್ತು ಒಂದನೆಯ ಸೋಮೇಶ್ವರನಿಗೂ ಕದನ ಮುಂದುವರಿಯಿತು. ಈ ಕದನದಲ್ಲಿ ರಾಜೇಂದ್ರಚೋಳನು ವಿಜಯವನ್ನು ಪಡೆದನಾದರೂ. ಚಾಲುಕ್ಯ ರಾಜ್ಯವನ್ನು ಸೆಳೆದುಕೊಳ್ಳಲು ಶಕ್ತನಾಗಲಿಲ್ಲ. ರಾಜೇಂದ್ರಚೋಳನ ವಿಜಯವನ್ನು ಚೋಳಶಾಸನಗಳು ಉಲ್ಲೇಖಿಸುತ್ತವೆ.[47] ಚೋಳರ ಉಪಟಳವನ್ನು ತಾಳದೇ ಒಂದನೆಯ ಸೋಮೇಶ್ವರನು ಅಂತಿಮವಾಗಿ ಕ್ರಿ.ಶ. ೧೦೫೯ ಮತ್ತು ೧೦೬೧ ರ ನಡುವೆ ತನ್ನ ಮಗನಾದ ವಿಕ್ರಮಾದಿತ್ಯನೊಡಗೂಡಿ ಚೋಳರಾಜ್ಯದ ಮೇಲೆ ದಂಡೆತ್ತಿ ಹೋದನು. ತುಂಗಾನದಿ ತೀರದ ಮೂಡುಕಾಕೆರೆ ಎಂಬಲ್ಲಿ ಚೋಳರು ಚಾಲುಕ್ಯರನ್ನು ಪ್ರತಿಭಟಿಸಿ, ಹಿಮ್ಮೆಟಿಸಿದರು. ಇಲ್ಲಿಯೂ ಸೋಮೇಶ್ವರನು ಯಶಕಾಣಲಾಗಲಿಲ್ಲ. ಆದರೆ ಕೊನೆ ಕೊನೆಗೆ ಚೋಳರನ್ನು ಚಾಲುಕ್ಯ ರಾಜ್ಯದಿಂದ ಹೊರಗಟ್ಟುವಲ್ಲಿ ಯಶಸ್ವಿಯಾದನು.

ಸೋಮೇಶ್ವರನು ತನ್ನ ರಾಜ್ಯಸಂಘಟನೆಗಾಗಿ ನಾಲ್ಕು ಸಾಮಂತ ಕುಟುಂಬಗಳಲ್ಲಿ ಮದುವೆಯಾಗಿದ್ದನು. ಅವರೇ ಬಾಚಲದೇವಿ,[48] ಚಂದಲಾದೇವಿ,[49] ಮೈಳಲಾದೇವಿ,[50] ಕೇತಲದೇವಿ[51] ಎಂಬ ರಾಣಿಯರು. ಇವರಲ್ಲಿ ಬಾಚಲದೇವಿಯೇ ಇವನ ಮೊದಲ ಹೆಂಡತಿಯಾಗಿರಬೇಕು. ಈಕೆಯ ಮಕ್ಕಳೇ ಇಮ್ಮಡಿ ಸೋಮೇಶ್ವರ, ಆರನೆಯ ವಿಕ್ರಮಾದಿತ್ಯ ವಿಷ್ಣುವರ್ಧನ ವಿಜಯಾದಿತ್ಯ ಮತ್ತು ಜಯಸಿಂಹ. ಇಮ್ಮಡಿ ಸೋಮೇಶ್ವರ, ಆರನೆಯ ವಿಕ್ರಮಾದಿತ್ಯ, ವಿಷ್ಣುವರ್ಧನ ವಿಜಯಾದಿತ್ಯ ಮತ್ತು ಜಯಸಿಂಹ ಇವರೆಲ್ಲರೂ ಅವನ ಕಾಲದಲ್ಲಿ ಮಂಡಲಾಧಿಪತಿಗಳಾಗಿದ್ದರು. ಒಂದನೆಯ ಸೋಮೇಶ್ವರನ ಪುತ್ರರಲ್ಲಿ ವಿಕ್ರಮಾದಿತ್ಯನೇ ಅತ್ಯಂತ ಸಮರ್ಥನಾಗಿದ್ದನು. ಈತ ಗಂಗವಾಡಿ, ಬನವಾಸಿ, ಸಾಂತಳಿಗೆ ಮತ್ತು ನೊಳಂಬವಾಡಿ ಪ್ರಾಂತಗಳಿಗೆ ಅಧಿಪತಿಯಾಗಿದ್ದನು. ಸೋಮೇಶ್ವರನು ವಿಕ್ರಮಾದಿತ್ಯನಿಗೆ ರಾಜ್ಯಾಭಿಷೇಕ ಮಾಡುವುದಾಗಿ ಸಂಕಲ್ಪಿಸಿದ್ದ, ಆದರೆ ಇಮ್ಮಡಿ ಸೋಮೇಶ್ವರನು ಹಿರಿಯವನಾಗಿದ್ದರಿಂದ ಅವನಿಗೆ ಪಟ್ಟ ಸಲ್ಲಬೇಕೆಂದು ವಿಕ್ರಮಾದಿತ್ಯನು ಸಿಂಹಾಸನವನ್ನು ಅಲ್ಲಗಳೆದನೆಂದ ಬಿಲ್ಹಣ ಉಲ್ಲೇಖಿಸಿದ್ದಾನೆ.[52] ತದನಂತರ ಇಮ್ಮಡಿ ಸೋಮೇಶ್ವರನು ಯುವರಾಜನಾಗಿ ನೇಮಕಗೊಳ್ಳುತ್ತಾನೆ. ಒಂದನೆಯ ಸೋಮೇಶ್ವರ ತನ್ನ ಜೀವಿತಕಾಲವನ್ನೆಲ್ಲ ಚೋಳರೊಂದಿಗಿನ ಸಂಘರ್ಷದಲ್ಲಿಯೇ ಕಳೆದ. ಕ್ರಿ.ಶ. ೧೦೬೮ರಲ್ಲಿ ತೀವ್ರ ಜ್ವರದಿಂದ ಬಳಲುತ್ತಿದ್ದು, ಯಾವುದೇ ಔಷಧಿ, ಉಪಚಾರಗಳಿಂದ

ಗುಣಕಾಣದೇ ಕುರುವತ್ತಿಯ ಸಮೀಪ ತುಂಗಭದ್ರಾ ನದಿಯಲ್ಲಿ ಜಲಸಮಾಧಿಯ ಮೂಲಕ ನಿಧನಹೊಂದಿದ.[53]

**ಇಮ್ಮಡಿ ಸೋಮೇಶ್ವರ : (ಕ್ರಿ.ಶ. ೧೦೬೮-೧೦೭೬)**

ಒಂದನೆಯ ಸೋಮೇಶ್ವರನು ಕಾಲಾಧೀನನಾದ ಮೇಲೆ ಅವನ ಹಿರಿಯಮಗ ಇಮ್ಮಡಿ ಸೋಮೇಶ್ವರನು 'ಭುವನೈಕಮಲ್ಲ' ಎಂಬ ಬಿರುದಿನಿಂದ ಪಟ್ಟಕ್ಕೆ ಬಂದನು. ಈತನಾಳಿಕೆಗೆ ಸಂಬಂಧಪಟ್ಟಂತೆ ಹಲವಾರು ಶಾಸನಗಳು ಲಭ್ಯವಾಗಿವೆ. ಏಳು ವರ್ಷಗಳ ಕಾಲ ಆಳ್ವಿಕೆ ಮಾಡಿದ ಭುವನೈಕಮಲ್ಲ ಭ್ರಾತೃವರ್ಗದವರೊಂದಿಗೆ ನಡೆದ ಅಂತಃಕಲಹಗಳಿಂದ ತತ್ತರಿಸಿ ಹೋಗಿದ್ದ. ಬಿಲ್ಹಣನ 'ವಿಕ್ರಮಾಂಕದೇವಚರಿತಂ' ದ ಪ್ರಕಾರ ಒಂದನೆಯ ಸೋಮೇಶ್ವರ ಮೊದಲು ತನ್ನ ನಂತರ ಆರನೆಯ ವಿಕ್ರಮಾದಿತ್ಯನೇ ಚಾಲುಕ್ಯ ಚಕ್ರವರ್ತಿಯಾಗಬೇಕೆಂದು ಬಯಸಿ ಅವನಿಗೆ ಪಟ್ಟಕಟ್ಟಲು ನಿರ್ಧರಿಸಿರುತ್ತಾನೆ. ಆದರೆ ವಿಕ್ರಮಾದಿತ್ಯನು ಇದನ್ನು ನಯವಾಗಿ ತಿರಸ್ಕರಿಸುತ್ತಾನೆ. ನ್ಯಾಯಯುತವಾಗಿ ಚಾಲುಕ್ಯ ಸಿಂಹಾಸನಕ್ಕೆ ಹಿರಿಯ ಮಗನಾದ ೨ನೆಯ ಸೋಮೇಶ್ವರನೆಯು ರಾಜನಾಗಬೇಕು. ಅವನ ಆಜ್ಞಾವರ್ತಿಯಾಗಿ ತಾನು ಕಾರ್ಯನಿರ್ವಹಿಸಿ ಸಾಮ್ರಾಜ್ಯ ರಕ್ಷಿಸುವುದಾಗಿ ವಿಕ್ರಮಾದಿತ್ಯ ತನ್ನ ತಂದೆಯ ಮನವೊಲಿಸುತ್ತಾನೆ. ಮತ್ತು ತನಗೆ ಒದಗಿ ಬಂದಿದ್ದ ರಾಜ್ಯಲಕ್ಷ್ಮಿಯನ್ನು ತಿರಸ್ಕರಿಸಿ ತನ್ನ ಹಿರಿತನವನ್ನು ಪ್ರದರ್ಶಿಸುತ್ತಾನೆ.[54] ತಂದೆಯ ಮರಣಾನಂತರ ಇಮ್ಮಡಿ ಸೋಮೇಶ್ವರ ಚಾಲುಕ್ಯ ಚಕ್ರವರ್ತಿಯಾಗುತ್ತಾನೆ. ಆರನೆಯ ವಿಕ್ರಮಾದಿತ್ಯ ಮತ್ತು ಇಮ್ಮಡಿ ಸೋಮೇಶ್ವರನ ಮಧ್ಯದಲ್ಲಿ ಕೆಲವು ಕಾಲ ಸೌಹಾರ್ಧತೆಯಿತ್ತು. ಆರನೆಯ ವಿಕ್ರಮಾದಿತ್ಯನ ಶೌರ್ಯ, ಸಾಹಸ ಗುಣಗಳು ಚಕ್ರವರ್ತಿಯಾದ ಸೋಮೇಶ್ವರನಿಗಿಂತಲೂ ಅವನನ್ನು ಪ್ರಸಿದ್ಧನನ್ನಾಗಿ ಮಾಡಿದ್ದರಿಂದ ಇವರಿಬ್ಬರಲ್ಲಿ ವ್ಯತ್ಯಾಸಗಳು ಕಂಡುಬಂದವೆಂದೂ ನಂತರ ವಿಕ್ರಮಾದಿತ್ಯನು ಕಲ್ಯಾಣ ನಗರವನ್ನು ತ್ಯಜಿಸಬೇಕಾಯಿತೆಂದೂ ಬಿಲ್ಹಣ ತನ್ನ ಕೃತಿಯಲ್ಲಿ ಕಾವ್ಯಮಯವಾಗಿ ವಿವರಿಸಿದ್ದಾನೆ.[55] 049389

ವಿಕ್ರಮಾದಿತ್ಯನು ಅಣ್ಣನ ವೈರತ್ವಕ್ಕೆ ಗುರಿಯಾಗಿ ಕಲ್ಯಾಣವನ್ನು ತೊರೆದಾದ ಮೇಲೆ ಚಾಲುಕ್ಯರ ಕುಲವೈರಿಗಳಾದ ಚೋಳ ವೀರರಾಜೇಂದ್ರನ ಮಗಳನ್ನು ವರಿಸಿ, ಅವನ ಬೆಂಬಲವನ್ನು ಗಳಿಸಿಕೊಂಡನು. ವೀರರಾಜೇಂದ್ರ ಚೋಳನು ಅಳಿಯನಾದ ವಿಕ್ರಮಾದಿತ್ಯನಿಗೆ ರಾಜ್ಯವನ್ನು ಗಳಿಸಿಕೊಡುವ ನಿಮಿತ್ತವಾಗಿ, ಕ್ರಿ.ಶ. ೧೦೬೮-೬೯ರಲ್ಲಿ ಇಮ್ಮಡಿ ಸೋಮೇಶ್ವರನ ಮೇಲೆ ದಂಡೆತ್ತಿ ಬಂದು ಕಂಪಿಲಿ ನಗರವನ್ನು ಸುಟ್ಟಿಕ್ಕಿ 'ಕರಡಿಕಲ' (ಈಗಿನ ಲಿಂಗಸಗೂರು ತಾಲೂಕಿನ ಕರಡಿ) ಎಂಬಲ್ಲಿ ವಿಜಯಸ್ತಂಭವನ್ನು ನೆಡಸಿದನು. ಹಾಗೆಯೇ ಇಮ್ಮಡಿ ಸೋಮೇಶ್ವರನನ್ನು ಸೋಲಿಸಿದ ಚೋಳ ವೀರರಾಜೇಂದ್ರನು ವಿಕ್ರಮಾದಿತ್ಯನನ್ನು ರಟ್ಟಪಾಡಿ ಏಳೂವರೆ ಲಕ್ಷ ನಾಡಿನ ರಾಜನೆಂದು ಘೋಷಿಸಿದನು.[56] ಈ ಸಂದರ್ಭದಲ್ಲಿ ಇಮ್ಮಡಿ ಸೋಮೇಶ್ವರನು ಅಪಾರ ಸೈನ್ಯ ಸಮೇತನಾಗಿ ಬಂದು ವೀರರಾಜೇಂದ್ರನನ್ನು ಬಡಿದಟ್ಟಿ ರಾಜ್ಯದಲ್ಲಿ ಪುನಃ

ಶಾಂತಿ ಸ್ಥಾಪಿಸಿದನು. ಇದಾದ ಮೇಲೆ ವಿಕ್ರಮಾದಿತ್ಯನು ಸುಮಾರು ಕ್ರಿ.ಶ. ೧೦೭೪ರ ವರೆಗೂ ಅಣ್ಣನಿಗೆ ಅಧೀನನಾಗಿ, ಅವನೊಡನೆ ಸೌಹಾರ್ದದಿಂದಲೇ ಇದ್ದನು.

ಒಂದನೆಯ ಸೋಮೇಶ್ವರನ ಅವಧಿಯಲ್ಲಿ ಆರನೆಯ ವಿಕ್ರಮಾದಿತ್ಯನು ಮಹಾಮಂಡಳೇಶ್ವರನಾಗಿ ಗಂಗವಾಡಿ ೯೬,೦೦೦, ಬನವಾಸಿ ೧೨,೦೦೦, ನೊಳಂಬವಾಡಿ ೩೨,೦೦೦ ಗಳನ್ನು ಕುಮಾರವೃತ್ತಿಯಿಂದ ಆಳುತ್ತಿದ್ದು ಇಮ್ಮಡಿ ಸೋಮೇಶ್ವರ ಅಧಿಕಾರಕ್ಕೆ ಬಂದಾಗ ವಿಕ್ರಮಾದಿತ್ಯನ ಅಧೀನದಲ್ಲಿದ್ದ ಆಡಳಿತ ಪ್ರಾಂತಗಳನ್ನು ಒಂದೊಂದಾಗಿ ಬಿಡಿಸಿ ತನ್ನ ನೆಚ್ಚಿನ ಬಂಟರಿಗೆ ಕೊಡುತ್ತಾನೆ. ಇದರಿಂದ ವಿಕ್ರಮಾದಿತ್ಯನಿಗೆ ಅಣ್ಣ ಇಮ್ಮಡಿ ಸೋಮೇಶ್ವರನ ಮೇಲೆ ಸಹಜವಾಗಿ ಸಿಟ್ಟು ಬಂದಿತು. ಸೋಮೇಶ್ವರ ಅಧಿಕಾರ ಲಾಲಸೆಯಿಂದ ಉನ್ಮತ್ತನಾಗಿ ಪ್ರಜಾಕಲ್ಯಾಣವನ್ನು ಕಡೆಗಣಿಸಿದ್ದ ಕಾರಣವಾಗಿ ಆರನೆಯ ವಿಕ್ರಮಾದಿತ್ಯನು ಅಣ್ಣನಿಗೆ ಸೋಲಿಸಿ ತಾನು ಚಾಲುಕ್ಯ ಸಿಂಹಾಸನವನ್ನೇರುತ್ತಾನೆಂದು ಡಾ. ಎಂ. ಜೆ. ಎಂ. ನಾಗಯ್ಯ ತಮ್ಮ ಪ್ರಬಂಧದಲ್ಲಿ ಸ್ಪಷ್ಟಪಡಿಸಿದ್ದಾರೆ.[57] ವಿಕ್ರಮಾದಿತ್ಯನಿಗೆ ಸಹೋದರ ಜಯಸಿಂಹನು ಸಹಾಯ ಮಾಡಿ ಪಟ್ಟಗಟ್ಟಿದನೆಂದು ನರಗುಂದ ಶಾಸನ ತಿಳಿಸುತ್ತದೆ.[58] ದಾಯಾದಿಗಳ ಈ ಸಮರದಲ್ಲಿ ಇಮ್ಮಡಿ ಸೋಮೇಶ್ವರನು ಚೋಳರ ರಾಜಿಗನ (ಕುಲೋತ್ತುಂಗಚೋಳ) ಬೆಂಬಲವನ್ನು ಪಡೆದಿದ್ದು, ಪ್ರಮುಖ ಮಹಾಮಂಡಳೇಶ್ವರರು ವಿಕ್ರಮಾದಿತ್ಯನ ಪಕ್ಷದಲ್ಲಿದ್ದರು. ಅಂತಿಮವಾಗಿ ಅಧಿಕಾರ ಪಡೆಯುವಾಗಲೇ ದ್ವಂದ್ವಕ್ಕೊಳಗಾದ ಇಮ್ಮಡಿ ಸೋಮೇಶ್ವರ ತನ್ನ ತಮ್ಮ ಆರನೇಯ ವಿಕ್ರಮಾದಿತ್ಯನಿಂದ ಸಾಮ್ರಾಜ್ಯ ಕಳೆದುಕೊಂಡ. ಕ್ರಿ.ಶ. ೧೦೭೬ ರಲ್ಲಿ ಆರನೆಯ ವಿಕ್ರಮಾದಿತ್ಯನು ಪಟ್ಟಾಭಿಷಿಕ್ತನಾದ ಮೇಲೆ ಸೋಮೇಶ್ವರ ಏನಾದ ಎಂಬುದು ತಿಳಿದು ಬರುವುದಿಲ್ಲ. ಬಹುಶಃ ತಮ್ಮನ ಸೆರೆಮನೆಯಲ್ಲಿಯೆ ತನ್ನ ಜೀವಿತವನ್ನು ಕೊನೆಗಾಣಿಸಿರಬಹುದು.[59]

## ಆರನೆಯ ವಿಕ್ರಮಾದಿತ್ಯ : (ಕ್ರಿ.ಶ. ೧೦೭೬-೧೧೨೬)

'ಭೂಮಿಯ ಮೇಲೆ ಕಲ್ಯಾಣದಂಥ ಮತ್ತೊಂದು ನಗರ ಈ ಹಿಂದೆ ಇರಲಿಲ್ಲ. ಇಂದೂ ಇಲ್ಲ; ಮುಂದೆಯೂ ಹುಟ್ಟುವುದಿಲ್ಲ. ವಿಕ್ರಮಾದಿತ್ಯನಂಥ ಚಕ್ರವರ್ತಿ ಪ್ರಪಂಚದಲ್ಲಿ ಬೇರೆ ಯಾರೂ ಇಲ್ಲ', ಎಂದು ವಿಜ್ಞಾನೇಶ್ವರನು 'ಮಿತಾಕ್ಷರ' ಗ್ರಂಥದಲ್ಲಿ ಹೇಳಿದ್ದಾನೆ.[60] 'ತ್ರಿಭುವನಮಲ್ಲ', 'ಪೆರ್ಮಾಡಿ' ಎಂಬ ಬಿರುದುಗಳನ್ನು ಹೊಂದಿದ್ದ ಆರನೆಯ ವಿಕ್ರಮಾದಿತ್ಯ ಜನಾನುರಾಗಿಯೂ ದಕ್ಷ ಆಡಳಿತಗಾರನೂ ಅಪ್ರತಿಮ ಸಾಹಸಿಯೂ ಉದಾರ ದಾನಿಯೂ ಆಗಿದ್ದ ಶಕಪುರುಷ. ಭಾರತದ ಇತಿಹಾಸದಲ್ಲಿ ಕನ್ನಡ ನಾಡಿನ ಘನತೆ. ಸ್ಥಾನಮಾನಗಳು ಬಾನುದ್ದಕ್ಕೆ ನೆಗೆಯಲು ಕಾರಣರಾದ ಕೆಲವೇ ಜನ ರಾಜ ಪ್ರಮುಖರಲ್ಲಿ ಆರನೆಯ ವಿಕ್ರಮಾದಿತ್ಯನೂ ಒಬ್ಬ. ಇವನಂಥ ದರ್ಪದ ಸಮರ್ಥ ದೊರೆ ಭಾರತದ ಇತಿಹಾಸದಲ್ಲಿ ಸಿಗುವುದು ವಿರಳ. ಚಾಲುಕ್ಯರ ಪೂರ್ವದ ಪ್ರಸಿದ್ಧ ರಾಜನಾಗಿದ್ದ ಇಮ್ಮಡಿ ಪುಲಿಕೇಶಿಯೂ ಇವನಿಗೆ ಸಮಬರಲಾರನೆಂದು ತೋರುತ್ತದೆ. ಆದುದರಿಂದಲೇ ಹಿರೇಹಳ್ಳಿ ಶಾಸನ[61] ಇವನನ್ನು ಕುರಿತು

'ಅತನ ವಂಶಜರಖಿಳೋರ್ವ್ವ ತಳಪತಿಗಳು ನೆಗಳ್ದರವರೊಳು ವರವಿಖ್ಯಾತಿಯನಾನ್ತ(೦) ಶ್ರೀ ತರುಣೀಪತಿಯೆನಿಪ್ಪ ಪೆರ್ಮಾಡಿನ್ರಿಪ'. ಎಂದು ಚಾಳುಕ್ಯ ಚಕ್ರವರ್ತಿಗಳಲ್ಲಿಯೇ ಇವನು ಹೆಚ್ಚು ಪ್ರಸಿಧ್ಧನೆಂದು ಹೇಳಿದಂತಿದೆ 'ನಿತ್ಯಭೂಮಿ ದಾನಲೋಲ'ನಾಗಿದ್ದ ವಿಕ್ರಮಾದಿತ್ಯನು ನಮ್ಮ ಅಧ್ಯಯನದ ದೃಷ್ಟಿಯಿಂದಲೂ ಬಹು ಅಮೂಲ್ಯ ವ್ಯಕ್ತಿ. ಏಕೆಂದರೆ ೫೦ ವರ್ಷಗಳ ತನ್ನ ಸುದೀರ್ಘ ಆಡಳಿತಾಧಿಯಲ್ಲಿ ಈತ ಬರೆಯಿಸಿದ ಶಾಸನಗಳ ಸಂಖ್ಯೆ ಒಂದು ಸಾವಿರಕ್ಕೂ ಮೇಲು.[62] ಪ್ರಸ್ತುತ ಅಧ್ಯಯನಕ್ಕೆ ೬೦೦ ಶಾಸನಗಳನ್ನು ಮಾತ್ರ ಬಳಸಿಕೊಳ್ಳಲಾಗಿದೆ.

ಸಂಖ್ಯಾದೃಷ್ಟಿಯಿಂದ ಪ್ರಪಂಚದಲ್ಲಿಯೇ ಅಧಿಕ ಶಾಸನ ಬರೆಯಿಸಿದ ಆರನೆಯ ವಿಕ್ರಮಾದಿತ್ಯ ಅದ್ವಿತೀಯ ಸಾಮ್ರಾಟನಾಗಿದ್ದಾನೆ.[63]ಇವನ ಶಾಸನಗಳಲ್ಲಿ ಆ ಕಾಲದ ರಾಜಕೀಯ, ಧಾರ್ಮಿಕ ಆರ್ಥಿಕ, ಸಾಮಾಜಿಕ ಮೊದಲಾದ ವಿಷಯಗಳ ಭಾಂಡಾರವಿದೆ. ಕೇವಲ ವಿಕ್ರಮಾದಿತ್ಯನ ಶಾಸನಗಳು ಒಂದು ಮಹಾಪ್ರಬಂಧಕ್ಕೆ ನಿಲುಕದೆಂಬ ಕಾರಣಕ್ಕೆ ಡಾ.ಜೆ.ಎಂ. ನಾಗಯ್ಯ ಅವರು ಆತನ ಆಡಳಿತಕ್ಕೆ ತಮ್ಮ ಸಂಶೋಧನಾ ಪ್ರಬಂಧವನ್ನು ಸೀಮಿತಗೊಳಿಸಿಕೊಂಡಿರುವುದನ್ನು ಇಲ್ಲಿ ಸ್ಮರಿಸಬಹುದು. ಇಷ್ಟೊಂದು ಸಾಧನಾ ವ್ಯಾಪ್ತಿ ಹೊಂದಿರುವ ವಿಕ್ರಮಾದಿತ್ಯನ ಸಾಧನೆಗಳನ್ನು ಅಧ್ಯಯನಕ್ಕೆ ಪೂರಕವೆಂಬಂತೆ ನಿವೇದಿಸಲಾಗಿದೆ.

ತ್ರಿಭುವನಮಲ್ಲ ವಿಕ್ರಮಾದಿತ್ಯನ ಅತಿಶಯವಾದ ಶೌರ್ಯ ಸಾಹಸಗಳನ್ನು ಹೇಳಲೆಂದೇ ಬಿಲ್ಹಣ "ವಿಕ್ರಮಾಂಕಚರಿತಂ" ಕಾವ್ಯವನ್ನು ಬರೆದಿದ್ದಾನೆ. ಗದಗ ಶಾಸನ ವಿಕ್ರಮಾದಿತ್ಯನು ಸೋಮೇಶ್ವರನ ಅತ್ಯಂತ ಪ್ರೀತಿಯ ಸುತನೆಂದು ಬಹುವಾಗಿ ವರ್ಣಿಸಿದೆ. ಹಿರಿಯ ಮಗನಾಗಿ ಭುವನೈಕಮಲ್ಲ ಸೋಮೇಶ್ವರನು ಇದ್ದಾಗಲೂ ಕಿರಿಯವನಾದ ವಿಕ್ರಮಾದಿತ್ಯನಿಗೆ ಪಟ್ಟ ಕಟ್ಟಲು ೧ನೆ ಸೋಮೇಶ್ವರನು ಇಚ್ಚಿಸುತ್ತಾನೆ. ವಿಕ್ರಮಾದಿತ್ಯನು ಅಪ್ಪನ ಇಚ್ಛೆಯನ್ನು ತಿರಸ್ಕರಿಸಿ ನ್ಯಾಯಬದ್ಧವಾಗಿ ಸಿಗಬೇಕಾಗಿದ್ದ ಸಿಂಹಾಸನವನ್ನು ಅಣ್ಣ ೨ನೇ ಸೋಮೇಶ್ವರನಿಗೆ ಒದಗಿಸಿಕೊಡುತ್ತಾನೆ. ಎಂಬುದನ್ನು ಈ ಹಿಂದೆ ಚರ್ಚಿಸಲಾಗಿದೆ. ಅಣ್ಣನ ಅಸಮರ್ಥ ಹಾಗೂ ದ್ವೇಷದ ಆಡಳಿತದಿಂದ ರೋಸಿ ಹೋಗಿ ಅವನ ವಿರುದ್ಧ ಬಂಡಾಯ ಮಾಡಿ ಚಾಲುಕ್ಯ ಚಕ್ರವರ್ತಿಯಾಗುತ್ತಾನೆ.

ಆರನೆಯ ವಿಕ್ರಮಾದಿತ್ಯ ಸಿಂಹಾಸನವನ್ನೇರಿದ ಕೂಡಲೇ ಮಾಡಿದ ಮೊದಲ ಕಾರ್ಯವೆಂದರೆ : 'ವಿಕ್ರಮಶಕೆ'ಯನ್ನು ಆರಂಭಿಸಿದ್ದು. ಕ್ರಿ.ಶ. ೧೦೭೬ ಮಾರ್ಚ ೯ನೆಯ ತಾರೀಖಿನಂದು ತನ್ನ ಹೆಸರಿನ ವಿಕ್ರಮಶಕೆಯನ್ನು ಆರಂಭಿಸಿದ.[65] ಅಂದು ಭಾರತದ ಎಲ್ಲ ಕಡೆಗಳಲ್ಲೂ ಶಾಲಿವಾಹನಶಕೆ ಬಳಕೆಯಲ್ಲಿತ್ತು. ವಿಕ್ರಮಶಕೆಯನ್ನು ಆರಂಭಿಸಿದ ನೂರು ವರ್ಷಗಳವರೆಗೆ ಅದು ಚಾಲುಕ್ಯ ಸಾಮ್ರಾಜ್ಯದಲ್ಲಿ ಚಲಾವಣೆಯಲ್ಲಿತ್ತು.[66] ಮುಂದೆ ವಿಕ್ರಮಾದಿತ್ಯನ ಮಗ ೩ನೆಯ ಸೋಮೇಶ್ವರನು 'ಭೂಲೋಕ ವರ್ಷ' ಎಂಬ ಸ್ವತಂತ್ರ ಶಕೆಯನ್ನು ಪ್ರಾರಂಭಿಸಿದ. ಅವನ ರಾಜ್ಯದಭಾರದೊಡನೆ ಆ ಶಕವೂ ಸಮಾಪ್ತವಾಯಿತು.

ಸ್ವಭಾವತಃ ವೀರನಾಗಿದ್ದ ವಿಕ್ರಮಾದಿತ್ಯ ತನ್ನ ೧೬ನೆಯ ವಯಸ್ಸಿನಿಂದಲೇ ರಣರಂಗ ಪ್ರವೇಶಿಸಿದ. ಕುಮಾರವೃತ್ತಿಯಿಂದ ಆಳುತ್ತಿರುವಾಗಲೇ ಶ್ರೇಷ್ಠ ವೀರನೆನೆಸಿಕೊಂಡಿದ್ದ. ದಕ್ಷಿಣ ಭಾರತದಲ್ಲಿ ಬಲಾಢ್ಯರಾಗಿದ್ದ ಚೋಳರೊಂದಿಗೆ ವಿಕ್ರಮಾದಿತ್ಯನು ಹಲವು ಭಾರಿ ಸೆಣಸಬೇಕಾಯಿತು. ಒಂದನೆಯ ರಾಜಧಿರಾಜ, ರಾಜೇಂದ್ರದೇವ, ವೀರರಾಜೇಂದ್ರ, ೨ನೆ ರಾಜೇಂದ್ರಚೋಳ (ರಾಜಿಗ/ಕುಲೋತ್ತುಂಗI) ಮುಂತಾದ ಚೋಳ ದೊರೆಗಳೊಂದಿಗೆ ೬ನೆ ವಿಕ್ರಮಾದಿತ್ಯನು ಯುದ್ಧ ಮಾಡುತ್ತಾನೆ.[67] ಈ ಯುದ್ಧಗಳಲ್ಲಿ ವಿಕ್ರಮಾದಿತ್ಯ ಚೋಳರ ಕಂಚಿ ನಗರವನ್ನು ಎರಡು ಬಾರಿ ಸೂರೆಗೊಂಡು ಚೋಳರ ಅಹಂಕಾರವನ್ನು ಅಡಗಿಸಿದನು. ವಿಕ್ರಮಾದಿತ್ಯನು ಮಾಳವರ ಉದಯಾದಿತ್ಯ[68] ಕೊಲ್ಹಾಪುರದ ಶಿಲಾಹರ ಭೋಜ,[69] ಹೊಯ್ಸಳರ ವಿಷ್ಣುವರ್ಧನ[70] ಮುಂತಾದ ಪ್ರಮುಖ ಅರಸರನ್ನು ಸೋಲಿಸುತ್ತಾನೆ. ಚೋಳರೊಂದಿಗಿನ ದೀರ್ಘ ಹೋರಾಟದಲ್ಲಿ ಮಡಕೆದೊರೆ ಯುದ್ಧ[71] ಗಂಗೆಪುರದ ಚೋಳಪುರದ[72] ಪ್ರಮುಖ ಯುದ್ಧಗಳು ಜರುಗಿದವು. ಮಹಾಮಂಡಳೇಶ್ವರರಲ್ಲಿ ಅತ್ಯಂತ ಬಲಿಷ್ಠನಾಗಿದ್ದ ಹೊಯ್ಸಳ ವಿಷ್ಣುವರ್ಧನನೊಡನೆ ಕ್ರಿ.ಶ. ೧೧೦೪-೦೫ರಲ್ಲಿ ಸರೇಗಲ್‌ದ ಬಳಿ ನಡೆದ ಕಾಳಗ,[73] ಕಣ್ಣೆಗಾಲ ಬಿಜಾನಕಬಿಯ ಕಾಳಗ,[74] ಹಲಸೂರ ಕಾಳಗ[75] ಗಳು ನಡೆದು ವಿಕ್ರಮಾದಿತ್ಯನು ಅಜೇಯನಾಗಿದ್ದ. ಸ್ವತಂತ್ರನಾಗಲು ಹವಣಿಕೆಯಲ್ಲಿ ಹೊಯ್ಸಳ ವಿಷ್ಣುವರ್ಧನನು ಎಷ್ಟೇ ಪ್ರಯತ್ನಿಸಿದರೂ ಆರನೇ ವಿಕ್ರಮಾದಿತ್ಯನ ಕಾಲಾವಧಿಯಲ್ಲಿ ಸಾಧ್ಯವಾಗಲೇ ಇಲ್ಲ.

ವಿಕ್ರಮಾದಿತ್ಯ ತನ್ನ ಐವತ್ತು ವರ್ಷಗಳ ಸುಧೀರ್ಘ ಅವಧಿಯಲ್ಲಿ ಹಲವಾರು ದಿಗ್ವಿಜಯಗಳನ್ನು ಕೈಕೊಂಡಿದ್ದಾನೆ. ಕೇವಲ ದಕ್ಷಿಣ ಭಾರತಕ್ಕೆ ಅವನ ಪರಾಕ್ರಮ ಸೀಮಿತವಾಗಿರದೇ ಕಾಶ್ಮೀರ, ನೇಪಾಳದವರೆಗೆ,[76] ಹಿಮಾಲಯದಿಂದ ಆ ಸೇತು ವರೆಗೆ[77] ಅವನ ಸೈನ್ಯ ನುಗ್ಗಿ ವಿಜಯ ಸಾಧಿಸಿತ್ತು. ಶಾಬನೂರು ಶಾಸನದ ಪ್ರಕಾರ ವಿಕ್ರಮಾದಿತ್ಯನ ಮಹಾಮಂಡಳೇಶ್ವರನಾದ ತ್ರಿಭುವನಮಲ್ಲ ಪಾಂಡ್ಯನು ಕಳಿಂಗ, ವಂಗ, ಮಗಧ, ನೇಪಾಳ, ಪಾಂಚಾಳ, ಗುರ್ಜ್ಜರ, ಗೌಳ, ದ್ರವಿಳ, ಆಂಧ್ರ, ಮಾಳವ, ಸೌರಾಷ್ಟ್ರ, ಬರ್ಬರ, ಕಾಶ್ಮೀರ ಮೊದಲಾದ ಅರಸರನ್ನು ಸೋಲಿಸಿದನೆಂದು ತಿಳಿದು ಬರುತ್ತದೆ.[78] ಈ ಮೇಲಿನ ಮಾತುಗಳಲ್ಲಿ ಉತ್ಪ್ರೇಕ್ಷೆ ಇರಬಹುದಾದರೂ ವಿಕ್ರಮಾದಿತ್ಯನ ಸೈನ್ಯ ಉತ್ತರಭಾರತದ ಕೆಲವು ಪ್ರಾಂತಗಳವರೆಗಾದರೂ ಹೋಗಿ ಅಲ್ಲಿಯ ಅರಸರನ್ನು ಸೋಲಿಸಿರಬಹುದು ಎನಿಸುತ್ತದೆ. ಉತ್ತರಭಾರತದಲ್ಲಿ ನಡೆದ ಯುದ್ಧಗಳಲ್ಲಿ ವೆಂಗಿಮಂಡಳದ ಯುದ್ಧ, ವೆಂಗಿ–ಉಪ್ಪಿನಕಟ್ಟೆ ಯುದ್ಧ, ಜಗನ್ನಾಥಪುರದ ಯುದ್ಧ, ರತ್ನಪುರದ ಯುದ್ಧ ಮುಂತಾದವು ಮುಖ್ಯವಾದವುಗಳು.[79]

ಹೀಗೆ ಅನೇಕ ದಿಗ್ವಿಜಯಗಳನ್ನು ಸಾಧಿಸಿದ ವಿಕ್ರಮಾದಿತ್ಯ ಉತ್ತಮ ಆಡಳಿತಗಾರನೂ ಕಲಾಪೋಷಕನೂ ಅವಿರಳದಾನಿಯೂ ಸಾಹಿತ್ಯ ಪೋಷಕನೂ ಆಗಿದ್ದನು. ಈತನ ಕಾಲದಲ್ಲಿ ನೂರಾರು ದೇವಾಲಯಗಳು ರಚನೆಗೊಂಡವು; ಸಾವಿರಾರು ದಾನಗಳು ನೀಡಲ್ಪಟ್ಟವು; ಈತನ ಆಸ್ಥಾನದಲ್ಲಿ ಅನೇಕ ಮಹಾಜ್ಞಾನಿಗಳು, ಕವಿಗಳು ಆಶ್ರಯ ಪಡೆದಿದ್ದರು. ಕಾಶ್ಮೀರದ ಕವಿ

ಬಿಲ್ಹಣನ 'ವಿಕ್ರಮಾಂಕದೇವ ಚರಿತಂ', 'ಚೋರ ಪಂಚಶಿಖ 'ಕರ್ಣಸುಂದರಿ' ಗ್ರಂಥಗಳು, ವಿಜ್ಞಾನೇಶ್ವರನ 'ಮಿತಾಕ್ಷರ ಸಂಹಿತಾ' (ನ್ಯಾಯಗ್ರಂಥ), ಸರ್ವಜ್ಞ ಚಕ್ರವರ್ತಿ ೩ನೇಯ ಸೋಮೇಶ್ವರನ 'ಮಾನಸೋಲ್ಲಾಸ'ಗಳಂಥ ಮಹಾನ್ ಕೃತಿಗಳು ರಚನೆಗೊಂಡಿವು. ಕಲ್ಯಾಣ ಚಾಲುಕ್ಯರ ಉಜ್ವಲ ನಕ್ಷತ್ರವಾಗಿ ಉದಿಸಿ ಆರನೆಯ ವಿಕ್ರಮಾದಿತ್ಯನು ಇಂದಿಗೂ ಕನ್ನಡ ನಾಡಿನ ಇತಿಹಾಸದಲ್ಲಿ ನಿತ್ಯದಾನ ಲೋಲ'ನೆಂದು ಚಿರಸ್ಥಾಯಿಯಾಗಿದ್ದಾನೆ. ವೈಭವದಿಂದ ಸಾಮ್ರಾಜ್ಯವನ್ನಾಳಿದ ವಿಕ್ರಮಾದಿತ್ಯ ಕ್ರಿ.ಶ. ೧೧೨೬ ರಲ್ಲಿ ಅಸ್ತಂಗತನಾದ.[80] ನಂತರ ಇವನ ಮಗ ೩ನೆಯ ಸೋಮೇಶ್ವರನು ಚಾಲುಕ್ಯ ಸಾಮ್ರಾಜ್ಯಕ್ಕೆ ಪಟ್ಟಾಭಿಷಿಕ್ತನಾಗುತ್ತಾನೆ. ವಿಕ್ರಮಾದಿತ್ಯನ ಹಿರಿಯಪುತ್ರ ಮಲ್ಲಿಕಾರ್ಜುನ ತಂದೆಯ ಕಾಲದಲ್ಲಿ ಯುವರಾಜನಾಗಿದ್ದ.[81] ಆದರೆ ಈತನು ಕ್ರಿ.ಶ. ೧೧೨೩ರಲ್ಲಿಯೇ ಅಕಾಲಿಕ ಮರಣ ಹೊಂದುತ್ತಾನೆ. ಇದಲ್ಲದೆ ವಿಕ್ರಮಾದಿತ್ಯನಿಗೆ ತೈಲಪ, ಜಯಕರ್ಣ ಎಂಬ ಪುತ್ರರೂ ಮೈಳಲ ಮಹಾದೇವಿ ಎಂಬ ಪುತ್ರಿಯೂ ಇದ್ದಳು. ಇವಳು ಕದಂಬ ರಾಜನಾದ ಇಮ್ಮಡಿ ಜಯಕೇಶಿಯನ್ನು ವರಿಸಿದ್ದಳು.

## ಮೂರನೆಯ ಸೋಮೇಶ್ವರ ಭೂಲೋಕಮಲ್ಲ (ಕ್ರಿ.ಶ. ೧೧೨೬-೧೧೩೮)

ವಿಕ್ರಮಾದಿತ್ಯನು ಕ್ರಿ.ಶ. ೧೧೨೬ರಲ್ಲಿ ಮರಣ ಹೊಂದಿದ ಮೇಲೆ ಅವನ ಎರಡನೆಯ ಮಗನಾದ ಸೋಮೇಶ್ವರನು ಪಟ್ಟಕ್ಕೆ ಬಂದನು.[82] ಈತನಿಗೆ 'ಭೂಲೋಕಮಲ್ಲ', 'ತ್ರಿಭುವನಮಲ್ಲ', 'ಸರ್ವಜ್ಞಭೂಪ[83] ಎಂಬ ಬಿರುದುಗಳಿದ್ದವು. ವಿಕ್ರಮಾದಿತ್ಯನಿಗೆ ಯುವರಾಜ ಮಲ್ಲಿಕಾರ್ಜುನ ಪ್ರಿಯಪುತ್ರನಾಗಿದ್ದ. ಆದರೆ ಅವನ ಆಕಾಲಿಕ ಮರಣದ ನಂತರ ೩ನೆಯ ಸೋಮೇಶ್ವರ ಯುವರಾಜನಾಗಿ ಆಡಳಿತದ ಅನುಭವ ಪಡೆದುಕೊಂಡಿದ್ದ. ಕನ್ನಡನಾಡಿನ ತುಂಬೆಲ್ಲ ಈತನ ಆಳ್ವಿಕೆಗೆ ಸಂಬಂಧಪಟ್ಟಂತೆ ಹಲವಾರು ಶಿಲಾಶಾಸನಗಳು ದೊರೆತಿವೆ. ಪ್ರಸ್ತುತ 'ದಾನ-ದತ್ತಿಗಳ' ಕುರಿತಾದ ಅಧ್ಯಯನಕ್ಕೆ ೧೦೫ ಶಾಸನಗಳನ್ನು ಬಳಸಿಕೊಳ್ಳಲಾಗಿದೆ.

ಮೂರನೆಯ ಸೋಮೇಶ್ವರನು ತನ್ನ ತಂದೆ ವಿಕ್ರಮಾದಿತ್ಯನ ವೈಭವವನ್ನು ಮುಂದುವರೆಸಿಕೊಂಡು ಬಂದನು. ಈತನ ಕಾಲದಲ್ಲಿ ಸಾಮ್ರಾಜ್ಯದಲ್ಲಿ ಶಾಂತಿ ನೆಲೆಸಿತ್ತು. ಆದರೆ ಕೆಲವು ಸಂದರ್ಭಗಳಲ್ಲಿ ಕುಲವೈರಿಗಳಾದ ಚೋಳರ ಜೊತೆಗೆ ಸೆಣಸಬೇಕಾಯಿತು. ಬಳ್ಳಿಗಾವೆಯ ಶಾಸನದ ಪ್ರಕಾರ[84] ದಿಗ್ವಿಜಯದ ಆಕಾಂಕ್ಷಿಯಾಗಿ ಬನವಾಸಿಗೆ ಬಂದ ಮೂರನೆಯ ಸೋಮೇಶ್ವರ ಹುಲ್ಲರಿತೀರ್ಥದಲ್ಲಿ ತಂಗಿದ್ದನು. ಈ ಸಂದರ್ಭದಲ್ಲಿ ಕದಂಬ ತೈಲನ ಬಿನ್ನಹದಂತೆ ಕೇದಾರೇಶ್ವರ ದೇವಾಲಯಕ್ಕೆ ದತ್ತಿಗಳನ್ನು ಬಿಟ್ಟನೆಂದು ತಿಳಿದು ಬರುತ್ತದೆ. ಸೋಮೇಶ್ವರನ ಕಾಲದಲ್ಲಿ ಉತ್ತರದಲ್ಲಿ ದೇವಗಿರಿಯ ಯಾದವರೂ ದಕ್ಷಿಣದಲ್ಲಿ  ಹೊಯ್ಸಳರು ಸಮೀಪದ ಕಳಚೂರ್ಯರೂ ಚಾಲುಕ್ಯರ ಅಳ್ವಿಕೆಯಿಂದ ಸ್ವತಂತ್ರರಾಗಲು ಹವಣಿಸುತ್ತಿದ್ದರು. ಆದರೆ ಈತನ ಅವಧಿಯಲ್ಲಿ ಸಾಧ್ಯವಾಗಲಿಲ್ಲ. ತಂದೆ ವಿಕ್ರಮಾದಿತ್ಯನಂತೆಯೇ ೩ನೆಯ ಸೋಮೇಶ್ವರನೂ ಸಹ ತನ್ನದೇ ಆದ ಶಕವನ್ನು ಪ್ರಾರಂಭಿಸಿ ಅದಕ್ಕೆ 'ಭೂಲೋಕಮಲ್ಲ ವರ್ಷ' ಎಂದು ಹೆಸರಿಟ್ಟನು.[85] ಅವನ ರಾಜ್ಯಭಾರದೊಡನೆ ಅದೂ ಕೊನೆಗೊಂಡಿತು.[86]

೩ನೆಯ ಸೋಮೇಶ್ವರನು ಯುದ್ಧ ವೀರನೆಂದಾಗಲಿ, ಉತ್ತಮ ರಾಜ್ಯಭರಣ ಧುರಂಧರನೆಂದಾಗಲಿ ಪ್ರಸಿದ್ಧಿಗೆ ಬಂದವನಲ್ಲ. ಅವನ ಖ್ಯಾತಿಗೆ ಅವನ ಉದ್ದಾಮ ವಿದ್ವತ್ತೇ ಕಾರಣವಾಗಿತ್ತು. ಕ್ರಿ.ಶ. ೧೧೨೯ರಲ್ಲಿ ಅವನು ರಚಿಸಿದ 'ಮಾನಸೋಲ್ಲಾಸ' ಅಥವಾ 'ಅಭಿಲಾಷಿತಾರ್ಥ ಚಿಂತಾಮಣಿ' ಎಂಬ ಮೇರು ಕೃತಿಯು ಅವನ ಅಪಾರ ವಿದ್ವತ್ತಿಗೂ ನಾನಾ ಶಾಸ್ತ್ರ ಪಾಂಡಿತ್ಯಕ್ಕೂ ದ್ಯೋತಕವಾಗಿದೆ. ರಾಜನೀತಿ, ಜ್ಯೋತಿಷ್ಯ, ಭಾಷಾಶಾಸ್ತ್ರ, ಅಲಂಕಾರ, ಕಾವ್ಯ, ಸಂಗೀತ, ಚಿತ್ರಕಲೆ, ವಾಸ್ತುಶಿಲ್ಪ, ವೈದ್ಯಶಾಸ್ತ್ರ, ಅಶ್ವಶಾಸ್ತ್ರ, ಗಜಶಾಸ್ತ್ರ, ದಾನದತ್ತಿ ವಿಚಾರಗಳು – ಹೀಗೆ ನಾನಾ ವಿಷಯಗಳಿಂದ ತುಂಬಿದ ಈ ಗ್ರಂಥ ಸಮಗ್ರವಾದ ಒಂದು ವಿಶ್ವಕೋಶದಂತಿದೆ. 'ಸರ್ವಜ್ಞ ಭೂಪ', 'ಸರ್ವಜ್ಞ ಚಕ್ರವರ್ತಿ' ಎಂಬ ಬಿರುದುಗಳು ಸಾರ್ಥಕತೆ ಪಡೆದಿವೆ.

ಭೂಲೋಕಮಲ್ಲನಾದ ಸರ್ವಜ್ಞ ಸೋಮೇಶ್ವರನು ಕ್ರಿ.ಶ. ೧೧೩೮-೩೯ರಲ್ಲಿ ಮೃತನಾದನು.[87] ಅವನ ತರುವಾಯ ಅವನ ಮಗ ಇಮ್ಮಡಿ ಜಗದೇಕಮಲ್ಲನು ಪಟ್ಟಕ್ಕೆ ಬಂದನು.

## ಇಮ್ಮಡಿ ಜಗದೇಕಮಲ್ಲ (ಕ್ರಿ.ಶ. ೧೧೩೮-೧೧೫೦)

೩ನೆಯ ಸೋಮೇಶ್ವರನ ತರುವಾಯ ಕ್ರಿ.ಶ.೧೧೩೮ರಲ್ಲಿ ಪಟ್ಟಕ್ಕೆ ಬಂದ ಇಮ್ಮಡಿ ಜಗದೇಕಮಲ್ಲನು 'ಪೆರ್ಮ', ಪೆರ್ಮಾಡಿ', 'ಪೆರ್ಮಾಡಿದೇವ' ಎಂಬ ಬಿರುದುಗಳನ್ನು ಹೊಂದಿದ್ದನು. ಅಣಂದೂರು ಶಾಸನ[88] ಇವನನ್ನು ಪ್ರತಾಪ ಚಕ್ರವರ್ತಿ ಜಗದೇಕಮಲ್ಲವೆಂದು ಕರೆದಿದೆ. ಪಟ್ಟಬಂಧೋತ್ಸವ ಮಾಡಿಸಿಕೊಂಡು ಮಹಾಭೈರವ ಮೈಳಾರದೇವರ ದೇವಾಲಯಕ್ಕೆ ಕಳಸಾರೋಹಣ ಮಾಡಿಸಿ ಅದಕ್ಕೆ ದತ್ತಿಗಳನ್ನು ಬಿಟ್ಟನೆಂದು ಇದರಲ್ಲಿ ಉಲ್ಲೇಖವಿದೆ.

ಜಗದೇಕಮಲ್ಲನ ಆಳ್ವಿಕೆ ಹಲವಾರು ದಂಗೆಗಗಳಿಂದ ಕೂಡಿತ್ತು. ಅವನ ಹಲವು ಸಾಮಂತರು ಸ್ವಾತಂತ್ರ್ಯಾಪೇಕ್ಷಿಗಳಾಗಿ ದಂಗೆ ಎದ್ದರು. ದಂಗೆ ಎದ್ದ ಅಧೀನ ರಾಜರನ್ನು ನೆಚ್ಚಿನ ಬಂಟನಾಗಿದ್ದ ಎರಂಬಾರಗೆಯ ಇಮ್ಮಡಿ ಆಚನ ಮಗನಾದ ಸಿಂದ ಪೆರ್ಮಾಡಿಪೇವ ಕುಲಶೇಖರಾಂಗನನ್ನು ಜಯಸಿ, ತೊರಗಲೆಯ ಇಮ್ಮಡಿ ಚತ್ತನನ್ನು ಬೆನ್ನಟ್ಟಿ ಕೊಂದನು.[89] ಜಗದೇಕಮಲ್ಲನ ಕಾಲದಲ್ಲಿ ಹೊಯ್ಸಳರ ವಿಷ್ಣುವರ್ಧನನೊಡನೆ ಹಲವು ಘರ್ಷಣೆಗಳು ನಡೆದವು. ವಿಷ್ಣುವರ್ಧನನು ಚಾಲುಕ್ಯರ ಅಧೀನದಿಂದ ಸ್ವತಂತ್ರನಾಗಲು ತನ್ನ ಸಾಮ್ರಾಜ್ಯದ ಮೇರೆಗಳನ್ನು ವಿಸ್ತರಿಸಿದನು. ಕ್ರಿ.ಶ. ೧೧೪೦ರಲ್ಲಿ ವಿಷ್ಣುವರ್ಧನನು ಹಾನಗಲ್ಲಿಗೆ ಮುತ್ತಿಗೆ ಹಾಕಿ ಬಂಕಾಪುರದಲ್ಲಿ ನೆಲೆನಿಂತನು.[90]

ಸುಮಾರು ಕ್ರಿ.ಶ. ೧೧೪೩ ರಲ್ಲಿ ಜಗದೇಕಮಲ್ಲನು ಮಾಳವದೇಶದ ಮೇಲೆ ದಂಡೆತ್ತಿ ಹೋಗಿ ಅಲ್ಲಿಯ ಪರಮಾರ ಜಯವರ್ಮನನ್ನು ಸೋಲಿಸಿ, ಬಲ್ಲಾಳನೆಂಬುವನನ್ನು ಪರಮಾರ ಸಿಂಹಾಸನದಲ್ಲಿರಿಸಿದನು. ದಕ್ಷಿಣದಲ್ಲಿ ಇಮ್ಮಡಿ ಚೋಳ ಕುಲೋತ್ತುಂಗನನ್ನು, ಕಳಿಂಗದ

ಚೋಡಗಂಗ ಅನಂತವರ್ಮನನ್ನು ಸೋಲಿಸಿದ. ಸ್ವತಂತ್ರನಾಗಲು ಹವಣಿಸುತ್ತಿದ್ದ ನೊಳಂಬಾಧಿಪತಿಯ ದಂಗೆಯನ್ನು ಮುರಿದುಹಾಕಿದ.[91]

ಹೀಗೆ ಜಗದೇಕಮಲ್ಲನ ಆಳ್ವಿಕೆಯ ಆದಿಭಾಗದಲ್ಲಿ ಹಲಕೆಲವು ಯುದ್ಧಗಳು ನಡೆದರೂ ಕೊನೆಕೊನೆಗೆ ಅವನ ರಾಜ್ಯದಲ್ಲಿ ಶಾಂತಿ ನೆಲೆಸಿತು. ಈತನೂ ಸಹ ತನ್ನದೇ ಆದ ಶಕವನ್ನು ಬಳಕೆಗೆ ತಂದಿದ್ದನು. ಈತನ ಶಾಸನಗಳಲ್ಲಿ 'ಜಗದೇಕಮಲ್ಲವರ್ಷ' ಉಲ್ಲೇಖಗೊಂಡಿರುವುದನ್ನು ಕಾಣಬಹುದಾಗಿದೆ.[92] ಕ್ರಿ.ಶ. ೧೧೫೧ರಲ್ಲಿ ಜಗದೇಕಮಲ್ಲನು ಇಹಲೋಕ ತ್ಯಜಿಸಿದನು. ತದನಂತರ ಅವನ ತಮ್ಮನಾದ ೩ನೆಯ ತೈಲಪನು ಪಟ್ಟಾಧಿಕಾರಿಯಾದನು.

**ಮೂರನೆಯ ತೈಲಪ : (ಕ್ರಿ.ಶ. ೧೧೫೧-೧೧೫೬)**

'ತ್ರೈಲೋಕ್ಯಮಲ್ಲ 'ನೂರ್ಮಡಿ ತೈಲ', 'ಚಾಲುಕ್ಯ ಚಕ್ರವರ್ತಿ ವಿಕ್ರಮಾರ್ಕ' ಎಂಬ ಬಿರುದುಗಳನ್ನು ಹೊಂದಿದ್ದ ಮುಮ್ಮಡಿ ತೈಲಪನು ಕ್ರಿ.ಶ. ೧೧೫೧ ರಲ್ಲಿ ಅಧಿಕಾರರೂಢನಾದನು.[93] ಕ್ರಿ.ಶ. ೧೧೫೩ರಲ್ಲಿ ಚಾಲುಕ್ಯರ ಕುಮಾರಪಾಲನೂ ಇಮ್ಮಡಿ ಚೋಳ ಕುಲೋತ್ತುಂಗನೂ ೩ನೆಯ ತೈಲಪನಿಂದ ಪರಾಜಿತರಾದರು. ಆದರೆ ಇದೇ ಕಾಲಕ್ಕೆ ತೆಲಂಗಾನದ ಕಾಕತೀಯರು ಚಾಲುಕ್ಯ ಚಕ್ರವರ್ತಿಯ ವಿರುದ್ಧವಾಗಿ ಯುದ್ಧ ಸನ್ನದ್ಧರಾಗಿದ್ದರು. ೩ನೆಯ ತೈಲಪನ ಕಾಲದಲ್ಲಿ ಚಾಲುಕ್ಯ ಸಾಮ್ರಾಜ್ಯಕ್ಕೆ ಎಲ್ಲ ಕಡೆಗಳಿಂದಲೂ ವಿಪತ್ತು ಕಾದಿತ್ತು. ಕಲಚೂರಿ ಬಿಜ್ಜಳನು ಈತನ ತಂದೆಯ ಆಳ್ವಿಕೆಯಲ್ಲಿ ಪ್ರಬಲ ಮಂತ್ರಿಯಾಗಿದ್ದು; ಆಗಿನಿಂದಲೇ ತನ್ನ ಅಧಿಕಾರ ಸಂಗ್ರಹಣದಲ್ಲಿ ತೊಡಗಿದ್ದ. ಅನೇಕ ಮಹಾಮಂಡಳೇಶ್ವರರು ತಮ್ಮ ನಿಷ್ಠೆಯನ್ನು ಬಿಜ್ಜಳನಿಗೆ ತೋರಿಸಲು ಹವಣಿಸುತ್ತಿದ್ದರು.[94] ತೈಲಪನು ಕೆಲಕಾಲ ಬಿಜ್ಜಳನೊಂದಿಗೆ ಸೌಹಾರ್ದದಿಂದಿದ್ದು; ಕ್ರಿ.ಶ. ೧೧೫೫ರವರೆಗೆ ಕಲ್ಯಾಣದಿಂದಲೇ ರಾಜ್ಯಭಾರ ನಡೆಸಿದ.[95]

ಕಾಕತೀಯ ರಾಜಮನೆತನದ ಪ್ರೋಲರಾಜನು ಆಗಲೇ ಯುದ್ಧಕ್ಕೆ ಸನ್ನದ್ಧನಾಗಿದ್ದ. ೩ನೆಯ ತೈಲಪನೊಂದಿಗೆ ಯುದ್ಧ ಮಾಡಿ ಆತನನ್ನು ಸೆರೆ ಹಿಡಿದ. ಚಾಲುಕ್ಯ ಸಾರ್ವಭೌಮತ್ವದ ಮೇಲಿನ ನಿಷ್ಠೆಯಿಂದ ಆತನನ್ನು ಬಿಡುಗಡೆ ಮಾಡಿದನೆಂದು ಕಾಕತೀಯ ಮತ್ತು ಬಳ್ಳಿಗಾವೆಯ ಶಾಸನಗಳು ಉಲ್ಲೇಖಿಸುತ್ತವೆ.[96] ಬಹುಶಃ ಈ ಘಟನೆಯೇ ಕಲಚೂರಿ ಬಿಜ್ಜಳನಿಗೆ ಸಾಮ್ರಾಜ್ಯದ ಇನ್ನಷ್ಟು ಅಧಿಕಾರಿಗಳನ್ನು ತನ್ನ ಕಡೆಗೆ ಒಲಿಸಿಕೊಳ್ಳಲು ಸಹಾಯವಾಯಿತು. ಬಿಜ್ಜಳನ ಹಿಡಿತದಿಂದ ತಪ್ಪಿಸಿಕೊಳ್ಳಲೆಂದು ತೈಲಪನು ಕ್ರಿ.ಶ ೧೧೫೭ರಲ್ಲಿ ಕಲ್ಯಾಣವನ್ನು ಬಿಟ್ಟು ಇಂದಿನ ಧಾರವಾಡ ಜಿಲ್ಲೆಯ ಅಣ್ಣಿಗೇರಿಗೆ ಓಡಿಹೋದನು. ಬಿಜ್ಜಳನು ಆತನನ್ನು ಅಲ್ಲಿಯೂ ಬೆನ್ನಟ್ಟಿದಾಗ, ಇನ್ನಷ್ಟು ದಕ್ಷಿಣಕ್ಕೆ ಪಲಾಯನ ಮಾಡಿ ಬನವಾಸಿಯನ್ನು ಸೇರಿದ.[97] ಇದೇ ಸಂದರ್ಭದಲ್ಲಿ ಬಿಜ್ಜಳನು ಮಹಾರಾಜಾಧಿರಾಜ 'ಭುಜಬಳಚಕ್ರವರ್ತಿ' ಎಂದು ಘೋಷಿಸಿಕೊಂಡನು.[98] ಕ್ರಿ.ಶ. ೧೧೬೩ರ ವರೆಗೆ ತೈಲಪನು ಕೆಲವು ನಂಬಿಕಸ್ಥ ಅಧಿಕಾರಿಗಳೊಂದಿಗೆ ಅಧಿಕಾರ ನಡೆಸಿದ. ಕ್ರಿ.ಶ. ೧೧೬೩ರ ಜನೇವರಿ ೧೦ನೆಯ ದಿನಾಂಕದ ಅನ್ನಿಕೊಂಡದ ಶಾಸನವು ಮುಮ್ಮಡಿ ತೈಲಪನ ಮರಣವನ್ನು ಉಲ್ಲೇಖಿಸುತ್ತದೆ. ಇದಕ್ಕಿಂತಲೂ ಮೊದಲೇ ತೈಲನು ಮರಣಿಸಿರಬಹುದು.[99]

೩ನೆಯ ತೈಲಪನ ಮರಣಾನಂತರದಲ್ಲಿ ಕಲಚೂರಿ ಬಿಜ್ಜಳನು ಸ್ವತಂತ್ರನಾಗಿ, ಸಾರ್ವಭೌಮತ್ವದ ಬಿರುದುಗಳೊಂದಿಗೆ ಚಾಲುಕ್ಯ ಸಾಮ್ರಾಜ್ಯದ ಮೇಲೆ ತನ್ನ ಹಕ್ಕು ಸ್ಥಾಪಿಸಿದ. ಕ್ರಿ.ಶ. ೧೧೮೩ರವರೆಗೆ ಬಿಜ್ಜಳ ಮತ್ತು ಅವನ ಉತ್ತರಾಧಿಕಾರಿಗಳು ಕರ್ನಾಟಕ ಸಾಮ್ರಾಜ್ಯವನ್ನು ನಿರಾತಂಕವಾಗಿ ಆಳಿದರು. ಕಲ್ಯಾಣ ಚಾಲುಕ್ಯರ ಕೆಲವು ನಿಷ್ಠಾವಂತ ಮಂಡಳೇಶ್ವರರಿಗೆ ಬಿಜ್ಜಳನ ಆಕ್ರಮಣ ಸಹ್ಯವಾಗಿರಲಿಲ್ಲ. ಕ್ರಿ.ಶ. ೧೧೬೩ರಲ್ಲಿ ಸಿಂಧದ ಮಹಾಮಂಡಲೇಶ್ವರ ಇಮ್ಮಡಿ ಚೌಂಡನು ಮುಮ್ಮಡಿ ತೈಲನ ಸಾಮಂತಾಧಿಕಾರಿಯೆಂದೇ ಹೇಳಿಕೊಂಡಿದ್ದಾನೆ.[100] ಹಾಗೆಯೇ, ಪಾಂಡ್ಯ ಮಹಾಮಂಡಲೇಶ್ವರ ವಿಜಯ ಪಾಂಡ್ಯದೇವ, ಸಿಂಧವಂಶದ ಬಿಜ್ಜಳದೇವ ಮತ್ತು ವಿಕ್ರಮದೇವ ಮೊದಲಾದವರು ಚಾಲುಕ್ಯ ಮನೆತನಕ್ಕೆ ತಮ್ಮ ನಿಷ್ಠೆಯನ್ನು ತೋರುತ್ತಿದ್ದರು.[101] ಕಲಚೂರಿಗಳ ಆಳ್ವಿಕೆಯ ಅವಧಿಯಲ್ಲಿಯೇ ಚಾಲುಕ್ಯರ ಆಳ್ವಿಕೆಯ ಪುನರುಜ್ಜೀವನಗೊಳಿಸಲು ಒಳಗೊಳಗೆ ಹೋರಾಟ ನಡೆಯುತ್ತಲೇ ಇತ್ತು. ಇದೆಲ್ಲದರ ಪರಿಣಾಮ ಕ್ರಿ.ಶ. ೧೧೮೩ರಲ್ಲಿ ಮುಮ್ಮಡಿ ತೈಲಪನ ಮಗ ನಾಲ್ವಡಿ ಸೋಮೇಶ್ವರನು ಕಲಚೂರಿಗಳನ್ನು ಸೋಲಿಸಿ ಪುನಃ ಚಾಲುಕ್ಯರ ಅಧಿಕಾರವನ್ನು ಸ್ಥಾಪಿಸಿದನು.

## ನಾಲ್ಕನೆಯ ಸೋಮೇಶ್ವರ : (ಕ್ರಿ.ಶ ೧೧೮೧-೧೧೮೯)

೩ನೆಯ ತೈಲಪನ ಮಗನಾದ ನಾಲ್ವಡಿ ಸೋಮೇಶ್ವರನು 'ವೀರಸೋಮೇಶ್ವರ'ನೆಂಬ ಇನ್ನೊಂದು ಹೆಸರನ್ನು ಹೊಂದಿದ್ದನು. 'ತ್ರಿಭುವನಮಲ್ಲ', 'ವೀರನಾರಾಯಣ', 'ಕಳಚೂರ್ಯನು ಕುಲನಾಶಕ' ಎಂಬ ಪ್ರಶಸ್ತಿಗಳನ್ನು ಹೊಂದಿದ್ದ. ಕಳಚೂರ್ಯರ ಅಭ್ಯುದಯ ಕಾಲದಲ್ಲಿ ೪ನೇ ಸೋಮೇಶ್ವರನು ಧಾರವಾಡ ಜಿಲ್ಲೆಯ ಅಣ್ಣಿಗೇರಿಯಲ್ಲಿ ನೆಲೆನಿಂತಿದ್ದನೆಂದು ಕೆಲವು ವಿದ್ವಾಂಸರ ಊಹೆ.[102] ಕಲಚೂರ್ಯರಿಂದ ಕಸಿಯಲ್ಪಟ್ಟ ಕಲ್ಯಾಣ ಚಾಲುಕ್ಯ ಸಾಮ್ರಾಜ್ಯವನ್ನು ಪುನಃ ಪಡೆದ ಕೀರ್ತಿ ಸೋಮೇಶ್ವರನಿಗೆ ಸಲ್ಲುತ್ತದೆ. ಬಿಜ್ಜಳನ ಅವಧಿಯಲ್ಲಿ ನಡೆದ ಶರಣರ ಕ್ರಾಂತಿಯ ಲಾಭ ಪಡೆದು ಸೋಮೇಶ್ವರನು ಪ್ರಬಲನಾದನು. ಅನೇಕ ಮಾಂಡಲಿಕರ ಬೆಂಬಲವನ್ನು ಪಡೆದು ಕಳಚೂರ್ಯ ಸಂಕಮನನ್ನು ಸೋಲಿಸಿ ಕ್ರಿ.ಶ ೧೧೮೩ರಲ್ಲಿ ಸಾಮ್ರಾಜ್ಯವನ್ನು ಪಡೆದುಕೊಂಡ. ಈ ಕಾರ್ಯದಲ್ಲಿ ೪ನೆಯ ಸೋಮೇಶ್ವರನ ಯಶಸ್ಸಿಗೆ ಕಾರಣನಾದವನು ಕಳಚೂರ್ಯರ ದೊರೆ ಸಂಕಮನ ದಂಡನಾಯಕನೂ ಮಂತ್ರಿಯೂ ಆಗಿದ್ದ ಕಾವಣನ ಮಗ ಬ್ರಹ್ಮ. ಈತನನ್ನು ಶಾಸನಗಳಲ್ಲಿ ಬಮ್ಮ, ಬಮ್ಮಣ, ಬಮ್ಮಯ್ಯ, ಬಮ್ಮರಸ ಮತ್ತು ಬಮ್ಮಿದೇವ ಮೊದಲಾದ ಹೆಸರುಗಳಿಂದ ಕರೆಯಲಾಗಿದೆ.[103] ಕ್ರಿ.ಶ. ೧೧೮೪-೮೫ರ ಅಣ್ಣಿಗೇರಿ ಶಾಸನವು ಈತನನ್ನು 'ಕಳಚೂರ್ಯಕುಲಕಲಾಗ್ನಿ' ಎಂದು ಬಣ್ಣಿಸಿದೆ.[104] ಹಾಗೆಯೇ ಅಣ್ಣಿಗೇರಿಯ ಕ್ರಿ.ಶ. ೧೧೮೪ ಇನ್ನೊಂದು ಶಾಸನವು ಈತನನ್ನು 'ಚಾಲುಕ್ಯ ರಾಜ್ಯ ಪ್ರತಿಷ್ಠಾಪಕ'ನೆಂದೂ ಕರೆದಿದೆ.

ನಾಲ್ವಡಿ ಸೋಮೇಶ್ವರನು ಕ್ರಿ.ಶ. ೧೧೮೯ರ ವರೆಗೂ ರಾಜ್ಯಭಾರ ಮಾಡಿದನು. ಆ ಕಾಲಕ್ಕೆ ದೇವಗಿರಿಯ ಯಾದವರಾಜ ಭಿಲ್ಲಮನು ಚಾಲುಕ್ಯ ರಾಜ್ಯದ ಉತ್ತರ ಮತ್ತು ಪೂರ್ವ

ಭಾಗಗಳನ್ನು ಕಿತ್ತುಕೊಂಡನು. ಹೊಯ್ಸಳರ ರಾಜನಾದ ಇಮ್ಮಡಿ ವೀರಬಲ್ಲಾಳನು ಸೋಮೇಶ್ವರನ ದಂಡನಾಯಕನಾಗಿದ್ದ ಬಮ್ಮರಸನನ್ನು ಸೋಲಿಸಿ ಚಾಲುಕ್ಯ ರಾಜ್ಯದ ದಕ್ಷಿಣ ಪ್ರಾಂತಗಳನ್ನು ವಶಪಡಿಸಿಕೊಂಡನು.[105] ಹೀಗೆ ಉತ್ತರ-ದಕ್ಷಿಣ ಭಾಗಗಳಲ್ಲಿ ಚಾಲುಕ್ಯ ಸಾಮ್ರಾಜ್ಯವು ವೈರಿಗಳ ಪಾಲಾಯಿತು. ಇದರಿಂದ ಬಂದು ಭೀತನಾದ ಸೋಮೇಶ್ವರನು ಗೋವೆಯ ಕದಂಬ ರಾಜನಾದ ಷಿನೆಯ ಜಯಕೇಶಿಯ ಮೊರೆಹೊಕ್ಕು, ಕ್ರಿ.ಶ. ಸುಮಾರು ೧೧೯೮ರ ವರೆಗೆ ಅಲ್ಲಿ ಆಳಿ ಅಸ್ತಂಗತನಾದ. ಅವನೊಂದಿಗೆ ಕ್ರಿ.ಶ. ೯೭೩ರಿಂದ ಸುಮಾರು ೨೨೫ ವರ್ಷಗಳ ಕಾಲ ಕರ್ನಾಟಕವನ್ನು ಏಕಚಕ್ರಾಧಿಕಪತ್ಯದಿಂದ ಆಳಿದ ಕಲ್ಯಾಣ ಚಾಲುಕ್ಯರ ಸಾಮ್ರಾಜ್ಯ ನಶಿಸಿಹೋಯಿತು.

## ೩.೩ ರಾಣಿಯರು

ಭಾರತದಲ್ಲಿ ಮಹಿಳೆಯರಿಗೆ ವಿಶೇಷ ಸ್ಥಾನವಿದೆ. ದೇಶದ ಔದಾರ್ಯ, ಪರಾಕ್ರಮ, ತ್ಯಾಗ, ಧರ್ಮ, ನಿಷ್ಠೆ, ಪಾತಿವ್ರತ್ಯ, ಪರದಾರ ಸೋದರತ್ವಕ್ಕೆ ಅನೇಕ ಭಾರತೀಯ ಮಹಿಳೆಯರು ಪ್ರಸಿದ್ಧರಾಗಿದ್ದಾರೆ. ಅಂತೆಯೇ ಸಾಮಾಜಿಕ, ಧಾರ್ಮಿಕ, ರಾಜಕೀಯ ಜೀವನದಲ್ಲಿಯೂ ಕಲ್ಯಾಣ ಚಾಲುಕ್ಯ ರಾಣಿಯರು ಪ್ರಮುಖ ಪಾತ್ರ ನಿರ್ವಹಿಸಿದ್ದಾರೆ. ಅನೇಕ ರಾಣಿಯರು ದಾನ-ದತ್ತಿ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದು ತನ್ಮೂಲಕ ಹಲವು ಮಹತ್ವದ ಕಾರ್ಯಗಳಿಗೆ ಕಾರಣರಾಗಿದ್ದಾರೆ. ಪ್ರಾಚೀನ ಕಾಲದಲ್ಲಿ 'ಬಹುಪತ್ನಿತ್ವ ಪದ್ಧತಿ' ಜಾರಿಯಲ್ಲಿತ್ತು. ಪ್ರತಿಷ್ಠೆ, ಸಂತಾನ, ವೈರಿಗಳೊಂದಿಗೆ ಸೌಹಾರ್ದತೆ ಬೆಳೆಸುವ ವಿವಿಧ ಕಾರಣಗಳಿಂದ ಈ ಪದ್ಧತಿ ರೂಢಿಯಲ್ಲಿತ್ತು. ಚಕ್ರವರ್ತಿ ಮತ್ತು ಮಾಂಡಳೀಕರಿಗೆ ಒಬ್ಬರಿಗಿಂತ ಹೆಚ್ಚು ಜನ ರಾಣಿಯರಿರುತ್ತಿದ್ದರು. ಶಾಸನೋಲ್ಲೇಖಗಳ ಆಧಾರದ ಮೇಲೆ ಈ ರಾಣಿಯರನ್ನು ಮೂರು ಗುಂಪುಗಳಲ್ಲಿ ವಿಂಗಡಿಸಬಹುದು.[106]

೧) ಪಿರಿಯರಸಿ

೨) ಪಿರಿಯರಸಿ ಪಟ್ಟಮಹಾದೇವಿ

೩) ರಾಣಿ

**ಪಿರಿಯರಸಿ :** 'ಪಿರಿಯರಸಿ' ಎಂದರೆ ಹಿರಿಯ ರಾಣಿ ಎಂದರ್ಥ. ಇವಳು ರಾಜನ ಮೊದಲ ಹೆಂಡತಿಯಾಗಿದ್ದು; ಇವಳಿಗೆ ಮಕ್ಕಳಾದರೆ ಇವಳೇ ಪಿರಿಯರಸಿ ಪಟ್ಟಮಹಾದೇವಿ ಎನಿಸುತ್ತಾಳೆ. ಒಂದು ವೇಳೆ ಎರಡನೆಯವಳಿಗೆ ಮಕ್ಕಳಾದರೆ ಅವಳು ಪಿರಿಯರಸಿ ಪಟ್ಟ ಮಹಾದೇವಿ ಎನಿಸುತ್ತಿದ್ದಳು. ಪಿರಿಯರಸಿ ಪಟ್ಟ ಮಹಾದೇವಿಗಿಂತ ಹಿರಿಯ ರಾಣಿಯರಿದ್ದು ಅವರಿಗೆ ಮಕ್ಕಳಾಗದೇ ಇದ್ದಿದ್ದರೆ ಅವರೆಲ್ಲ ಪಿರಿಯರಸಿರಾಗೇ ಇರುತ್ತಿದ್ದರು.

**ಪಟ್ಟಮಹಾದೇವಿ :** 'ಪಟ್ಟಮಹಾದೇವಿ' ಅಥವಾ 'ಪಟ್ಟದರಾಣಿ' ಎಂಬುದು 'ಚಕ್ರವರ್ತಿಯಂತೆ ಒಂದು ಪದವಿಯಾಗಿತ್ತು.[107] ಉಳಿದ ಎಲ್ಲ ರಾಣಿಯರಿಗಿಂತ

ಪಟ್ಟಮಹಾದೇವಿಯ ಸ್ಥಾನ ಹಿರಿದಾಗಿತ್ತು. ಎಲ್ಲ ಧಾರ್ಮಿಕ, ಸಾಮಾಜಿಕ ಕಾರ್ಯಗಳಲ್ಲಿ ಈಕೆ ಪತಿಯೊಂದಿಗೆ ಭಾಗವಹಿಸುತ್ತಿದ್ದಳು. ಈ ಹಕ್ಕು ಇತರ ರಾಣಿಯರಿಗೆ ಇರುತ್ತಿರಲಿಲ್ಲ. ಮೊದಲನೆಯ ಪಿರಿಯರಸಿಗೆ ಸಂತಾನವಿರದಿದ್ದರೆ ಎರಡನೆಯ ಪಿರಿಯರಸಿಗೆ ಪಟ್ಟಮಹಾದೇವಿಪಟ್ಟ ಹೋಗುತ್ತಿತ್ತು. ಇವಳು ಸಂತಾನ ಹೀನಳಾಗಿದ್ದರೆ ಮುಂದೆ ಇರುವ ಇತರ ಸಂತಾನಪ್ರಾಪ್ತ ರಾಣಿಗೆ ಪಟ್ಟದ ರಾಣಿಯ ಪಟ್ಟ ಲಭಿಸುತ್ತಿತ್ತು. ಹೀಗಾಗಿ ಒಬ್ಬ ಅರಸನಿಗೆ ಅನೇಕ ರಾಣಿಯರಿದ್ದಾಗ್ಯೂ ಪಿರಿಯರಸಿ ಪಟ್ಟಮಹಾದೇವಿ ಮಾತ್ರ ಒಬ್ಬಳೇ ಇರುತ್ತಿದ್ದಳು.

**ರಾಣಿ** : ಪಿರಿಯರಸಿಯರಲ್ಲದ ಹಾಗೂ ಪಟ್ಟಮಹಾದೇವಿಯರಲ್ಲದ ರಾಜನ ಇತರ ಪತ್ನಿಯರನ್ನು ರಾಣಿಯರು ಎನ್ನುತ್ತಿದ್ದರು. ಇವರ ಸ್ಥಾನ ಮೇಲಿನವರಿಗಿಂತ ಕಡಿಮೆಯದಾಗಿತ್ತು.

ಕಲ್ಯಾಣ ಚಾಲುಕ್ಯ ರಾಣಿಯರು ಹಲವಾರು ಜನರಿದ್ದಾರೆ. ಕೇವಲ ಆರನೆಯ ವಿಕ್ರಮಾದಿತ್ಯನ ರಾಣಿಯರ ಸಂಖ್ಯೆಯೇ ಹತ್ತೊಂಬತ್ತು.[108] ಇನ್ನುಳಿದ ಚಾಲುಕ್ಯ ಅರಸರಿಗೆ ಇಷ್ಟು ರಾಣಿಯರಿರದಿದ್ದರೂ ಅವರ ಸಂಖ್ಯೆ ಕಡಿಮೆಯೇನಲ್ಲ. ಚಾಲುಕ್ಯಅರಸರು ತಮ್ಮ ರಾಣಿಯರಿಗೆ ಅಗ್ರಹಾರಗಳನ್ನು ಇಲ್ಲವೇ ಬಿಡಿಯಾದ ಭತ್ತ ಗ್ರಾಮಗಳನ್ನು ಆಳಲು ಬಿಡುತ್ತಿದ್ದರು. ಹೀಗಾಗಿ ಅವರು ತಮ್ಮ ಅಧಿಕಾರ ವ್ಯಾಪ್ತಿಯಲ್ಲಿ ತಾವು ಹೊಂದಿದ್ದ ಅಗ್ರಹಾರಗಳಿಗೆ ಹಲವು ವಿಧಗಳಲ್ಲಿ ದಾನ ನೀಡಿದ್ದಾರೆ.

ಇಮ್ಮಡಿ ತೈಲಪನ ರಾಣಿ ಜಕ್ಕಲದೇವಿ. ಈಕೆಯನ್ನು ಜಾಕವ್ವೆ, ಜಕ್ಕಲಮಹಾದೇವಿ ಎಂದು ಶಾಸನವೊಂದರಲ್ಲಿ ಉಲ್ಲೇಖಿಸಿದೆ.[109] ಈಕೆ ಜಿನಧರ್ಮಕ್ಕೆ ಸೇವೆಸಲ್ಲಿಸಿದಳೆಂದು ತಿಳಿದುಬರುತ್ತದೆ. ಇರಿವಬೆಡಂಗ ಸತ್ಯಾಶ್ರಯನ ರಾಣಿ ಅಯ್ಯಬ್ಬದೇವಿ ಎಂದು ಕುಕನೂರ ಶಾಸನ ತಿಳಿಸುತ್ತದೆ.[110] ದಶವರ್ಮನಿಗೆ ಭಾಗ್ಯವತಿ ಇಲ್ಲವೇ ಭಾಗಲಾದೇವಿ ರಾಣಿಯಾಗಿದ್ದಳು.[111] ಈಕೆಗೆ ೫ನೆಯ ವಿಕ್ರಮಾದಿತ್ಯ, ಇಮ್ಮಡಿ ಅಯ್ಯಣ, ಅಕ್ಕಾದೇವಿ ಮತ್ತು ಇಮ್ಮಡಿ ಜಯಸಿಂಹ ಎಂಬ ನಾಲ್ವರು ಮಕ್ಕಳಿದ್ದರು. ಇಮ್ಮಡಿ ಜಯಸಿಂಹನ ರಾಣಿ ಸುಗ್ಗಲಾದೇವಿ. ಈಕೆ ವೀರಶೈವ ಶರಣ ದೇವರದಾಸಿಮಯ್ಯನ ಭಕ್ತೆಯಾಗಿದ್ದು, ಆತನ ಪ್ರಭಾವದಿಂದ ಇಮ್ಮಡಿ ಜಯಸಿಂಹನನ್ನು ಲಿಂಗಾಯತ ಮತಕ್ಕೆ ಮತಾಂತರಗೊಳಿಸಿದಳೆಂದು 'ದೇವರ ದಾಸಿಮಯ್ಯ'ಪುರಾಣದಲ್ಲಿ ಹೇಳಲಾಗಿದೆ.[112] ಹಾಗೆಯೇ ಲಕ್ಷ್ಮೀದೇವಿ, ದೇಮಲದೇವಿ ಮತ್ತು ಸೋಮಲದೇವಿಯರು ಜಯಸಿಂಹನ ರಾಣಿಯರಾಗಿದ್ದರು.[113]

ತ್ರೈಲೋಕ್ಯಮಲ್ಲ ಒಂದನೆಯ ಸೋಮೇಶ್ವರನ ಹಲವು ರಾಣಿಯರು ದಾನ ಕಾರ್ಯಗಳಲ್ಲಿ, ಆಡಳಿತ ಕಾರ್ಯಗಳಲ್ಲಿ ನಿರತರಾಗಿದ್ದರು. ಒಂದನೆಯ ಸೋಮೇಶ್ವರನಿಗೆ ಬಾಚಲಾದೇವಿ, ಚಂದಲಕಬ್ಬೆ ಅಥವಾ ಚಂದ್ರಿಕಾದೇವಿ, ಮೈಳಲದೇವಿ, ಕೇತಲದೇವಿ, ಲಚ್ಚಲದೇವಿ, ಲೀಲಾದೇವಿ, ಚಾಮಲದೇವಿ ಮತ್ತು ಹೊಯ್ಸಳದೇವಿಯರೆಂಬ ಎಂಟು ಜನ ರಾಣಿಯರ ಉಲ್ಲೇಖ ಮತ್ತು ಅವರು ನೀಡಿದ ದಾನ-ದತ್ತಿಗಳ ವಿವರಗಳು ಶಾಸನಗಳಿಂದ ತಿಳಿದು ಬರುತ್ತದೆ.[114]

ಆರನೆಯ ವಿಕ್ರಮಾದಿತ್ಯನಿಗೆ ೧೯ ರಾಣಿಯರು ಇದ್ದರು. ವಿಕ್ರಮಾದಿತ್ಯನ ವ್ಯಕ್ತಿತ್ವ ಹಿರಿದಾಗಲು ಇವರಲ್ಲಿ ಕೆಲವರಾದರೂ ಕಾರಣೀಭೂತರಾಗಿದ್ದಾರೆ. ಮತ್ತೇ ಕೆಲವರು ವಿಕ್ರಮಾದಿತ್ಯನನ್ನು ಮದುವೆಯಾಗಿ ಎರಡು ರಾಜ್ಯಗಳ ನಡುವೆ ಶಾಂತಿ ನೆಲೆಸಲು ಸಹಾಯಕರಾಗಿದ್ದಾರೆ. ಧಾರ್ಮಿಕ ಮನೋಭಾವದ ಇವರು ಚಾಲುಕ್ಯ ಸಾಮ್ರಾಜ್ಯದಲ್ಲಿ ಧಾರ್ಮಿಕ ಚಟುವಟಿಕೆಗಳು ನಿರಾಂತಕವಾಗಿ ನಡೆಯಲು ಕಾರಣರಾಗಿದ್ದಾರೆ. ವಿಕ್ರಮಾದಿತ್ಯನ ರಾಣಿಯರನ್ನು ಈ ರೀತಿ ಪಟ್ಟಿ ಮಾಡಬಹುದು. ೧) ಕದಂಬ ೧ನೆಯ ಜಯಕೇಶಿಯ ಮಗಳು (ಹೆಸರು ತಿಳಿದು ಬಂದಿಲ್ಲ) ೨) ಚೋಳ ರಾಜಕುಮಾರಿ ೩) ಸಾವಳದೇವಿ ೪) ಪದ್ಮಲದೇವಿ ೫) ಕೇತಲದೇವಿ ೬) ಲಕ್ಷ್ಮಾದೇವಿ ೭) ಚಂದಲದೇವಿ ೮) ಅಂಗಬ್ಬರಸಿ ೯) ಸಿರಿಯಕೇತಲದೇವಿ ೧೦) ಇಂಗುಳಿಗೆಯ ಜಾಕಲದೇವಿ ೧೧) ಮೈಳಲಮಹಾದೇವಿ ೧೨) ಶ್ರೀಯಾದೇವಿ ೧೩) ಮನ್ನಾದೇವಿ ೧೪) ಮಲೆಯಮತಿದೇವಿ ೧೫) ಮಲ್ಲಣಿದೇವಿ ೧೬) ಸುಗ್ಗಲದೇವಿ ೧೭) ಅಬ್ಬಲದೇವಿ ೧೮) ಭಾಗಲಮಹಾದೇವಿ ೧೯) ಹಿರೇಲಿಂಗದ ಹಳ್ಳಿ ಜಾಕಲದೇವಿ.[115]

೩ನೆಯ ಸೋಮೇಶ್ವರನ ಪಿರಿಯರಸಿ ಪಟ್ಟಮಹಾದೇವಿ ರೇಚಲದೇವಿ ಎಂದು ಕರಾಡಖೇಡ ಶಾಸನ ತಿಳಿಸುತ್ತದೆ.[116] ಬರ್ಮ್ಮಲದೇವಿ[117] ಸೋಮೇಶ್ವರನ ಇನ್ನೊಬ್ಬ ರಾಣಿಯಾಗಿದ್ದಳು.

ದೇವಸ್ಥಾನ, ಮಠಗಳ ನಿರ್ಮಾಣ, ದಾನ-ದತ್ತಿಗಳ ಮೂಲಕ ಜನಸಾಮಾನ್ಯರು ಶೈವಧರ್ಮವನ್ನು ಅನೂಚಾನವಾಗಿ ಮುಂದುವರೆಸಿಕೊಂಡು ಬಂದಂತೆ ರಾಣಿವರ್ಗದವರ ಸಹಾಯ, ಸಹಕಾರಗಳು ಅದಕ್ಕೆ ಮೀಸಲಾಗಿದ್ದವು. ಅರಸರು ಆಡಳಿತದಲ್ಲಿ ನಿರತರಾಗಿದ್ದರೆ ರಾಣಿಯರು ಸಾಮಾಜಿಕ ಕಾರ್ಯಗಳಲ್ಲಿ ನಿರತರಾಗಿರುತ್ತಿದ್ದರು. ರಾಜನ ಕುಟುಂಬ ವರ್ಗದವರಲ್ಲಿ ಹೆಚ್ಚಿನ ಸಂಖ್ಯೆಯ ದಾನ-ದತ್ತಿಗಳನ್ನು ನೀಡಿದವರೇ ರಾಣಿಯರು.

ಹೀಗೆ ಕಲ್ಯಾಣ ಚಾಲುಕ್ಯ ರಾಣಿಯರು ಹಲವಾರು ಶಾಸನಗಳಲ್ಲಿ ಉಲ್ಲೇಖಿತರಾಗಿದ್ದಾರೆ. ದೇವಸ್ಥಾನ, ಮಠಗಳ ನಿರ್ಮಾಣ, ದಾನ-ದತ್ತಿಗಳ ಮೂಲಕ ಜನಸಾಮಾನ್ಯರ ಜೊತೆಗೆ ಬೆರೆತು ಅವರಿಗೆ ಸಹಾಯ ಸಹಕಾರಗಳನ್ನು ನೀಡುತ್ತ ಮಾನವೀಯ ಮೌಲ್ಯಗಳನ್ನು ಬಿತ್ತರಿಸುತ್ತ ಬಂದಿದ್ದಾರೆ. ಅರಸರು ಆಡಳಿತದಲ್ಲಿ ನಿರತರಾಗಿದ್ದರೆ; ರಾಣಿಯರು ಸಾಮಾಜಿಕ-ಧಾರ್ಮಿಕ ಕಾರ್ಯಗಳಲ್ಲಿ ಸಕ್ರಿಯವಾಗಿ ತೊಡಗಿದ್ದರು.

## ೩.೪ ಪ್ರಭುಗಳು ಮತ್ತು ಅಧಿಕಾರಿಗಳು

ಕಲ್ಯಾಣ ಚಾಲುಕ್ಯರ ವಿಸ್ತಾರವಾದ ಸಾಮ್ರಾಜ್ಯದಲ್ಲಿ ನಾಲ್ಕು ವಿಧದ ಪ್ರಭುಗಳಿದ್ದರು. ಇವರೆಲ್ಲ ಸಾಮ್ರಾಜ್ಯಕ್ಕೆ ಅಧಿಪತಿಯಾದ ಚಕ್ರವರ್ತಿಯ ಪಾದಪದ್ಮೋಪಜೀವಿಗಳಾಗಿದ್ದರು. ತಮ್ಮ ಆಳ್ವಿಕೆಗೊಳಪಟ್ಟ ಭೂಪ್ರದೇಶವನ್ನು ಆಳಲು ಸ್ವತಂತ್ರರಾಗಿದ್ದರೂ ತಮ್ಮ ತಮ್ಮ ಮೇಲಿನ ಪ್ರಭುಗಳಿಗೆ ಅಧೀನರಾಗಿಯೂ ವಿಧೇಯರಾಗಿಯೂ ಇರುತ್ತಿದ್ದರು. ಕಲ್ಯಾಣ ಚಾಲುಕ್ಯರ

ಕಾಲದಲ್ಲಿದ್ದ ಪ್ರಭುವರ್ಗವನ್ನು ಡಾ.ಜೆ.ಎಂ.ನಾಗಯ್ಯ ಅವರು 'ಆರನೆಯವಿಕ್ರಮಾದಿತ್ಯನ ಶಾಸನಗಳು : ಒಂದುಅಧ್ಯಯನ' ಕೃತಿಯಲ್ಲಿ ವಿವರವಾಗಿ ವಿಶ್ಲೇಷಿಸಿದ್ದಾರೆ.[118] ಇಲ್ಲಿ ದಾನ-ದತ್ತಿಗಳ ವಿಷಯಕ್ಕೆ ಸಂಬಂಧಿಸಿದಂತೆ ಚಾಲುಕ್ಯ ಸಾಮ್ರಾಜ್ಯದಲ್ಲಿದ್ದ ಪ್ರಭುಗಳ ಪಾತ್ರ ಹಿರಿದು. ಚಕ್ರವರ್ತಿ ಮತ್ತು ಅವನ ಕುಟುಂಬ ವರ್ಗದವರಿಗಿಂತಲೂ ಹೆಚ್ಚಿನ ಸಂಖ್ಯೆಯ ದಾನದತ್ತಿಗಳು ಇವರಿಂದ ನೀಡಲ್ಪಟ್ಟಿವೆ. ಪ್ರಾಂತಾಧಿಕಾರಿಗಳಾಗಿದ್ದ ಇವರು ಸಾಕಷ್ಟು ಅಧಿಕಾರಗಳನ್ನು ಹೊಂದಿದ್ದರು. ಅವರು ತಮ್ಮದೇ ಆದ ಮಂತ್ರಿಮಂಡಲ, ಸೈನ್ಯ, ಅಧಿಕಾರ ವರ್ಗಗಳನ್ನು ಹೊಂದಿದ್ದರು. ಪ್ರಭುಗಳಲ್ಲಿ ನಾಲ್ಕು ವಿಧಗಳಿದ್ದವು. ಅವು ರೀತಿ ಇವೆ.

೧. ಮಹಾಮಂಡಳೇಶ್ವರರು - ವಿಭಾಗಕ್ಕೆ / ಪ್ರಾಂತಕ್ಕೆ ಒಡೆಯರಾಗಿದ್ದರು.

೨. ಮಹಾಸಾಮಂತರು - ಇವರನ್ನು 'ಮನ್ನೆಯ' ಎಂತಲೂ ಕರೆಯಲಾಗಿದೆ. ನಾಡುಗಳ ಒಡೆಯರಾಗಿದ್ದು, ಚಕ್ರವರ್ತಿ ಮತ್ತು ಮಹಾಮಂಡಳೇಶ್ವರರಿಗೆ ಅಧೀನರಾಗಿದ್ದರು.

೩. ಪ್ರಭುಗಾವುಂಡರು - ಪ್ರತಿಯೊಂದು ಗ್ರಾಮಕ್ಕೆ ಒಬ್ಬ ಅಥವಾ ಹೆಚ್ಚು ಗಾವುಂಡರಿರುತ್ತಿದ್ದರು. ಅವರ ಮೇಲೆ ಪ್ರಭುಗಾವುಂಡರು ಇರುತ್ತಿದ್ದರು. ಒಂದಕ್ಕಿಂತ ಹೆಚ್ಚು ಗ್ರಾಮಗಳಿಗೆ ಇವರು ಒಡೆಯರಾಗಿರುತ್ತಿದ್ದರು. ಮಹಾಸಾಮಂತರಿಗೆ ಇವರು ಅಧೀನರಾಗಿರುತ್ತಿದ್ದರು.

೪. ಗಾವುಂಡರು – ಗ್ರಾಮದ ಆಡಳಿತವನ್ನು ನೋಡಿಕೊಳ್ಳುವವನು ಗಾವುಂಡ ಇವರೇ. ಇಂದು ಗ್ರಾಮದ ಗೌಡರೆಂದು ಕರೆಯಿಸಿಕೊಂಡಿದ್ದಾರೆ. ಕೆಲವು ಗ್ರಾಮಗಳಲ್ಲಿ ಹಲವು ಜನಗಾವುಂಡರೂ ಇರುತ್ತಿದ್ದರು.[119] ಇವರು ಪ್ರಭುಗಾವುಂಡರಿಗೆ ಅಧೀನರಾಗಿರುತ್ತಿದ್ದರು.

## ೩.೫ ಆಡಳಿತಾಧಿಕಾರಿಗಳು

ಅನೇಕ ದಾನಶಾಸನಗಳಲ್ಲಿ ಅಧಿಕಾರಿಗಳಿಗೆ ಸಂಬಂಧಿಸಿದಂತೆ ಅನೇಕ ಪಾರಿಭಾಷಿಕ ಪದಗಳು ಕಂಡು ಬರುತ್ತವೆ. ಈವರೆಗೆ ಈ ಪದಗಳು ಅವರವರ ಹುದ್ದೆಗಳನ್ನು ಸೂಚಿಸುತ್ತವೆ ಎಂದು ನಂಬಲಾಗಿದೆ. ಚಾಲುಕ್ಯರ ಕಾಲದಲ್ಲಿದ್ದ ಪ್ರಮುಖ ಆಡಳಿತಾಧಿಕಾರಿಗಳು ಈ ಕೆಳಗಿನಂತಿದ್ದರು.

**ಮಹಾಮಾತ್ಯ :**

ಮಹಾಮಾತ್ಯ ಎಂದರೆ ಮಂತ್ರಿಮಂಡಳದ ಮುಖ್ಯಸ್ಥನೆಂದು ಡಾ.ಎಂ. ಚಿದಾನಂದಮೂರ್ತಿ ಅಭಿಪ್ರಾಯಪಟ್ಟರೆ[120] ಡಾ. ಜೆ. ಎಂ. ನಾಗಯ್ಯ ಅವರು "ಮಹಾಮಾತ್ಯನು ಚಕ್ರವರ್ತಿ ಅಥವಾ ಮಹಾ ಸಾಮಂತಾಧಿಪತಿಗಳೊಂದಿಗೆ ಎಲ್ಲ ಕಾಲದಲ್ಲಿಯೂ ಜೊತೆಯಲ್ಲಿರುತ್ತಿದ್ದವನು."[121] ಎಂದಿದ್ದಾರೆ.

**ಮಹಾಸಾಮಂತಾಧಿಪತಿ ಮಹಾಪ್ರಚಂಡದಂಡನಾಯಕ :**

ಪ್ರತಿಯೊಂದು ಆಡಳಿತ ವಿಭಾಗಗಳ ಮೇಲೆ ಮಹಾಸಾಮಂತಾಧಿಪತಿ ಮಹಾಪ್ರಚಂಡ ದಂಡನಾಯಕರು ಇರುತ್ತಿದ್ದರು. ಸುಂಕದ ಇಲಾಖೆ, ದಾಖಲು ಪತ್ರಗಳ ಇಲಾಖೆ, ವಿದೇಶಾಂಗ ಇಲಾಖೆ, ರಕ್ಷಣಾ ಇಲಾಖೆ, ಕಂಟಕರಕ್ಷಣಾ ಇಲಾಖೆ, ವಾಹನವಸ್ತುಗಳ ಇಲಾಖೆ, ಭಂಡಾರದ ಇಲಾಖೆ, ವಿದ್ಯಾಇಲಾಖೆ ಹೀಗೆ ಪ್ರತಿಯೊಂದು ಇಲಾಖೆಗೂ ಒಬ್ಬ ಮುಖ್ಯ ಅಧಿಕಾರಿ ಇರುತ್ತಿದ್ದನು. ಅವನನ್ನು ಮಹಾಸಾಮಂತಾಧಿಪತಿ ಮಹಾಪ್ರಚಂಡ ದಂಡನಾಯಕ ಎಂದು ಕರೆಯುತ್ತಿದ್ದರು.

**ದಂಡನಾಯಕ :**

ಸಾಮಾನ್ಯವಾಗಿ 'ದಂಡನಾಯಕ' ಎಂದರೆ 'ಸೇನಾಪತಿ' ಎಂದು ಅರ್ಥೈಸಲಾಗಿದೆ. 'ದಂಡನಾಯಕ' ಎಂಬುದು ಒಂದು ಹುದ್ದೆಯಾಗಿತ್ತು, ಇವರು ಚಕ್ರವರ್ತಿ ಅಥವಾ ಮಹಾಮಂಡಳೇಶ್ವರರಿಂದ ನೇಮಿಸಲ್ಪಡುತ್ತಿದ್ದರು. ದಂಡನಾಯಕರ ಹುದ್ದೆ ಕೇಂದ್ರೀಯ ಮಟ್ಟದಲ್ಲಿ ಹಾಗೂ ವಿಭಾಗಮಟ್ಟಗಳಲ್ಲಿಯೂ ಇರುತ್ತಿತ್ತು. ದಂಡನಾಯಕರು ಕೇವಲ ಸೈನ್ಯಕ್ಕಷ್ಟೇ ಸೀಮಿತರಾಗಿರಲಿಲ್ಲ. ಕೆಲವರು ಸುಂಕಕ್ಕೆ, ಕೆಲವರು ವಿದೇಶಾಂಗಕ್ಕೆ, ಕೆಲವರು ಭಂಡಾರದ ವಿವಿಧ ಇಲಾಖೆಗಳಿಗೆ ಸಂಬಂಧಪಟ್ಟವರಾಗಿದ್ದರು.

**ರಾಜ್ಯಾಧ್ಯಕ್ಷರು :**

ರಾಜ್ಯಾಧ್ಯಕ್ಷರು ಬೇರೆ ಬೇರೆ ಪ್ರಾಂತಗಳಿಗೆ ಮಹಾಪ್ರಚಂಡ ದಂಡನಾಯಕರಿಂದ ನೇಮಿಸಲ್ಪಡುತ್ತಿದ್ದರು. ಸಾಮ್ರಾಜ್ಯಕ್ಕೂ ಒಬ್ಬ ರಾಜ್ಯಾಧ್ಯಕ್ಷನಿರುತ್ತಿದ್ದನು. ಅವನನ್ನು ರಾಷ್ಟ್ರದ ರಾಜ್ಯಾಧ್ಯಕ್ಷನೆಂದು ಚಕ್ರವರ್ತಿಯು ನೇಮಿಸುತ್ತಿದ್ದ. ಒಂದರರ್ಥದಲ್ಲಿ ಇವರು ಇಂದಿನ ರಾಜ್ಯಪಾಲರು ನಿರ್ವಹಿಸುವ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದರು.

**ಅಂತಃಪುರಾಧ್ಯಕ್ಷ :**

ಚಕ್ರವರ್ತಿಗಳು, ಮಹಾಮಂಡಳೇಶ್ವರು ಮತ್ತು ಮಹಾಸಾಮಂತರು ತಮ್ಮ ಅರಮನೆ ಹಾಗೂ ಅಂತಃಪುರಗಳಿಗೆ ಒಬ್ಬ ಮೇಲ್ವಿಚಾರಕನನ್ನು ನೇಮಿಸುತ್ತಿದ್ದರು. ಅವರನ್ನು 'ಅಂತಃಪುರಾಧ್ಯಕ್ಷ' ಎಂದು ಕರೆಯುತ್ತಿದ್ದರು. ಇವನು ಅಂತಃಪುರದ ಎಲ್ಲ ಸಿಬ್ಬಂದಿವರ್ಗದ ಮೇಲಿನ ಅಧಿಕಾರಿಯಾಗಿದ್ದ. ರಾಜಪರಿವಾರದ ರಕ್ಷಣೆ. ಯೋಗಕ್ಷೇಮದ ಹೊಣೆಯನ್ನು ಇವರು ಹೊತ್ತಿದ್ದರು.

**ಪಡೆವಳ :**

'ಪಡೆವಳ' ಎಂಬುದಕ್ಕೆ ಕಿಟ್ಟೆಲ್‌ರವರು ತಮ್ಮ ನಿಘಂಟಿನಲ್ಲಿ[122] 'a general' ಎಂದಿದ್ದಾರೆ. ಅಂದರೆ 'ಸೇನಾನಿ' ಎಂದು ಅರ್ಥನೀಡಿದ್ದಾರೆ. ಪಡೆವಳ ಎಂಬ ಅಧಿಕಾರಿಯು ಸೈನ್ಯದ ಸಣ್ಣ

ಸಣ್ಣ ತುಕುಡಿಗಳ ನಾಯಕನಾಗಿದ್ದನು. ಇವನು ಸಾಮಂತಾಧಿಪತಿ ಮಹಾಪ್ರಚಂಡನಾಯಕನಿಗೆ ಅಧೀನನಾಗಿದ್ದನು.

**ಪಡಿಹಾರ–ಪ್ರತಿಹಾರರು :**

'ಪಡಿಯರ' ಎಂದರೆ ಬಾಗಿಲು ಕಾಯುವವನು: ದ್ವಾರಪಾಲಕನಿಗೆ 'ಪ್ರತಿಹಾರ' ಎಂದು ಅರ್ಥವಿದೆ. ಅರಮನೆ ಮತ್ತು ಕೋಟೆಯ ಬಾಗಿಲುಗಳನ್ನು ಕಾಯುವುದು ಇವರ ಕೆಲಸವಾಗಿತ್ತು.

**ಪೆರ್ಗ್ಗಡೆಗಳು :**

ಗಾವುಂಡರಂತೆ ಪೆರ್ಗ್ಗಡೆಗಳು ಹಳ್ಳಿಗಳ ಇಲ್ಲವೆ ಯಾವುದೇ ವಿಭಾಗದ ಮುಖ್ಯಸ್ಥರಾಗಿದ್ದರು. ಇವರು ತೆರಿಗೆ ಸಂಗ್ರಹಿಸುವದು ಇವರ ಮುಖ್ಯ ಕಾರ್ಯವಾಗಿತ್ತು.

**ತಳಾರರು :**

ತಳಾರರು ಕಳ್ಳರಿಂದ, ಸಮಾಜದ್ರೋಹಿಗಳಿಂದ ಗ್ರಾಮವನ್ನು ರಕ್ಷಣೆ ಮಾಡುವ ಕೆಲಸ ನಿರ್ವಹಿಸುತ್ತಿದ್ದರು. ಹಗಲು–ರಾತ್ರಿ ಎನ್ನದೆ ಗ್ರಾಮವನ್ನು ರಕ್ಷಿಸುವ ಇವರಿಗೆ 'ಖಡ್ಗ' ಅಂದರೆ ತಲ್ವಾರದ ಅವಶ್ಯಕತೆ ಯಾವಾಗಲೂ ಇರುತ್ತಿತ್ತು. ಹೀಗಾಗಿ ಯಾವಾಗಲೂ ಖಡ್ಗಧಾರಿಗಳಾಗಿದ್ದ ಇವರನ್ನು 'ತಳಾರ' ನೆಂದು ಕರೆದಿರಬಹುದಾಗಿದೆ. ಇವರು ಗ್ರಾಮಗಳಲ್ಲಿಯ ಇಂದಿನ 'ತಳವಾರ' ರಾಗಿದ್ದಾರೆ.

ಹೀಗೆ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕೇಂದ್ರ ಹಾಗೂ ಪ್ರಾಂತಗಳಲ್ಲಿ ಹಲವಾರು ಕಾರ್ಯಗಳನ್ನು ನಿರ್ವಹಿಸುತ್ತಿದ್ದ ಅಧಿಕಾರಿಗಳಿದ್ದರು. ವಿಶಾಲ ಸಾಮ್ರಾಜ್ಯದಲ್ಲಿ ಸುವಸ್ಥಿತ ಆಡಳಿತ ನಡೆಸಲು ಈ ಅಧಿಕಾರಿಗಳು ಮತ್ತು ಪ್ರಭುಗಳು ಆಧಾರಸ್ಥಂಭವಾಗಿದ್ದರು.

## ಕೊನೆಯ ಟಿಪ್ಪಣಿಗಳು

1. SII IX-1, 118 - ಹಿರೇಹಡಗಲಿ ಜಿ. ಬಳ್ಳಾರಿ; ಕ್ರಿ.ಶ. 1057
2. ಗೋಪಾಲ್ ಬಿ.ಆರ್.– " The Chalukya's of Kalyana and Kalacharies" ಪು.19
3. ಅದೇ.
4. SII. IX (i). 118. ಹಿರೇಹಡಗಲಿ; ಕ್ರಿ.ಶ. 1057
5. I.A. IV. 2, ಬಳ್ಳಿಗಾವಿ; ತಾ. ಶಿಕಾರಿಪುರ ಜಿ. ಶಿವಮೊಗ್ಗ ಕ್ರಿ.ಶ. 1075-76
6. ಬಿಲ್ಹಣ – 'ವಿಕ್ರಮಾಂಕದೇವ ಚರಿತಂ'; ಕನ್ನಡಾನುವಾದ: ನೀರ್ಪಾಜೆ ಭೀಮಭಟ್ಟ, ಅಭ್ಯುದಯ ಪ್ರಕಾಶನ, ಕನ್ಯಾನ, 1998
7. S.I.I. IX (i) 118. ಹಿರೇಹಡಗಲಿ; ಕ್ರಿ.ಶ. 1057; A.I. XII. ಕೌಥಮ್; ಪು. 1511.; E.C. XI. 1. ದಾವಣಗೆರೆ; ಕ್ರಿ.ಶ. 1122–23
8. S.I.I. XX. 19. ರೂಗಿ, (ತಾ)ಇಂಡಿ
9. ಕ.ವಿ.ವಿ.ಶಾ.ಸಂ. 2. ಯಲಬುರ್ಗಾ(ತಾ).51– ಕುಕ್ಕನೂರು; ಕ್ರಿ.ಶ. 1005
10. ಕ.ವಿ.ವಿ.ಶಾ.ಸಂ. 6. 4–ಮುರಮ್; ಕ್ರಿ. ಶ. 1013
11. ಕ.ಜಿ.ಶಾ. ಸೇಡಂ(ತಾ.) 15–ಸೇಡಂ; ಕ್ರಿ.ಶ. 1079

11–1. ಕ.ವಿ.ವಿ.ಶಾ.ಸಂ. 9. 5–ಕೊಣ್ಣೂರು; ಕ್ರಿ.ಶ. 13ನೇ ಶತಮಾನ

12. ಕೃಷ್ಣರಾವ್ ಎಂ.ವಿ. ಮತ್ತು ಎಂ. ಕೇಶವಭಟ್ಟ– 'ಕರ್ನಾಟಕ ಇತಿಹಾಸ ದರ್ಶನ' ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ಚಾಮರಾಜಪೇಟೆ, ಬೆಂಗಳೂರು. ಪು. 164
13. I.A. XVI. ಪು.15
14. I.A. IX. 2- ಬಳ್ಳಿಗಾವಿ ತಾ. ಶಿಕಾರಿಪುರ ಜಿ. ಶಿವಮೊಗ್ಗ
15. ಕ.ವಿ.ವಿ.ಶಾ.ಸಂ. 5. ಭಾ.2. 405–ಚೊಪ್ಪದಂಡಿ; E.C.VII. SK- 179.
16. E.C. VII. ಶಿವಮೊಗ್ಗ 479- ಸೊರಬ
17. ನಂಜುಂಡಸ್ವಾಮಿ ಎ. ಎಸ್.– 'ಚಾಲುಕ್ಯರ ಇತಿಹಾಸ' ಪು.25
18. Yazdani G.- 'The Early History of The Deccan' part I. VI. ಪು.321
19. ಅದೇ.
20. ಕೃಷ್ಣರಾವ್ ಎಂ.ವಿ. ಮತ್ತು ಎಂ. ಕೇಶವಭಟ್ಟ– 'ಕರ್ನಾಟಕದ ಇತಿಹಾಸ ದರ್ಶನ' ಪು. 166
21. ಅದೇ.
22. Yazdani G.– 'The Early History of the Deccan' part I. VI. ಪು. 323
23. ನಂಜುಂಡಸ್ವಾಮಿ ಎ.ಎಸ್.– 'ಚಾಲುಕ್ಯರ ಇತಿಹಾಸ' ಪು.27.
24. Yazdani G.– 'The Early History of the Deccan' part I. VI. ಪು.324. 1982.
25. S.I.I. VI 102. ಹೊಟ್ಟೂರು
26. S.I.I. ii. No. I. 92-ತಂಜಾವೂರು; ಕ್ರಿ.ಶ. 1006
27. ಅದೇ.
28. 'ಬಸವ ಪುರಾಣ' ಅಶ್ವಾಸ 2 ಮತ್ತು 'ಚೆನ್ನಬಸವಪುರಾಣ' ಆಶ್ವಾಸ 7 ಪು. 10 (ನೋಡಿ ಹಿಪ್ಪರಗಿಯ ಶಾಸನದ ಸುಗ್ಗಲದೇವಿಯ ಹೆಸರು ಪ್ರಸ್ತಾಪವಿದೆ.)

29. ಗೋಪಾಲ ಬಿ. ಆರ್.- "The Chalukyas of Kalayana and the Kalachuries" ಪು. 108
30. ಕ.ಜಿ.ಶಾ. ಕಲ್ಬುರ್ಗಿ(ತಾ.) 5–ಸರಡಗಿ; ಕ್ರಿ.ಶ. 1011
31. E.I. XV. 75. ಕ್ರಿ.ಶ. 1002
32. ನೀಲಕಂಠಶಾಸ್ತ್ರಿ ಕೆ.ಎ.– 'The Early Histroy of the Deccan' **ಪು. 326**
33. S.I.I. XX. B.K.I. IV. 19-ರೂಗಿ; ಕ್ರಿ.ಶ. 1015
34. ಕ.ವಿ.ವಿ.ಶಾ.ಸಂ. 6. 4–ಮುರಮ್. ಕ್ರಿ.ಶ. 1013
35. E.I. ಪು. 223
36. S.I.I. XX. B.K.I. IV. 21-ರೂಗಿ; ಕ್ರಿ.ಶ. 1019
37. ಕ.ವಿ.ವಿ.ಶಾ.ಸಂ. 5. ಭಾ. 2. 469–ಆಲಂಪುರ; ಕ್ರಿ.ಶ. 1029
38. S.I.I. I. ಪು–51
39. 'ಕರ್ನಾಟಕ ಪರಂಪರೆ' ಸಂ. 1, ಪು.326
40. ನೀಲಕಂಠಶಾಸ್ತ್ರಿ ಕೆ. ಎ. – "The Chalukyas of kalyani" ಪು. 330
41. ಕ.ವಿ.ವಿ.ಶಾ.ಸಂ. 6. 77. ತಡಖೇಲ್ ಕ್ರಿ.ಶ. 1047
42. I.A . VIII. 2
43. I.A . VIII. 9
44. 'ಕರ್ನಾಟಕ ಪರಂಪರೆ' ಸಂ–1, ಪು. 328
45. ಕೃಷ್ಣರಾವ್ ಎಂ.ವ್ಹಿ.– 'ಕರ್ನಾಟಕದ ಇತಿಹಾಸ ದರ್ಶನ' ಪು. 171
46. ನೀಲಕಂಠಶಾಸ್ತ್ರಿ ಕೆ.ಎ.– The Chalukyas of kalyani ಪು – 338
47. S.I.I. III. 55; 304 c. ಉಲ್ಲೇಖ: ನೀಲಕಂಠಶಾಸ್ತ್ರಿ : 'The Chalukyas of kalyani' ಪು. 338
48. 'ಕರ್ನಾಟಕದ ಪರಂಪರೆ' ಸಂ–1 ಪು. 327
49. I.A. II. ಪು. 297
50. K.I . I. ಪು. 92. ನಿಂಬರಗಿ; ಕ್ರಿ.ಶ. 1047–48
51. ಕ.ವಿ.ವಿ.ಶಾ.ಸಂ. 6. 105–ಹೊನ್ನವಾಡ; ಕ್ರಿ.ಶ. 1054
52. 'ವಿಕ್ರಮಾಂಕದೇವಚರಿತಂ' ಪು–36–37
53. "ಗಗನವಾಂಕಸಂಖ್ಯೆ ಸಕಕಾಳದೊಳಗಾಗಿರೆ ಕೀಳಕಾಬ್ದಕಂ
    ನೊಳೆ ತದೀಯ ಚೈತ್ರ ಬಹುಳಾಷ್ಟಮಿಯೊಳ್ ರವಿವಾರದೊಳಜಸಂ
    ಮಿಗೆ ಕುರುವರ್ತ್ತಿಯೊಳ್ಪರಮಯೋಗನಿಯೋಗದೆ ತುಂ(ಗಭ)ದ್ರೆಯೊಳ್"
    (E.C. VII. 136-ಬಳ್ಳಿಗಾವಿ; ಕ್ರಿ.ಶ. 1068)
54. 'ವಿಕ್ರಮಾಂಕದೇವಚರಿತಂ' – ಕನ್ನಡಾನುವಾದ; ನೀರ್ಪಾಜೆ ಭೀಮಭಟ್ಟ ಪು. 36–39
55. ಅದೇ.
56. ಕೃಷ್ಣರಾವ್ ಎಂ. ವಿ. ಮತ್ತು ಎಂ. ಕೇಶವಭಟ್ಟ– 'ಕರ್ನಾಟಕ ಇತಿಹಾಸದರ್ಶನ' ಪು. 175
57. ನಾಗಯ್ಯ ಜೆ.ಎಂ.– 'ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ' ಪು. 10–13
58. K.I. V. 12- ನರಗುಂದ; ಕ್ರಿ.ಶ. 1080

59. 'ಕರ್ನಾಟಕ ಪರಂಪರೆ'- ಸಂ. 1. ಪು. 329

60. "ನಾಸೀದಸ್ತಿಭವಿಷ್ಯತಿ ಕ್ಷಿತಿತಲೇಕಲ್ಯಾಣ ಕಲ್ಪಂ ಪುರಂ ।
ನೋದ್ರಷ್ಟಃ ಶ್ರುತವವಾಕ್ಷಿತಿಪತಿಃ ಶ್ರೀ ವಿಕ್ರಮಾರ್ಕೋಪಮ್ ॥
ಉಲ್ಲೇಖ: ನಾಗಯ್ಯ ಜೆ.ಎಂ.- 'ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ' ಪು. 1

61. K.I. IV. 10- ಹಿರೇಹಳ್ಳಿ; ಕ್ರಿ.ಶ. 1121

62. ನಾಗಯ್ಯ ಜೆ.ಎಂ.- 'ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ' ಪು. XIII

63. ಅದೇ. ಪು. 4

64. S.I.I. XI. ii, 150- ಗದಗ; ಕ್ರಿ.ಶ. 1102

65. 'ಕರ್ನಾಟಕ ಪರಂಪರೆ' ಸಂ. 1. ಪು. 329

66. ಪ್ರಾಚೀನ ಭಾರತದಲ್ಲಿ 'ವಿಕ್ರಮಶಕೆ' ಎಂಬ ಹೆಸರಿನ ಎರಡು ಶಕೆಗಳು ಪ್ರಾರಂಭಿಸಲ್ಪಟ್ಟವು. ಕ್ರಿ.ಶ.58ರಲ್ಲಿ ಉಜ್ಜೈನಿಯ ಅರಸ ವಿಕ್ರಮನೆಂಬುವನು ಉತ್ತರಭಾರತದಲ್ಲಿ ಈ ಮೊದಲೇ ಪ್ರಾರಂಭಿಸಿದ್ದ. ಅದು ಕೇವಲ ಉತ್ತರಭಾರತಕ್ಕೆ ಸೀಮಿತವಾಗಿತ್ತು. ದಕ್ಷಿಣ ಭಾರತದಲ್ಲಿ ಚಾಲುಕ್ಯ ಆರನೆಯ ವಿಕ್ರಮಾದಿತ್ಯನಿಂದ ಪ್ರಾರಂಭಿಸಲ್ಪಟ್ಟ 'ವಿಕ್ರಮಶಕೆ' ಎರಡನೆಯದು. ಇಡೀ ಭಾರತದಲ್ಲಿ ಅತ್ಯಂತ ವ್ಯಾಪಕವಾಗಿ ಬಳಸಲ್ಪಟ್ಟದ್ದು ಶಕವರ್ಷ. ಇದನ್ನು ಕ್ರಿ.ಶ. 78ರಲ್ಲಿ ಆರಂಭಿಸಲಾಯಿತು. ಭಾರತ ಸರ್ಕಾರ 1957 ಮಾರ್ಚ 22ರಂದು ಶಕವರ್ಷವನ್ನು ಭಾರತದ ರಾಷ್ಟ್ರೀಯ ಶಕವರ್ಷವೆಂದು ಅಂಗೀಕರಿಸಿದೆ. ಕ್ರಿಸ್ತ ಶಕಕ್ಕಿಂತಲೂ ಶಕವರ್ಷ 78 ವರ್ಷ ನಂತರದಲ್ಲಿ ಪ್ರಾರಂಭವಾಗಿದೆ.

67. ನಾಗಯ್ಯ ಜೆ.ಎಂ.- 'ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ' ಪು-16-19

68. E.I. XXXVIII. 10- ರಾಯಭಾಗ; ಕ್ರಿ. ಶ. 1077

69. K.I. VI. 15- ಮಲಘಾಣ; ಕ್ರಿ. ಶ. 1100

70. E.C. VII. 12- ಗೊಂದೀಚಟ್ಟನಹಳ್ಳಿ; ಕ್ರಿ.ಶ. 1120

71. M.A.R. 76- ಹಳೆಬನ್ನೂರು; ಕ್ರಿ.ಶ.-1080

72. ಅದೇ.

73. S.I.I. XI. ii. 155- ನರೇಗಲ್; ಕ್ರಿ.ಶ.1104-05

74. E.C.II. ಶ್ರವಣಬೆಳ್ಗೊಳ 82.; ಕ್ರಿ.ಶ. 1118

75. E.C. VII. 12- ಗೊಂದೀಚಟ್ಟನಹಳ್ಳಿ; ಕ್ರಿ.ಶ. 1120

76. E.C. VII. ಶಿಕಾರಿಪುರ 114-ಬಳ್ಳಿಗಾವಿ; ಕ್ರಿ.ಶ. 1096

77. A.P.G.A.S. III. A.P. Gb-3. ನಾಗಾಯಿ; ಕ್ರಿ.ಶ. 1085

78. E.C. XI. ದಾವಣಗೆರೆ 90-ಶಾಬನೂರು (ಕ್ರಿ.ಶ. 1076-1126)

79. ನಾಗಯ್ಯ ಜೆ.ಎಂ.- 'ಆರನೆಯ ವಿಕ್ರಮದಿತ್ಯನ ಶಾಸನಗಳು ಒಂದು ಅಧ್ಯಯನ' ಪು : 24-26

80. ಅದೇ. ಪು. 61

81. ಅದೇ. ಪು. 52

82. E.C.VIII. SB. 414

83. ಕ.ವಿ.ವಿ.ಶಾ.ಸಂ. 5. ಭಾ.2 508-ಜಡಚೇರ್ಲ; ಕ್ರಿ.ಶ. 1125-26

84. E.C. VII ಶಿಕಾರಿಪುರ 100 ; ಕ್ರಿ.ಶ. 1129

85. S.I.I. XX. 98- ಕಡ್ಲೇವಾಡ; ಕ್ರಿ.ಶ. 1127

86. ಕ್ರಿ.ಶ. 1138ರ ನಂತರದಿಂದ 'ಭೂಲೋಕಮಲ್ಲ ವರ್ಷ' ಕಾಲಗಣನೆ ಶಾಸನಗಳಲ್ಲಿ ಕಂಡು ಬರುವುದಿಲ್ಲ. ಒಂದೆರಡು ವರ್ಷ ಅಸ್ತಿತ್ವದಲ್ಲಿದ್ದರೂ ಅದು ತೀರ ವಿರಳ. ಕಲ್ಯಾಣ ಚಾಲುಕ್ಯರ ಆಳ್ವಿಕೆಯ ಅಂತ್ಯದವರೆಗೆ 'ವಿಕ್ರಮಶಕೆ' ಬಳಕೆಯಾಗಿದೆ. ತದನಂತರ ಶಕವರ್ಷದ ಬಳಕೆಯೇ ಮುಂದುವರೆದಿರುವುದನ್ನು ಶಾಸನಗಳಲ್ಲಿ ಕಾಣಬಹುದು.

87. 3ನೆಯ ಸೋಮೇಶ್ವರನ ಕಾಲದ ಕ್ರಿ.ಶ. 1138 ನವಂಬರ 29ರ ಮತ್ತೂರ ಶಾಸನ ಕೊನೆಯದಾಗಿದೆ. ಡಾ. ಫ್ಲೀಟ್‌ರವರು 1138–39ರಲ್ಲಿ 3ನೆಯ ಸೋಮೇಶ್ವರ ಮರಣ ಹೊಂದಿರಬಹುದುದೆಂದು ಅಭಿಪ್ರಾಯ ಪಟ್ಟಿದ್ದಾರೆ. (ಉಲ್ಲೇಖ: ಗೋಪಾಲ್ ಬಿ. ಆರ್.– 'The Chalukyas of Kalyana and Kalachuries' ಪು. 314, 315)

88. ಕ.ವಿ.ವಿ.ಶಾ.ಸಂ. 8 63–ಅಣಂದೂರು; ಕ್ರಿ.ಶ. 1038

89. ಕೃಷ್ಣರಾವ್ ಎಂ. ವಿ. ಮತ್ತು ಎಂ.ಕೇಶವಭಟ್ಟ– 'ಕರ್ನಾಟಕ ಇತಿಹಾಸ ದರ್ಶನ' ಪು. 190

90. ಗೋಪಾಲ ಬಿ. ಆರ್.– 'The Chalukyas of Kalyana and Kalachauries' ಪು. 316

91. ನೀಲಕಂಠಶಾಸ್ತ್ರೀ ಕೆ.ಎ.'The Early History of the Ceccan' ಪು. 373

92. ಕ.ವಿ.ವಿ.ಶಾ.ಸಂ. 8. 63– ಅಣಂದೂರು; ಕ್ರಿ.ಶ. 1038, ಕ.ವಿ.ವಿ.ಶಾ.ಸಂ. 6. 28– ಕೊಲ್ಹಾಪುರ; ಕ್ರಿ.ಶ. 1139, ಕ.ವಿ.ವಿ.ಶಾ.ಸಂ. 9. 268– ಬದಾಮಿ; ಕ್ರಿ.ಶ.1139 ಇತ್ಯಾದಿ.

93. ಕ.ವಿ.ವಿ.ಶಾ.ಸಂ. 5. ಭಾ. 1. 106– ಹೇಮಾವತಿ; ಕ್ರಿ.ಶ. 1162

94. 'ಕರ್ನಾಟಕ ಪರಂಪರೆ' ಸಂ. 1, ಪು. 339

95. K.D.I. II. ಪು. 4– ಕೆಂಭಾವಿ

96. 'ಕರ್ನಾಟಕ ಪರಂಪರೆ' ಸಂ. 1, ಪು. 340

97. ನೀಲಕಂಠಶಾಸ್ತ್ರೀ ಕೆ.ಎ. : 'The Early History of the Deccan' ಪು. 376

98. ಅದೇ.

99. ಗೋಪಾಲ ಬಿ.ಆರ್.–'The Chalukyas of Kalyana and the Kalachuries' ಪು. 322

100. ಅದೇ.

101. 'ಕರ್ನಾಟಕ ಪರಂಪರೆ' ಸಂ. 1, ಪು. 340

102. ಗೋಪಾಲ ಬಿ. ಆರ್.– 'The Chalukyas of Kalyana and the Kalachuries' ಪು. 326–328

103. S.I.I. XV. 59- ಅಣ್ಣಿಗೇರಿ; ಕ್ರಿ.ಶ.1184, ಅದೇ. 57- ಡಂಬಳ; ಕ್ರಿ.ಶ. 1184

104. S.I.I. XV. 59- ಅಣ್ಣಿಗೇರಿ; ಕ್ರಿ.ಶ. 1184

105. ಗೋಪಾಲ ಬಿ.ಆರ್.– 'The Chalukyas of Kalyana and the Kalachuries' ಪು. 330

106. ನಾಗಯ್ಯ ಜೆ.ಎಂ.– '6ನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ' ಪು. 28

107. ಅದೇ. ಪು. 29

108. ಈ ಸಂಖ್ಯೆ ಡಾ.ಜೆ.ಎಂ. ನಾಗಯ್ಯರವರು ತಮ್ಮ ಪ್ರಬಂಧದಲ್ಲಿ ಉಲ್ಲೇಖಿಸಿದಂತೆ ಇದೆ. ಆದರೆ ಅಪ್ರಕಟಿತವಾದ ಆರನೆಯ ವಿಕ್ರಮಾದಿತ್ಯನ ಶಾಸನಗಳಲ್ಲಿ ಉಲ್ಲೇಖವಾದ ರಾಣಿಯರ ಸಂಖ್ಯೆ ಇನ್ನೂ ಹೆಚ್ಚಿದೆ. ಶಾಸನ ಸಂಶೋಧಕರಾದ ಶ್ರೀಮತಿ ಹನುಮಾಕ್ಷಿ ಗೋಗಿಯವರ ಪ್ರಕಾರ ಆರನೆಯ ವಿಕ್ರಮಾದಿತ್ಯನ ರಾಣಿಯರ ಸಂಖ್ಯೆ ಇದುವರೆಗೂ ತಿಳಿದು ಬಂದಂತೆ 36.

109. I.A. XVI. ಪು. 19

110. ಕ.ವಿ.ವಿ.ಶಾ.ಸಂ. 2. ಯಲಬುರ್ಗಾ(ತಾ) 51–ಕುಕ್ಕನೂರು; ಕ್ರಿ.ಶ. 1005

111. 'ಕರ್ನಾಟಕ ಪರಂಪರೆ' ಸಂ. 1. ಪು. 326

112. ಅದೇ.

113. ಯಲಿಗಾರ ಚನ್ನಕ್ಕ– 'ಪ್ರಾಚೀನ ಕರ್ನಾಟಕದ ರಾಣಿಯರು'. ಪು. 38

114. ಅದೇ. ಪು. 39

115. ಹೆಚ್ಚಿನ ವಿವರಗಳಿಗೆ ನೋಡಿ– ನಾಗಯ್ಯ ಜೆ.ಎಂ.–'ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ' ಪು. 30–45

116. ಕ.ವಿ.ವಿ.ಶಾ.ಸಂ. 6. 74– ಕರಾಡಖೇಡ; ಕ್ರಿ.ಶ. 1133

117. ಕ.ಜಿ.ಶಾ. ಆಳಂದ(ತಾ) 13– ನಿಂಬರಗಿ; ಕ್ರಿ.ಶ. 1098

118. ನಾಗಯ್ಯ ಜೆ.ಎಂ.–'ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ' ಪು. 150–225

119. ಚಿದಾನಂದಮೂರ್ತಿ ಎಂ.– 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಪು. 356–57

120. ಅದೇ. ಪು. 430–31

121. ನಾಗಯ್ಯ ಜೆ.ಎಂ.–'ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ', ಪು. 277–78

122. 'ಕಿಟೆಲ್ ಕನ್ನಡ–ಇಂಗ್ಲಿಷ ಶಬ್ದಕೋಶ' ಸಂ. 3. ಪು. 985

*****

# ಅಧ್ಯಾಯ – ನಾಲ್ಕು

# ಕಲ್ಯಾಣ ಚಾಲುಕ್ಯರ ದಾನ-ದತ್ತಿಗಳು

# ಅಧ್ಯಾಯ - ನಾಲ್ಕು

# ಕಲ್ಯಾಣ ಚಾಲುಕ್ಯರ ದಾನ-ದತ್ತಿಗಳು

## ೪.೧ ಪೀಠಿಕೆ

ಕರ್ನಾಟಕದ ಇತಿಹಾಸದಲ್ಲಿ ಕಲ್ಯಾಣ ಚಾಲುಕ್ಯರ ಆಳ್ವಿಕೆ ಒಂದು ಪರ್ವಕಾಲ. ಪ್ರಾಚೀನ ಕಾಲದಿಂದ ಮಧ್ಯಕಾಲಕ್ಕೆ ಅಡಿಯಿಟ್ಟ ಸಂದರ್ಭ. ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕ, ಆರ್ಥಿಕ ಹೀಗೆ ವಿಭಿನ್ನ ಕ್ಷೇತ್ರಗಳ ಅಧ್ಯಯನಕ್ಕೆ ಅಭೂತಪೂರ್ವ ಆಕರವನ್ನು ಒದಗಿಸುವ ವಿಶಿಷ್ಟಕಾಲ. ಕಲ್ಯಾಣ ಚಾಲುಕ್ಯರು ಸುಮಾರು ಎರಡು ಶತಮಾನಗಳಕಾಲ ಸುಧೀರ್ಘ ಆಡಳಿತ ನಡೆಸಿ ಅಪಾರ ಶಾಸನ ಸಂಪತ್ತನ್ನು ನೀಡಿ ಕನ್ನಡ ಸಾಹಿತ್ಯದ ಕಣಜವನ್ನು ತುಂಬಿದ್ದಾರೆ. ಇಲ್ಲಿಯವರೆಗೆ ದೊರೆತ ಶಾಸನಗಳಲ್ಲಿ ದಾನಕ್ಕೆ ಹೆಚ್ಚಿನ ಪ್ರಾಧಾನ್ಯತೆಯಿದೆ. ಹಾಗೆ ನೋಡಿದರೆ ಪ್ರತಿಯೊಂದು ಶಾಸನಗಳು ದಾನಶಾಸನಗಳೇ ಆಗಿವೆ. “ಜೀವನದಲ್ಲಿ ಒಂದಾದರೂ ಗುಡಿಯನ್ನು ಕಟ್ಟಿಸಬೇಕು, ಕಟ್ಟಿಸಿದ ಗುಡಿಗಳಿಗೆ ದಾನವನ್ನಾದರೂ ಕೊಡಬೇಕು”[1] ಎಂಬುದು ಆ ಕಾಲದ ಜನರ ಭಾವನೆಯಾಗಿತ್ತು. ಸಂಪತ್ತು ಶಾಶ್ವತವಾದುದಲ್ಲ. ಇನ್ನೊಬ್ಬರಿಗೆ ಕೊಡುವ ಧರ್ಮವೇ ಸಂಪತ್ತು. “ಒಡಲೊಡವೆ ಹೆಂಡಿರೆಂಬವರಿಗೆ ಮಾತ್ರ. ಪುರುಷರಿಗೆ ಪುಣ್ಯರೂಪವೇ ಒಡವೆ. ಸಿರಿನಿಟ್ಟೆಯಂತು ಧರ್ಮವೇ ಪರಮ ಧನಂ”[2] ಎಂಬ ಧಾರ್ಮಿಕ ನಿಷ್ಠೆ ಸಾವಿರಾರು ದಾನಗಳನ್ನು ನೀಡಲು ಪ್ರೇರಣೆಯಾಗಿತ್ತು. ಇಂತಹ ಹಲವಾರು ಪ್ರೇರಣೆಗಳು ದಾನದತ್ತಿಗಳನ್ನು ನೀಡಲು ಕಾರಣವಾಗಿವೆ. ಕಲ್ಯಾಣಿ ಚಾಲುಕ್ಯರ ಕಾಲದ ದಾನ-ದತ್ತಿಗಳು ಜ್ಞಾನದಾಹಿಗಳಿಗೆ ಒಂದು ಮಹಾಭಂಡಾರ. ರಾಜರಿಂದ ಹಿಡಿದು ಸಾಮಾನ್ಯ ಜನರ ವರೆಗೂ ದಾನಗಳನ್ನು ನೀಡಿದ್ದಾರೆ. ದಾನ ಏಕೆ? ಹೇಗೆ? ಯಾವ ರೂಪದಲ್ಲಿ ? ಯಾರಿಗೆ ? ಯಾವ ಉದ್ದೇಶಕ್ಕೆ ನೀಡಲಾಯಿತು ಎಂಬುದನ್ನು ಚರ್ಚಿಸಿ ವಿಶ್ಲೇಷಿಸಲು ಈ ಅಧ್ಯಾಯ ಮೀಸಲಾಗಿದೆ.

ಲಾಭ-ಲೋಭದಿಂದ ತಾನುಣ್ಣದೆ, ಪೆರರ್ಗಿಕ್ಕದೆ, ಮಡುಗಿ ನೃಪರಿಗೆತೆತ್ತು ಬರಿದಾಗಿ ಬೆಳ್ಳೊಗದಿಂದರುವುದಕ್ಕಿಂತ ದೇವಾಲಯ ನಿರ್ಮಾಣ ಮಾಡುವುದು ಇಲ್ಲವೇ ದಾನವೀಯುವಂತಹ ಹಿತಧರ್ಮಕಾರ್ಯ ಮಾಡುವುದು ಲೇಸೆಂದು ನೀಡೋಣಿ ಶಾಸನ ತಿಳಿಸುತ್ತದೆ.[3] ಸಮಾಜಕ್ಕೆ ಹಿತವಾಗಲೆಂಬ ಸದುದ್ದೇಶದಿಂದ ಹಲವಾರು ದಾನ-ದತ್ತಿಗಳು ನೀಡಲ್ಪಟ್ಟಿವೆ. ಹಾಗೆಯೇ ರಾಜನೀತಿ ಸಾಧನವಾಗಿ “ಭೇದೋಪಾಯದಿಂದ ಸಾಧ್ಯವಾಗದೇ ಇರುವುದು ದಾನೋಪಾಯದಿಂದ ಸಿದ್ದಿಸುತ್ತದೆ.” ಎಂಬ ಕಾರಣಕ್ಕೆ ದಾನ ಬಳಸಲ್ಪಟ್ಟಿದೆ.

## ೪.೨ ದಾನಗಳ ಸ್ವರೂಪ

ಜೀವನದ ಮೌಲ್ಯಗಳಲ್ಲಿ ಧರ್ಮಕ್ಕೆ ಪ್ರಪ್ರಥಮ ಸ್ಥಾನವನ್ನಿತ್ತ ಧಾರ್ಮಿಕ ಸಂಸ್ಕೃತಿಯ ತಳಹದಿಯ ಮೇಲೆ ದಾನಗಳು ಪ್ರತಿಬಿಂಬಿತವಾಗಿವೆ. ದಾನ ಕೊಡುವದು ಲೌಕಿಕಸಂಪತ್ತಿನ ಗಳಿಕೆಯ ಸಾರ್ಥಕತೆ ಎಂದು ಅಂದಿನ ಜನ ಭಾವಿಸುತ್ತಿದ್ದರು. ರಾಜಾಧಿರಾಜರಿಂದ ಹಿಡಿದು ಮಹಾಮಂಡಳೇಶ್ವರರು, ಸಾಮಂತರು, ಅಧಿಕಾರಿಗಳು, ಸಾಮಾನ್ಯಜನರ ವರೆಗೂ ಈ ಧಾರ್ಮಿಕ ಭಾವನೆ ಬದುಕಿನ ಸಹಜ ಮೌಲ್ಯವಾಗಿ ಪರಿಣಮಿಸಿತು. ಅದರ ಫಲವಾಗಿ ಊರೂರಿಗೂ ದೇವಾಲಯಗಳು ತಲೆಎತ್ತಿನಿಂತವು. ಕಲ್ಯಾಣ ಚಾಲುಕ್ಯರ ಕಾಲಕ್ಕೆ ದಾನ ಶಾಸನಗಳ ರಚನೆಯ ಪದ್ಧತಿಯಲ್ಲಿ, ದಾನನೀಡುವ ಪದ್ಧತಿಯಲ್ಲಿ ಅಚ್ಚುಕಟ್ಟಾದ ಕ್ರಮ ಏರ್ಪಟ್ಟಿತು. ವಿಷಯ ನಿರೂಪಣೆಯಲ್ಲಿ ದಾನವನ್ನೀಯುವ ವಸ್ತುವಿನಲ್ಲಿ ಮತ್ತು ಉದ್ದೇಶಗಳಲ್ಲಿ ವೈವಿಧ್ಯತಯಿದ್ದರೂ ಶಾಸನದ ಪ್ರಾರಂಭ, ಬೆಳವಣಿಗೆ ಮತ್ತು ಮುಕ್ತಾಯಗಳಲ್ಲಿ ಒಂದು ವ್ಯವಸ್ಥೆ ಎದ್ದು ಕಾಣುತ್ತದೆ. ಅಂದಂದಿನ ಅರಸರ ಆಡಳಿತದ ಅನುಭವ ಜನಸಾಮಾನ್ಯರ ಜೀವನಾನುಭವ ಅವರ ಮನೋಇಂಗಿತದ ಚಿತ್ರಣ, ಆಯಾ ವರ್ತಮಾನಗಳ ಧಾರ್ಮಿಕ ಕಟ್ಟಳೆ, ಸಾಂಸ್ಕೃತಿಕ ಭಾವನೆಯ ವಿಕಾಸದ ಚಿತ್ರಣವನ್ನು ಶಾಸನದ ಬೆಳವಣಿಗೆಯಲ್ಲಿ ಕಾಣಬಹುದು. ಕಲ್ಯಾಣ ಚಾಲುಕ್ಯರ ಕಾಲದ ಶಾಸನಗಳಿಂದ ಅವರ ಕಾಲದಲ್ಲಿ ದಾನ ನೀಡುತ್ತಿದ್ದ ಸ್ವರೂಪವನ್ನು ಈ ಕೆಳಗಿನಂತೆ ತಿಳಿಯಬಹುದಾಗಿದೆ.

### ೧. ಶಾಸನಗಳನ್ನು ಬರೆಯಿಸುವುದು :

ಧರ್ಮಶಾಸ್ತ್ರಗಳು ಭಾರತೀಯರ ಸಾಮಾಜಿಕ, ಧಾರ್ಮಿಕ ಜೀವನವನ್ನು ರೂಪಿಸುವಲ್ಲಿ ಗಮನೀಯಪಾತ್ರವನ್ನು ನಿರ್ವಹಿಸಿವೆ. ದಾನ ದತ್ತಿಗಳಿಗೆ ಸಂಬಂಧಿಸಿದ ಹಲವಾರು ವಿಷಯಗಳು ಮೇಲಿನ ಅಂಶವನ್ನು ಘೋಷಿಸುತ್ತವೆ. ಶಾಸನಗಳಲ್ಲಿ ಕಂಡುಬರುವ ದಾನದ ವಿಷಯಾನು-ಕ್ರಮಣಿಕೆಯು ಬಹುಮಟ್ಟಿಗೆ ಧರ್ಮಶಾಸ್ತ್ರ ಅಥವಾ ಸ್ಮೃತಿಗಳಲ್ಲಿ ಉಕ್ತವಾಗಿರುವ ನಿಯಮಗಳನ್ನೇ ಅನುಸರಿಸಿದೆ.[೪] ದಾನದ ಸ್ವರೂಪದಲ್ಲಿ ದಾನಶಾಸನಗಳನ್ನು ಬರೆಸುವದು ಅತ್ಯಂತ ಪ್ರಮುಖ ಅಂಶವಾಗಿತ್ತು. ಶಾಸನ ಎಂಬ ಪದ ಮೊದಲು ರಾಜಾಜ್ಞೆಯನ್ನು ಸೂಚಿಸುತ್ತಿದ್ದು ಅದು ಇತರ ಬರಹಗಳಿಗೂ ಅನ್ವಯವಾಯಿತು. 'ಲೇಖನದ ಮೂಲಕ ಆಜ್ಞೆ ಮಾಡದ ರಾಜ, ರಾಜನ ಆಜ್ಞಾಪತ್ರವಿಲ್ಲದೇ ಅಧಿಕಾರ ನಡೆಸುವ ಅಧಿಕಾರಿ ಇಬ್ಬರೂ ಚೋರರು' ಎಂದು ಶುಕ್ರನೀತಿಸಾರ[೫] ಹೇಳುತ್ತದೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಶಾಸನಗಳ ಮೇಲೆಯೇ ರಾಜ್ಯದ 'ಶಾಂತಿ' ಮತ್ತು 'ಯುದ್ಧಗಳು' ನಿಂತಿವೆ ಎಂದು ಹೇಳಲಾಗಿದೆ.[೬]

ಈ ದಿಸೆಯಲ್ಲಿ ನೋಡಿದಾಗ ಯಾವುದೇ ಕಾರ್ಯವನ್ನು ಲಿಪಿಗೊಳಿಸುವದು ಅಗತ್ಯವೆನಿಸುತ್ತದೆ. ಈ ಹಿನ್ನೆಲೆಯಲ್ಲಿ ದಾನನೀಡುವ ಸಂದರ್ಭದಲ್ಲಿ ದಾನಶಾಸನಗಳನ್ನು ಬರೆಯಿಸುವದು ಮುಖ್ಯವಾಯಿತು. 'ಬೃಹಸ್ಪತಿ ಸ್ಮೃತಿ'ಯಲ್ಲಿ ದಾನ ಶಾಸನಗಳನ್ನು ಏಕೆ

ಬರೆಯಿಸಬೇಕು ಮತ್ತು ದಾನಶಾಸನಗಳ ಸ್ವರೂಪ ಹೇಗಿರಬೇಕು ಎಂಬುದನ್ನು ಹೀಗೆ ಹೇಳಲಾಗಿದೆ. "ಭೂದಾನ ಮುಂತಾದವುಗಳನ್ನು ಕೊಡುವ ರಾಜನು ಶಾಸನವನ್ನು ಬಟ್ಟೆಯ ಮೇಲಾಗಲಿ ತಾಮ್ರಪಟದ ಮೇಲಾಗಲಿ, ಬರೆಯಿಸಬೇಕು. ದಾನವನ್ನು ಸ್ವೀಕರಿಸಿದವನ ಹೆಸರು, ಸ್ಥಳದ ಹೆಸರು, ರಾಜನ ವಂಶದ ಹಿರಿಯರ ಹೆಸರು ಉಕ್ತವಾಗಿರಬೇಕು. ಕೊಟ್ಟ 'ಈ ದಾನವು ಕೊನೆಯವರೆಗೂ ನಿಲ್ಲಬೇಕು. ಈ ದಾನವನ್ನು ಯಾರೂ ಅಪಹರಿಸಕೂಡದು. ಕೊಟ್ಟ ಭೂಮಿಗೆ ಕಂದಾಯವಿಲ್ಲ. ದಾನವನ್ನು ಕಾಪಾಡುವವನು ಸ್ವರ್ಗಕ್ಕೆ, ಹಾಳುಗೆಡುವವನು ನರಕಕ್ಕೆ ಹೋಗುತ್ತಾನೆ ಎಂಬ ಹೇಳಿಕೆಗಳು ಇರಬೇಕು. ರಾಜನ ಮುದ್ರೆ, ದಾನದ ವರ್ಷ, ಅಧಿಕಾರಿಗಳ ರುಜು ಇಷ್ಟನ್ನು ದಾನಶಾಸನ ಒಳಗೊಂಡಿರಬೇಕು."[7] ಅಲ್ಲದೇ ಯಾಜ್ಞವಲ್ಕ್ಯ ಸ್ಮೃತಿಯಲ್ಲಿಯೂ ದಾನಶಾಸನವನ್ನು ಬರೆಯಿಸುವ ಅಗತ್ಯತೆಯನ್ನು ಹೇಳಿದೆ.[8] ಒಂದು ರೀತಿಯಲ್ಲಿ ಈ ಸ್ಮೃತಿ ಬಹುಮುಖ್ಯವಾಗಿದೆ. ಕಾರಣವೆಂದರೆ ಆರನೇ ವಿಕ್ರಮಾದಿತ್ಯನ ಆಸ್ಥಾನದಲ್ಲಿದ್ದ ವಿಜ್ಞಾನೇಶ್ವರನು 'ಮಿತಾಕ್ಷರ ಸಂಹಿತೆ' ಎಂಬ ವ್ಯಾಖ್ಯಾನವನ್ನು ಬರೆದಿದ್ದಾನೆ. ಮುಂದೆ ಬರುವ ರಾಜರ ಅವಗಾಹನೆಗಾಗಿ (ದಾನವನ್ನು ನಡೆಯಿಸಿಕೊಡಬೇಕಾದ ರಾಜರು) ದಾನಶಾಸನಗಳನ್ನು ಬರೆಯಿಸಬೇಕು. 'ದಾನಚ್ಚೇದೋಪವರ್ಮಾನ' ದಾನದ ಪ್ರಮಾಣ, ದಾನದ ಕಾಲ, ಯಾರು, ಯಾರಿಗೆ ದಾನಗಳನ್ನು ನೀಡಿದರು ? ಅವುಗಳನ್ನು ಹೇಗೆ ಪರಿಪಾಲಿಸಬೇಕು ಎಂಬುದರ ಬಗ್ಗೆ ನಿಬಂಧನೆಗಳನ್ನು ತಿಳಿಸುವಂತಿರಬೇಕು. ಭೂಮಿದಾನ ನೀಡಿದ್ದರೆ ಭೂಮಿಯ ಮೇರೆಗಳನ್ನು (ಚಕ್ಕಬಂದಿ) ತಿಳಿಸಿ ಗೊಂದಲಕ್ಕೆಡೆಮಾಡದಂತೆ ದಾನವನ್ನು ಪಾಲಿಸಲು ದಾನಶಾಸನಗಳನ್ನು ಬರೆಯಿಸುವದು ಅವಶ್ಯ. ಇದನ್ನು ವಿಜ್ಞಾನೇಶ್ವರನು ಮಿತಾಕ್ಷರ ಗ್ರಂಥದಲ್ಲಿ ಹೇಳಿದ್ದಾನೆ ಮತ್ತು ತನ್ನ ಸಮಕಾಲೀನ ಶಾಸನಗಳ ರಚನೆಯನ್ನು ವಿವರಿಸಿದ್ದಾನೆ. ದಾನನೀಡುವದರಿಂದ ದಾನದ ಫಲವು ಸಿಗುವದಾದರೂ ದಾನವು ಅಭಿವೃದ್ಧಿ ಹೊಂದಬೇಕಾದರೆ ಶಾಸನವನ್ನು ಹಾಕಿಸಲೇಬೇಕು.[9]

### ೨. ದಾನಿ ಮತ್ತು ದಾನಪಡೆದವರ ವರ್ಣನೆ :

ಕಲ್ಯಾಣಿ ಚಾಲುಕ್ಯರ ದಾನಗಳ ಇನ್ನೊಂದು ಲಕ್ಷಣವೆಂದರೆ ದಾನ ನೀಡುವ ಹಾಗೂ ದಾನ ಪಡೆಯುವವರ ವಿಶೇಷ ವರ್ಣನೆ ಇರುವುದು. ದಾನ ನೀಡುತ್ತಿದ್ದವನ ಕುರಿತು ಅವನ ವಂಶ, ವಂಶಜರ ಸಾಧನೆ, ವಿಶೇಷತೆ, ದಾನಿಯ ವಿಶೇಷಣಗಳನ್ನು ಹೇಳಲಾಗಿದೆ. ಅಂತೆಯೇ ದಾನ ಪಡೆಯಬೇಕಾದರೂ ಕೆಲವು ಅರ್ಹತೆಗಳು ಇರಬೇಕೆಂದು ಧರ್ಮಶಾಸ್ತ್ರಗಳು ಕಟ್ಟಳೆಗಳನ್ನು ವಿಧಿಸುವುದರಿಂದ ಅರ್ಹರಾದವರಿಗೆ ಮಾತ್ರ ದಾನ ನೀಡಲಾಗುತ್ತಿತ್ತು.[11] ಅವಿದ್ವಾನನು, ಡಾಂಭಿಕ, ಮೋಸಗಾರ ವ್ಯಕ್ತಿಯಾಗಿದ್ದವನು ದಾನ ಪಡೆಯಲು ಯೋಗ್ಯನಾಗಿರಲಿಲ್ಲ. ಹಾಗೆಯೇ ದಾನ ನೀಡುವ ವ್ಯಕ್ತಿಯು ವಂಶಪರಂಪರೆಯಿಂದಲೂ ಉತ್ತಮನಾಗಿರಬೇಕು. ಅಂಥವನು ನೀಡಿದ ದಾನವು ಮಾತ್ರವೇ ಸತ್ಪಾತ್ರಕ್ಕೆ ಸಲ್ಲುತ್ತಿತ್ತು. ಈ ದೃಷ್ಟಿಯಿಂದಲೇ ಇರಬೇಕು, ಕಲ್ಯಾಣ ಚಾಲುಕ್ಯರ ಎಲ್ಲ ದಾನಶಾಸನಗಳಲ್ಲೂ ದಾನಿ ಮತ್ತು ದಾನ ಪಡೆದವರ ವರ್ಣನೆ ಕಂಡುಬರುತ್ತದೆ. ಇಲ್ಲಿ ಕೆಲವು ಉದಾಹರಣೆಗಳಿವೆ :

**ದಾನಿಗಳ ವರ್ಣನೆ :**

ಇಮ್ಮಡಿ ಜಯಸಿಂಹನು ರಾಜಧಾನಿ ಹಿರಿಯ ಮೋಸಂಗಿಯಲ್ಲಿದ್ದ ಅವಹಮಲ್ಲನ "ಚಟ್ಟನಾದ" ಕರಿಯಾಯ್ಚಯ್ಯ ಎಂಬುವನಿಗೆ ನೂರು ಮತ್ತರ ಭೂಮಿ ದಾನ ನೀಡುತ್ತಾನೆ. ದಾನನೀಡಿದ ಜಯಸಿಂಹನನ್ನು ಚಕ್ರವರ್ತಿಯ ಬಿರುದುಗಳಿಂದ ವರ್ಣಿಸಿದ್ದಲ್ಲದೆ ಕುಮಾರ ಗಜಕೇಸರಿ ಕೀರ್ತಿ ವಿದ್ಯಾಧರ ಗಂಡರಗಂಡ, ಗಂಡವಂಗಾರ. ಸತ್ಯರತ್ನಾಕರ[12] ಎಂದು ಮುಂತಾಗಿ ವರ್ಣನೆ ಮಾಡಲಾಗಿದೆ. ಸೌದತ್ತಿಯಲ್ಲಿ ಜಿನಾಲಯ ಕಟ್ಟಿಸಿ ದಾನ ನೀಡಿದ ಶಾಂತಿವರ್ಮರಸನನ್ನು ಸಮರವಿಜಯ, ಲಕ್ಷ್ಮಕಾಂತ, ನುಡಿದಂತಿಗಂಡ, ಹಯವಾಕ್ಯರಾಜ, ರೂಪಮನೋಜ ಪರಬಳಸೂರೆಕಾರ, ವೈರಿಭಂಗಾರ ನರಸಂಕಭೀಮ, ಛಲದಂಕರಾಮ ವೈರಿಭೇರುಂಡ ಶರಣಾಗತ ವಜ್ರಪಂಜರ[13] ಎಂದು ಮುಂತಾಗಿ ಬಣ್ಣಿಸಲಾಗಿದೆ. ಅದೇ ಪತ್ತಿಯ ಮತ್ತೂರಿನ ದಂಡಿನಲ್ಲಿದ್ದಾಗ ಸಿಂದೇಶ್ವರ ದೇವರಿಗೆ ಸಾವಿರ ಮತ್ತರ ಭೂಮಿಯನ್ನು ದಾನ ನೀಡಿದ ಸಿಂಥವಂದದ ನಾಗಾದಿತ್ಯನನ್ನು ವೀರವಿಜಯರಾಜ್ಯ ಲಕ್ಷ್ಮೀವಕ್ಷಸ್ಥಳದಿಷ್ಟಿ ವಿಷ ಕುಳತಿಳಕ ಫಣಾಮಣಿಕಿರಣ ನಾಗಧ್ವಜಪ್ರತಾಪ ವಿಜಯ ಪರಿಪೋಷಣ ನನ್ನಿಗಾಶ್ರಯ ರಣರಂಗ ಕೇಸರಿ ಆಶ್ರಿತ ಜನಕಲ್ಪವೃಕ್ಷ ನಲ್ಲರ್ಗೆನಲ್ಲ ಡಾಮರಮಲ್ಲ[14] ಎಂದು ವರ್ಣಿಸಲಾಗಿದೆ.

ಸ್ಮೃತಿಗಳಲ್ಲಿ ಉಕ್ತವಾದ ವಿಚಾರಗಳಿಗೆ ಅನುಗುಣವಾಗಿಯೇ ದಾನ ಶಾಸನಗಳು ಬರೆಯಲ್ಪಟ್ಟಿರುವುದನ್ನು ಕಾಣಬಹುದು . ಶಾಸನಗಳ ಆರಂಭದಲ್ಲಿ ಈ ಹಿಂದಿನ ಅಧ್ಯಾಯದಲ್ಲಿ ಹೇಳಿದಂತೆ ಮಂಗಳಶ್ಲೋಕಗಳು, ರಾಜನವಂಶಾವಳಿ, ಬಿರುದುಗಳು, ಪಠ್ಯಕ್ರಮಗಳು, ನಂತರ ಕಾಲ, ತೇದಿ, ನಂತರ ಸಾಮಂತರ, ಮಹಾಮಂಡಳೇಶ್ವರ ಅಥವಾ ಅಧಿಕಾರವರ್ಗದವರ ದೀರ್ಘವಾದ ವರ್ಣನೆಗಳನ್ನು ಕಾಣಬಹುದಾಗಿದೆ. ದಾನವನ್ನು ನೀಡಿದವನು ಚಕ್ರವರ್ತಿ, ಮಂಡಲಾಧಿಕಾರಿ, ಸಾಮಂತಾಧಿಕಾರಿ ಆಗಿದ್ದರೆ ಇವರ ವರ್ಣನೆ ಬಹುಸುಂದರವಾದ ಉಪಮೆಗಳಿಂದ ಕೂಡಿದೆ. ಇದಾದ ಬಳಿಕ ದಾನ ಕೊಡುತ್ತಿರುವ ದಾನದ ನಿರ್ದೇಶನ ಭಾಗ ಬರುತ್ತದೆ. ಕೊಡುತ್ತಿರುವ ದಾನ ಯಾವುದು ? ಆ ದಾನ ಯಾರಿಗೆ ನೀಡಲಾಯಿತು ? ಎಂಬ ವಿವರಗಳು ಇರುತ್ತವೆ. ಶಾಸನಗಳ ಕೊನೆಯಲ್ಲಿ ಕೊಟ್ಟ ದಾನಗಳು ಮುಂದಿನವರು ಹೇಗೆ ಕಾಪಾಡಬೇಕು ಎಂಬ ನಿರ್ದೇಶನ, ಅದನ್ನು ಸರಿಯಾಗಿ ಸಂರಕ್ಷಿಸಿದರೆ ಇಲ್ಲವೆ ಹಾಳುಮಾಡಿದರೆ ಒದಗುವ ಫಲಗಳು ಉಲ್ಲೇಖವಾಗಿರುತ್ತವೆ. ತಳಕಲ್ ಅಗ್ರಹಾರದ ನಾಗಲೇಶ್ವರ ದೇವಾಲಯಕ್ಕೆ ನಾಲ್ಕುನೂರು ಮತ್ತರ ಭೂಮಿದಾನ ನೀಡಿದ ತೈಲಪನ ಮಹಾಸಾಮಂತ ಶೋಭನರಸನನ್ನು 'ಪ್ರತ್ಯಕ್ಷ ಭೂರಿಶ್ರವ ಹುಸಿಯಿಲ್ಲದಾತ, ನೆರೆವೊಡೆಗಂಡ, ಕದನಪ್ರಚಂಡ, ಕಟಕ ಪ್ರಕಾರ ಗಿರಿದುರ್ಗಮಲ್ಲ ರಣವೀರ'[15] ಎಂದು ವರ್ಣಿಸಲಾಗಿದೆ. ಈ ಶೋಭನರಸನನ್ನು ಬಳಗೇರಿ ಶಾಸನವು[16] ಲೋಕಾಭರಣ, ಸನ್ಮಾನದಾನಿ, ಆಹಾರದಾನಿ ಎಂದು ಹೊಗಳಿದೆ. ಮಹಾಸಾಮನ್ತ ಗೋಣರಸನನ್ನು ಶಾಸನವೊಂದು ಸಾಂತರದಲ್ಲಿ ಅಧಿಕನಾದ ತೇಜೋವಂತನಾಗಿದ್ದ ಗೋಣರಸರನು ಇಟ್ಟಿಗೆಗಳನ್ನು ಒತ್ತೈಸಿ ಕೆರೆಗಳನ್ನು ಕಟ್ಟಿಸಿದನು. ಭಾವಿಗಳನ್ನು ದೇಗುಲಗಳನ್ನು

ತರ್ದನಾಡೊಳಗೆ, ಉದ್ಯಾನಗಳನ್ನು ಕಟ್ಟಿಸಿ ಶಾಶ್ವತನಾಗಿದ್ದನೆಂದು[17] ಉಲ್ಲೇಖಿಸಿದೆ. ಅದೇ ರೀತಿ ಸಿಂಗಗಾವುಂಡನನ್ನು ಸಾಗಳದ ಶಾಸನವು[18] ನ್ಯಾಯನೀತಿ ಅರಿತವನು, ದಯೆದಾನ ತೋರಿದವನು, ದಯಾವಂತ, ಶಿಷ್ಟರತ್ನ, ಅನವರತದಾನಿ, ದಾನಂಭುನಿಧಿ ಪ್ರೌಢಾಂಗನಾ ಮನೋಹರ ಸಾಗಿ ಜನದೂರ ಅರ್ಜುನಾಂಕ ಮುಂತಾಗಿ ಹೊಗಳಿದೆ. ಕಾಸವೊಳೆ 70ರ ಮಹಾಮಂಡಳೇಶ್ವರ ಸೋಮ ಪೆರ್ಮಾಡಿಯನ್ನು ನುಡಿದನ್ತೆಗಣ್ಡ, ಸಮರದನುಜಯ, ವೈರಿಕುಳಾಂತ ಕಮರಿಬಲ ಧೂಮಕೇತು ಎಂದು ಹೇಳಲಾಗಿದೆ. ಅವರೊಂದಿಗೆ ದಾನಕಾರ್ಯದಲ್ಲಿ ಪಾಲ್ಗೊಂಡಿದ್ದ ಅವನ ಹೆಂಡತಿ ಲಕ್ಷ್ಮಬ್ಬರಸಿಯನ್ನು ಪರಮ ಕಲ್ಯಾಣಭ್ಯುದಯ ಸಹಸ್ರಫಳ ಭೋಗಭಾಗಿನಿ ದ್ವಿತೀಯಲಕ್ಷ್ಮೀಸವಣನೆ[19] ಎಂದು ವರ್ಣಿಸಿದೆ.

ಪಲ್ಲವರಾಜ ಪಲ್ಲವ ಪೆರ್ಮಾಡಿದೇವನ ರಾಣಿ ರೇವಲದೇವಿಯು ಕಾಳಪ್ರಿಯದೇವರಿಗೆ ಮತ್ತು ವಿಷ್ಣುದೇವರಿಗೆ ಭೂದಾನ ನೀಡುತ್ತಾಳೆ. ಆಕೆಯನ್ನು ಮಹಾದೇವಿ ದ್ವಿತೀಯ ಲಕ್ಷ್ಮೀಸಮಾನೆ[20] ಎಂದು ವರ್ಣಿಸಿದೆ.

ಮಹಾಮಂಡಳೇಶ್ವರ ಶಾಂತಿವರ್ಮರಸನ ತಾಯಿ ಬಾಹುಬಲಿ ಜಿನಾಲಯಕ್ಕೆ ಭೂದಾನ ನೀಡುತ್ತಾಳೆ. ಆಕೆಯನ್ನು "ಪತಿಭಕ್ತಿಯೊಳಂದಿ ಸಜ್ಜುಕೆಗೆ ನೆಲೆಯಾದ ಮಾಂತನದ ಪೆಂಪು ಸಮಂತಳವಡ್ಡ ನೀಜಿಕಬ್ಬರಸಿ"[21] ಎಂದು ಬಣ್ಣಿಸಲಾಗದೆ.

ಪಾಪೆಕಲ್ಲನು ಆಳುತ್ತಿದ್ದ ಮಹಾಪ್ರಚನ್ಡ ದಂಡನಾಯಕ ಗೆಟೆಯಂಕಕಾರ, ಬ್ರಹ್ಮಾಧೀರಾಜನು ಪಾಪೆಕಲ್ಲಾರೊಡೆಯರಿಗೆ ವ್ಯವಸಾಯದ ಮೇಲೆ ಕೆಲವು ತೆರಿಗೆಗಳನ್ನು ದಾನಮಾಡುತ್ತಾನೆ. ಅವನನ್ನು ತೆಕ್ಕಲಕೋಟೆಶಾಸನ "ಸಮಸ್ತರಾಜ್ಯಭರಣಿ ನಿರೂಪಿತ ಮಹಾಸೇನಾಪತಿಪತಿ ಪತಿ ಬ್ಮತಾಚಾರ್ಯದುಷ್ಟನಿಷ್ಠುರ ಕುಟಿಳ ಕೌಟಿಲ್ಯಕ್ಷುದ್ರವಿದ್ಯಾವನ ವಾಸ್ರಮಾರ್ತಾಂಡ ಪ್ರತ್ಯಕ್ಷ ಚಾಣಕ್ಯ"[22] ಮುಂತಾಗಿ ವರ್ಣಿಸಲಾಗಿದೆ. ಜಗದೇಕಮಲ್ಲ ಜಯಸಿಂಹನ ಅಕ್ಕಾದೇವಿಯನ್ನು ವಾಗ್ದೇವಿ, ಸೀತೆ ಮಹಾದೇವಿ ಭೂದೇವಿಗೆ ಸಮಾನಳೆಂದು ಜಿನಬುದ್ಧ ಅನಂತ ರುದ್ರಾಗಮನಿಗದಿತ ಧರ್ಮಂಗಳಂಮಾಡಿ ಕಯ್ಯಂತನ..... ವ್ರಜಿಕಪ್ಪೆನಿತನನುದಿನಂ ಕೊಟ್ಟು ಸರ್ವ್ವೋರ್ವ್ವಿಯೊಳ್ದಾನ-ನಯಾಳಂಕಾರೆ ರಾರಾಜಿಸಿದಳಖಿಳ ವಿದ್ಯಾರ್ಥಿ ದೀನಾವಳಿ ನನ್ದಿನಯಕ್ಕದೇವಿ ಧರ್ಮಾಗ್ರಣಿ ವಮಲವಚಾಃಹಸ್ರಿ ಜಯಶ್ರೀಯರ್ಶ ಶ್ರೀ ಎಂದು ಶಾಸನದಲ್ಲಿ ವರ್ಣಿಸಲಾಗಿದೆ. ಅಂದರೆ ಜಿನ ಬುದ್ಧ ಅನಂತ ರುದ್ರ ಮುಂತಾದ ಆಗಮಗಳಲ್ಲಿ ತಿಳಿಸಿರುವಂತೆ ಧರ್ಮಗಳನ್ನು ಮಾಡಿ ಬೇಡಿದವರಿಗೆ ನೀಡಿ ಅಖಿಳ ವಿದ್ಯಾರ್ಥಿಗಳಿಗೆ ನಂದಿನಿಮರತಿದ್ದ ಧರ್ಮಾಗ್ರಣಿಯಾಗಿದ್ದಳೆಂದು ಮತ್ತು ದಾನಾಳಂಕಾರ ಎನಿಸಿದ್ದಳು ಎಂದು ಶಾಸನ ಹೊಗಳಿದೆ.

ಅಲ್ಲದೇ ಅಕ್ಕಾದೇವಿಯು 'ದೀನಾನಾಥಚಿನ್ತಾಮಣಿ'ಯೆಂದು 'ಸಾಕ್ಷಾತ್ ಲಕ್ಷ್ಮೀ' ಎಂದು 'ಪರಿಜನ ಕಲ್ಪವೃಕ್ಷ'ಳೆಂದು 'ವಸುಧಾಜನ ಕಾಮಧೇನು' ಎಂದು 'ಗುಣದ ಬೆಡಂಗಿ'[23] ಎಂದು ವರ್ಣಿತಳಾಗಿದ್ದಾಳೆ. ಇಮ್ಮಡಿ ಜಯಸಿಂಹನ ಅತ್ತೆ ರೇವಕನಿಮ್ಮಡಿಯನ್ನು ಕೊಪ್ಪಳದ ಶಾಸನವೊಂದು

ಬಹುವಾಗಿ ವರ್ಣಿಸಿದೆ. ಭೂತುಗ, ಶಂಕರಗೌಡ, ಮಾರಸಿಂಹ, ಮರಳ ಚಾವುಂಡರಾಯ, ಗುಣದಂಕಕಾರ್ತಿ (ಅತ್ತಿಮಬ್ಬೆ) ಇವರೆಲ್ಲರೂ ತೀರಿದ ಬಳಿಕ ಜಿನಧರ್ಮಕ್ಕೆ ರೇವಕನಿಮ್ಮಡಿ ಆಶ್ರಯವನ್ನಿತ್ತು ಅದನ್ನು ಪೋಷಿಸಿದಳೆಂದು ಛಲದಂಕಕಾರ್ತಿಯೆಂದು [25]ಧರ್ಮ ಭಾವನೆಯಲ್ಲಿ ಈಕೆಗೆ ಯಾರೂ ಸಮಾನರಿಲ್ಲವೆಂದು ಹೇಳಲಾಗಿದೆ.

ಅದೇ ರೀತಿಯಾಗಿ ದಾನಕ್ಕೆ ಪ್ರಸಿದ್ಧಳಾಗಿದ್ದ ದಾನಚಿಂತಾಮಣಿ ಎಂಬ ಕೀರ್ತಿಗೆ ಭಾಜನಳಾದ ಅತ್ತಿಮಬ್ಬೆಯನ್ನು ರನ್ನನು ತನ್ನ ಅಜಿತ ತೀರ್ಥಂಕರ ಪುರಾಣದಲ್ಲಿ

**ಬಿಳಿಯರಳೆಯಂತೆ ಗಂಗಾ**
**ಜಳದಂತೆ-ಅಜಿತಸೇನ ಮುನಿಪತಿಯ ಗುಣಾ**
**ವಳಿಯಂತೆ ನೆಗಳ್ದ ಕೊಪಣಾ**
**ಚಳದಂತೆ ಪವಿತ್ರಮಂ ಅತ್ತಿಮಬ್ಬೆಯ ಚರಿತಮಂ**[26]

ಎಂದು ವರ್ಣಿಸಿದ್ದಾನೆ. ಲಕ್ಕುಂಡಿಯ ಶಾಸನವೊಂದು ಜೈನದೇವಾಲಯವನ್ನು ನಿರ್ಮಿಸಿ ಅದಕ್ಕೆ ದಾನಬಿಟ್ಟ ವಿಷಯನ್ನು ತಿಳಿಸುತ್ತಾ ಪಾರ್ವತಿದೇವಿಗೆ ಸಮಾನಳೆಂದು ಮಹಾವಿಜಯಸೇನೆ, ರುಕ್ಮಿಣಿ, ಸತ್ಯಭಾಮೆ, ಸುಲೋಚನೆ ಆರುಂಧತಿ, ರೋಹಿಣಿ ಮುಂತಾದವರೆಲ್ಲರ ಗುಣಗಳನ್ನು ಹೊಂದಿದ್ದ ಈಕೆ ದಾನಚಿಂತಾಮಣಿ[27] ಎಂದು ಶಾಸನ ತಿಳಿಸುತ್ತದೆ. ರೋಹಿಣಿ ಜಯಸಿಂಹನರಾಣಿ ಸೇಮಲದೇವಿಯನ್ನು ದ್ವಿತೀಯ ಲಕ್ಷ್ಮೀ ವಿಶಿಷ್ಟಜನ ಕಾಮಧೇನು, ಆಶ್ರಿತಜನ ಕಲ್ಪಲತೆ[28] ಎಂದು ಉಲ್ಲೇಖಿಸಿದೆ.

ದಂಡನಾಯಕ ಗುಣದಬೆಡಂಗನನ್ನು ಆಶ್ರಿತ ಕಲ್ಪವೃಕ್ಷ, ಪತಿಕಾರ್ಯದಕ್ಷ, ಪತಿಹತಾಂಜನೇಯ, ನೀತಿಪಾರಾಯಣ, ಗಡಿಯಂಕಮಲ್ಲನೆಂದೂ ನಯನಂದಿ ಭಟ್ಟಾರಕರ ಶಿಷ್ಯನೆಂದೂ ಈತ ಮಾತನಾಡಿದುದೆ ಸತ್ಯ ಕೊಟ್ಟದ್ದೆ ದತ್ತಿಯಾಯಿತೆಂದು[29] ಮಾದಿಳ್ದೆ ಶಾಸನ, ಕೊಪ್ಪಳ ಶಾಸನದಲ್ಲಿ ಉಲ್ಲೇಖಿತವಾಗಿದೆ.

ಅಣಬೆಯ ಶಾಸನ ಮಧುಸೂಧನಯ್ಯನಾಯಕ ಎಂಬಾತನನ್ನು ಸಮಸ್ತಗುಣಗಣಾಳಂಕೃತ ಸತ್ಯಸಂಪೂರ್ಣ, ಕಲಿಕಾಲಕರ್ಣ, ವಿಷ್ಣಿಷ್ಟಮುಕುಟ ಸಂಘಟ್ಟಿತ ಪದಯುಗಾಂಭೋಜ ಜಿಯುದತ್ತರಂಗ[30] ಎಂದು ವರ್ಣಿಸಿದೆ. ಮಹಾಮಾತಯ ಪೆರ್ಗಡೆ ಮಾದಿಮಯ್ಯ "ಪ್ರಭಮಂತ್ರೋತ್ಸಾಹ ಶಕ್ತಿತ್ರಯ ಸಂಪನ್ನ ಸಹಾಯಸಿಂಹ[31] ಎಂದು ವರ್ಣಿಸಿದೆ. ಹೀಗೆ ದಾನ ನೀಡಿದ ದಾನಿಗಳನ್ನು ಅನೇಕ ವಿಶೇಷಣಗಳಿಂದ ಶಾಸನಗಳಲ್ಲಿ ವರ್ಣಿಸಲಾಗಿದೆ.

**ದಾನಪಡೆದವರ ವರ್ಣನೆ :**

ದಾನಿಗಳನ್ನು ಶಾಸನಗಳಲ್ಲಿ ವರ್ಣಿಸಿದಂತೆ ದಾನ ಪಡೆದವರನ್ನು ಕೂಡ ವರ್ಣನೆ ಮಾಡಲಾಗಿದೆ. ದಾನ ನೀಡುವುದಕ್ಕೂ ಮತ್ತು ಪಡೆಯುವದಕ್ಕೂ ಶೀಲ ಸಂಪನ್ನತೆ ಇರಬೇಕೆಂಬುದು ಅಂದಿನ ಸಾಮಾನ್ಯರ ಪರಿಕಲ್ಪನೆಯಾಗಿತ್ತು ಎಂದು ತೋರುತ್ತದೆ.

ಬಹುಸಂಖ್ಯಾತ ದಾನಗಳು ದೇವರಿಗೆ ಮತ್ತು ಬ್ರಾಹ್ಮಣರಿಗೆ ನೀಡಲ್ಪಟ್ಟಿವೆ. ಇವುಗಳನ್ನು ದೇವದಾಯ ಮತ್ತು ಬ್ರಹ್ಮದೇಯ[32] ಎಂದು ಕರೆಯಲಾಗಿದೆ. ಬ್ರಾಹ್ಮಣರಿಗೆ ದಾನ ನೀಡಿದಾಗ ಅಂಥವರನ್ನು ವಿಶೇಷವಾಗಿ ವರ್ಣಿಸಿರುವದನ್ನು ಶಾಸನಗಳಲ್ಲಿ ಕಾಣಬಹುದಾಗಿದೆ. ಅವುಗಳನ್ನು ಈ ಕೆಳಗಿನಂತೆ ಗಮನಿಸಬಹುದಾಗಿದೆ. ಸಾಮಾನ್ಯವಾಗಿ "ಯಮ-ನಿಯಮ-ಸ್ವಾಧ್ವಾಯ-ಧ್ಯಾನ-ಧಾರಣ-ಮೋನಾನುಷ್ಠಾನ ಪರಾಯಣ ಸಮಾಧಿಸಂಪನ್ನ"[33] ಈ ವಿಶೇಷಣ ಬಹಳಷ್ಟು ಬ್ರಾಹ್ಮಣರಿಗೆ ಅನ್ವಯಿತವಾಗಿದೆ. ಅದರ ಜೊತೆಗೆ ಇನ್ನಿತರ ಕೆಲವು ಭಿನ್ನ ವರ್ಣನೆಗಳು ಕಂಡು ಬರುತ್ತವೆ.

ಇಮ್ಮಡಿ ತೈಲಪನು ಕ್ರಿ.ಶ 973ರಲ್ಲಿ ಯಜ್ಞಮಾಡಿ ಯಜ್ಞ ನೆರವೇರಿಸಿದ ಬ್ರಾಹ್ಮಣರಿಗೆ ಗ್ರಾಮದಾನ ನೀಡುತ್ತಾನೆ. ಈ ದಾನವನ್ನು ಪಡೆದ ಸೋಮಯಾಜಿ ಪಂಡಿತನನ್ನು "ಕಾಶ್ಯಪಗೋತ್ರ ಪವಿತ್ರರಪ್ಪರೈಕೆಯಧ್ವೈರಿ ಚಟ್ಟೋಪಾಧ್ಯಾಯ ಸೋಮಯಾಜಿ"[34] ಎಂದು ಶಾಸನ ವರ್ಣಿಸಿದೆ.

ದಾನಪಡೆದ ಆಚಾರ್ಯರಲ್ಲಿ ವಿಶೇಷವಾಗಿ ಅವರ ಗುರುಗಳ ಸಮೇತ ಶಾಸನಗಳಲ್ಲಿ ಉಲ್ಲೇಖವಿದೆ. ಮಹಾಸಮಸ್ತ ಸೋಭನರಸನು ಅಗ್ರಹಾರ ತಳಕಲ್ಲ ಗ್ರಾಮದಲ್ಲಿ ನಾಗಲೇಶ್ವರ ದೇವಾಲಯಕ್ಕೆಂದು ಭೂಮಿದಾನ ಮಾಡುತ್ತಾನೆ. ಈ ದಾನವನ್ನು ಅಮೃತರಾಶಿ ಮುನೀಶ್ವರನ ಕೈಯಲ್ಲಿ ನೀಡಲಾಗಿದೆ. ಈ ಅಮೃತರಾಶಿ ಮುನೀಶ್ವರನನ್ನು "ಸಂಕರಾಶಿಭಳಾರರ ಶಿಷ್ಯ ಹರಿಣ ಧರಧರನಚರಣಾಂಚರುಹಾಳಿಗಳ ಘಮದೇಥ ವೈರಿಗಳಾರ್ಗಂ ಪರಿಯವರೆನಿಸೆದರ್ದ್ಧರೆ ಯೊಳ್ನೆಗರರ್ದ್ದರ"[35] ಎಂದು ಬಣ್ಣನೆ ಮಾಡಲಾಗಿದೆ. ದಂಡನಾಯಕ ತಿಕಣ್ಣಿನಿಂದ ಶಿವಪುರ ಗ್ರಾಮವನ್ನು ದಾನವಾಗಿ ಪಡೆದ ಕೋಗಳಿಯಿನ್ನೂರರ ಮಠಾಧಿಪತಿಗಳಾದ ಸೋಮೇಶ್ವರ ಪಂಡಿತರ ವರ್ಣನೆಯನ್ನು ಮೊರಿಗೇರಿ ಶಾಸನವು "ಸ್ವಸ್ತಿಸಂಸಾರ ಪಾರಾವಾರ ಮದಜಳ ಮಹಾಪ್ರಯಾಸೋತ್ತುಂಗ ತರಂಗಭಂ ಭಗ್ನಮನ್ನಾನೇಕ ಪ್ರಾಣಿಜಾತಿ ಕರಿಮಕರ ತಿಮಿತಿಮಿಂಗಿಳ ಪ್ರಭೃತಿ ಪ್ರಕ್ಷುಭಿತಾವರ್ತ್ತಗರ್ತಾಂತಃ ಪತೀತ ಶಿವಾನುಗ್ರಹೀತ ಶಿಷ್ಟಜನೋತ್ತರಣ ಕರಣ ಸಾಮರ್ತ್ಥೋಪೇತ ಪುರಂದರ ಬರ್ಲದ ಮಾರವಂದನಂದನ ದಿನ್ಯಾಮುನಿ ಬೃಂದವಂದಿತ ಸುಮದರ ಚರಣಾರದಿಂದ ಶ್ರೀಮಲ್ಲ ಕುಳೀಶ ಮುಖ ಕಮಳ ವಿನಿರ್ಗ್ಗತ ಶಕಳಶಾಸ್ತ್ರಾರ್ತ್ಥಸದ್ಭಾವಾಭಿಜ್ಞರ್! ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರಧ್ಯಾನಧಾರಣ ಜಪಸಮಾಧಿಸಂಪನ್ನರಪ್ಪ ..............ಶ್ರೀಮತ್ಸೋಮೇಶ್ವರ ಪಂಡಿತರ್....[36] ಎಂದು ಬಹುಸುಂದರವಾಗಿ ಬಣ್ಣಿಸಿದೆ. ಹೀಗೆ ದಾನಕ್ಕೆ ಯೋಗ್ಯರಾದ ವ್ಯಕ್ತಿಗಳ ವರ್ಣನೆ ವಿಶೇಷವಾಗಿ ದಾನಶಾಸನಗಳಲ್ಲಿ ಕಂಡು ಬರುತ್ತದೆ. ಕೆಲವು ಉದಾಹರಣೆಗಳನ್ನು ಮಾತ್ರ ಇಲ್ಲಿ ನೀಡಲಾಗಿದೆ. ಪ್ರತಿಯೊಂದು ದಾನಶಾಸನದಲ್ಲಿಯೂ ದಾನ ಪಡೆದವನ ಕುರಿತು ಒಂದಿಲ್ಲೊಂದು ವಿಶೇಷಣ ಇದ್ದೇ ಇರುತ್ತದೆ.

೩. ದಾನದ ಸಂದರ್ಭ :

ದಾನಕ್ಕೆ ಒಂದು ಕಾರಣ ಬೇಕು. ಇನ್ನು ಅನೇಕ ಸಂದರ್ಭಗಲ್ಲಿ ಒಳ್ಳೆಯದಿನ, ನಕ್ಷತ್ರ, ತಿಥಿ, ವಾರ, ಗ್ರಹಣ, ಜಾತ್ರೆ, ಉತ್ಸವ ಇತ್ಯಾದಿ ಬೇರೆಬೇರೆ ಸಂದರ್ಭಗಲ್ಲಿ ದಾನ ನೀಡಿರುವುದನ್ನು

ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ದಾನ ನೀಡುವುದಕ್ಕೂ ಮತ್ತು ಪಡೆಯುವದಕ್ಕೂ ಒಂದು ಪುಣ್ಯಕಾಲ ಅವಶ್ಯವಾಗಿತ್ತು. ಜ್ಯೋತಿಷ್ಯ, ಪಂಚಾಂಗ, ಮುಂತಾದವುಗಳನ್ನು ಬಹುಕಟ್ಟುನಿಟ್ಟಾಗಿ ಅನುಸರಿಸುತ್ತಿದ್ದ ಕಾಲವದು. ಹೀಗಾಗಿ ಉತ್ತಮನಕ್ಷತ್ರ, ತಿಥಿ, ವಾರಗಳಿರುವ ಸಂದರ್ಭಗಳಲ್ಲಿ ನೀಡಲಾಗಿದೆ. ಪಂಚಮಿ, ಸಂಕ್ರಾಂತಿ, ಸೂರ್ಯಗ್ರಹಣ, ಚಂದ್ರಗ್ರಹಣ, ಶ್ರಾವಣಮಾಸ ಮುಂತಾದ ದಿನಗಳಲ್ಲಿ ಹೆಚ್ಚಿನ ದಾನಗಳನ್ನು ನೀಡಿರುವದು ಶಾಸನಗಳಲ್ಲಿ ಕಂಡುಬರುತ್ತದೆ. ಅನೇಕ ದಾನಗಳು ಪುಣ್ಯದಿನಗಳು ಬಂದ ಕಾರಣಕ್ಕಾಗಿಯೇ ನೀಡಲ್ಪಟ್ಟಿವೆ. ಸಂಕ್ರಾಂತಿಗಳಂದು ದಾನ ಬಿಟ್ಟ ಉದಾಹರಣೆಗಳು ಸಾಕಷ್ಟು ಸಂಖ್ಯೆಯಲ್ಲಿವೆ. ಪ್ರಭುವನಮಲ್ಲದೇವನ ಮಹಾಮಂಡಳೇಶ್ವರ ಆಲಂಪುರದ ಬ್ರಹ್ಮೇಶ್ವರ ಸೇವೆಗೆ ಪೂಲಿನೂರ ಗ್ರಾಮವನ್ನು ಕರ್ಕಾಟಕ ಸಂಕ್ರಾಂತಿಯಂದು ದಾನ ಬಿಡುತ್ತಾನೆ.[37] ಅದೇ ರೀತಿ ಮಹಾಮಂಡಳೇಶ್ವರ ಸಿಂದಕುಲದ ಬಾಚರಸನು ಅಗ್ರಹಾರ ಮುಕ್ಕುನ್ದೆಯಲ್ಲಿ ದೇವಾಲಯ ಕಟ್ಟಿಸಿ ಅದಕ್ಕೆ ಭೂದಾನ,ನಿವೇಶನ,ಹೂದೋಟ, ಗಾಣಗಳನ್ನು ಉತ್ತರಾಯಣ ಸಂಕ್ರಾಂತಿಯಂದು ದಾನ ನೀಡುತ್ತಾನೆ. ಹೀಗೆ ಇನ್ನೂ ನೂರಾರು ಸಂಖ್ಯೆಯಲ್ಲಿ ಸಂಕ್ರಾಂತಿಯ ನಿಮಿತ್ತ ದಾನ ಬಿಟ್ಟ ಉಲ್ಲೇಖಗಳಿವೆ.[38]

ಗ್ರಹಣದ ದಿನ ಒಂದು ವಿಶೇಷ ದಿನವೆಂಬ ಭಾವನೆ ನಮ್ಮ ಇತಿಹಾಸದುದ್ದಕ್ಕೂ ಮುಂದುವರಿದುಕೊಂಡು ಬಂದಿದೆ. ಸೂರ್ಯಗ್ರಹಣ ಮತ್ತು ಚಂದ್ರಗ್ರಹಣಗಳಂದು ದಾನ ನೀಡುತ್ತಿದ್ದರು ಎಂಬುದನ್ನು ನೂರಾರು ದಾನ ಶಾಸನಗಳು ಉಲ್ಲೇಖಿಸುತ್ತವೆ. ಆರನೆಯ ವಿಕ್ರಮಾದಿತ್ಯನ ಯುವರಾಜ ಜಯಸಿಂಹದೇವನು ಸೂರ್ಯಗ್ರಹಣ ನಿಮಿತ್ತ ಚಿಲ್ಲೂರಿನ ಪಿರಿಯನಕರೇಶ್ವರದೇವರ ಸೇವೆಗೆ ಹಣದಾನ ಮಾಡುತ್ತಾನೆ.[39] ಸೋಮಯಾಜಿ ಎಂಬ ಪಂಡಿತನು ಸೂರ್ಯಗ್ರಹಣದಂದು ಸೋಮಯಾಗವನ್ನು ಮಾಡಿ ವಿಷ್ಣುದೇವಾಲಯಕ್ಕೆ ಹಲವು ದತ್ತಿಗಳನ್ನು ಬಿಡುತ್ತಾನೆ.[40] ಹಾಗೆಯೇ ಚಂದ್ರಗ್ರಹಣದಂದು ಹಲವರು ದಾನ ಬಿಟ್ಟ ಉಲ್ಲೇಖಗಳು ಸಿಗುತ್ತವೆ. ತ್ರಿಭುವನಮಲ್ಲನ ಮಾಂಡಳಿಕ ಪೆರ್ಮಾಡಿದೇವನು ಚಂದ್ರಗ್ರಹಣದಂದು ಭಲ್ಲುಂಕೆಯ ತ್ರೈಪುರುಷದೇವರ ಸೇವೆಗೆ ಭೂಮಿ, ಗಾಣ, ಗದ್ಯಾಣಗಳನ್ನು ದಾನ ಬಿಡುತ್ತಾನೆ.[41] ಮಹಾಮಂಡಳೇಶ್ವರ ಆನೆಮರಸನು ಚಂದ್ರಗ್ರಹಣ ನಿಮಿತ್ತ ಕರಮಡಿಯ ಪ್ರಭುಮೂಲಿಗನಿಗೆ ಮೂರುಮತ್ತರು ಭೂಮಿ, ಒಂದು ನಿವೇಶನವನ್ನು ದಾನ ಬಿಡುತ್ತಾನೆ.[42] ಹೀಗೆ ನೂರಾರು ಶಾಸನಗಳು ಗ್ರಹಣ ಸಂದರ್ಭದಲ್ಲಿ ದಾನ ಬಿಟ್ಟುದುದನ್ನು ತಿಳಿಸುತ್ತವೆ.

ಸರ್ವಜ್ಞ ಚಕ್ರವರ್ತಿ ಸೋಮೇಶ್ವರ 'ಮಾನಸೋಲ್ಲಾಸ' ದಲ್ಲಿ ಬಾವಿ ತೋಡಿಸುವುದು. ನಿಧಿಗಾಗಿ ನೆಲ ಅಗಿಯುವುದು. ದ್ಯೂತ ಹಾಗೂ ಗಣಿತ, ಅಗ್ಗಿಷ್ಟಿಕೆ, ಅರವಟ್ಟಗೆ, ಧರ್ಮಛತ್ರ, ಭೋಜನಶಾಲೆ. ಮಠ–ಮಂದಿರಗಳ ನಿರ್ಮಾಣ ಹಾಗೂ ದೇವಾಲಯಗಳ ಜೀರ್ಣೋದ್ಧಾರ ಮತ್ತು ದಾನ–ದತ್ತಿಗಳನ್ನು ಬಿಡುವ ಕಾರ್ಯಗಳು ಅಧೋಮುಖ ನಕ್ಷತ್ರಗಳಲ್ಲಿ ನಡೆಯಬೇಕೆಂದು ಹೇಳುತ್ತಾನೆ. ಇದರಿಂದ ದಾನಿಗೂ ಮತ್ತು ದಾನ ಪಡೆಯುವವನಿಗೂ ಉತ್ತಮ ದಾನಫಲಗಳು ಲಭಿಸುತ್ತವೆ ಎಂಬುದು ಅಂದಿನ ನಂಬಿಕೆ. ಇಂದಿಗೂ ಸಹ ಭಾರತೀಯರಲ್ಲಿ ಈ ನಂಬಿಕೆ

ಗಾಢವಾಗಿದೆ. ಯಾವುದೇ ಒಂದು ಒಳ್ಳೆಯ ಕಾರ್ಯವನ್ನು ಮಾಡಬೇಕಾದರೂ ವಾರ, ತಿಥಿ, ಕಾಲಗಳನ್ನು ನೋಡುವುದು ಸರ್ವವ್ಯಾಪಿಯಾಗಿದೆ. ಜ್ಯೋತಿಷ್ಯ,ಪಂಚಾಂಗಗಳನ್ನು ಆಶ್ರಯಿಸಿ ಗುಳಿಕಾಲ, ಯಮಗಂಡಕಾಲಗಳನ್ನು ಗಣನೆಗೆ ತೆಗೆದುಕೊಳ್ಳುವುದು ಮತ್ತು ಒಳ್ಳೆಯ ಕಾಲವೆಂದು ನಂಬಿದ ಅವಧಿಯಲ್ಲಿಯೇ ಕಾರ್ಯಗಳನ್ನು ಪ್ರಾರಂಭಿಸುವುದನ್ನು ಇಲ್ಲಿ ನೆನೆಯಬಹುದು. ಹಾಗೆಯೇ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನೀಡಿದ ದಾನ-ದತ್ತಿಗಳಲ್ಲಿ, ಸಾಮಾಜಿಕ ಕಾರ್ಯಗಳಲ್ಲಿ ಪುಣ್ಯಕಾಲಗಳ ಗಾಢ ಪ್ರಭಾವ ಕಾಣುತ್ತೇವೆ. ಅದೇ 'ಮಾನಸೋಲ್ಲಾಸ'ದಲ್ಲಿ ಹೇಳಿದಂತೆ ಪೂರ್ವಾಷಾಢ, ಪೂರ್ವಭಾದ್ರಪದ, ಪೂರ್ವವಿಶಾಖಾ, ಕೃತ್ತಿಕಾ, ಭರಣಿ, ಆಶ್ಲೇಷಾ, ಮಘ ಹಾಗೂ ಮೂಲಾ ಇವು ಅಧೋಮುಖ ನಕ್ಷತ್ರಗಳಾಗಿದ್ದು ಆ ಸಂದರ್ಭದಲ್ಲಿ ಒಳ್ಳೆಯ ಕಾರ್ಯಗಳ ಆರಂಭ ಮಾಡಬೇಕು.[44]

'ಹುಣ್ಣಿಮೆ ಆದಿತ್ಯವಾರಮುಂ ಸಂಕ್ರಾಂತಿಯುಂ ವ್ಯತಿಪಾತಮುಂ ಕೂಡಿದ ಪುಣ್ಯದಿನದಂದು' ಮಹಾಮಾತ್ಯ ಪೆರ್ಗ್ಗಡೆ ಸೋಮನಾಥಯ್ಯನು ಕಲ್ಕೇರಿಯ ಕೆರೆಯ ಸೋಮೇಶ್ವರ ದೇವರಿಗೆ ವಿವಿಧ ವಸ್ತುಗಳ ಮೇಲಿನ ಸುಂಕಗಳನ್ನು ದಾನಬಿಟ್ಟನೆಂದು ಕಲ್ಕೇರಿಯ ಶಾಸನ ತಿಳಿಸುತ್ತದೆ.[45] ಅಮವಾಸ್ಯೆ, ಶುಕ್ರವಾರ, ಸೂರ್ಯಗ್ರಹಣ ವ್ಯತಿಪಾತ ಮುಂತಾದವು ಸೇರಿದ ಪುಣ್ಯದಿನದಂದು ಚಾಳುಕ್ಯ ತ್ರಿಭುವನಮಲ್ಲದೇವನು ವಾಜಪೇಯಯಾಗವನ್ನು ಮಾಡಿ ಹಲವು ದಾನಗಳನ್ನು ಮಾಡಿದನೆಂದು ಕವಲೂರು ಶಾಸನ ತಿಳಿಸಿತ್ತದೆ.[46] ಹೀಗೆ ಹಲವು ಶಾಸನಗಳು 'ವ್ಯತಿಪಾತ ಕೂಡಿದ ಪುಣ್ಯದಿನದಂದು' ದಾನಮಾಡಿದ ವಿವರಗಳನ್ನು ತಿಳಿಸುತ್ತವೆ.ಇದನ್ನು ಗಮನಿಸಿದಾಗ ಕೆಲವು ಪ್ರಮುಖ ವಾರ,ತಿಥಿ, ಸಂವತ್ಸರ, ಸಂಕ್ರಾಂತಿ, ಗ್ರಹಣಗಳು ಒಟ್ಟಿಗೆ ಸೇರಿದ ಶುಭದಿನಗಳಂದು ದಾನ-ಧರ್ಮ ಕಾರ್ಯಗಳನ್ನು ನೆರವೇರಿಸುತ್ತಿದ್ದರೆಂದು ತಿಳಿದುಬರುತ್ತದೆ.

## ೪. ದಾನದ ಸ್ಪಷ್ಟತೆ :

ಕಲ್ಯಾಣ ಚಾಲುಕ್ಯರ ದಾನಗಳಲ್ಲಿ ಸ್ಪಷ್ಟತೆಯಿದೆ. ಯಾರು ಯಾರಿಗೆ ಯಾವಕಾಲದಲ್ಲಿ ದಾನಮಾಡಿದರು ಎಂಬುವುದನ್ನು ಸ್ಪಷ್ಟಪಡಿಸುವಂತೆಯೇ ಏನನ್ನು ದಾನ ನೀಡಲಾಯಿತು ? ದಾನ ನೀಡಲ್ಪಟ್ಟ ಭೂಮಿ, ಹಣ, ವಸ್ತುಗಳ ಪ್ರಮಾಣವೆಷ್ಟು? ಎಂಬುದನ್ನು ಸ್ಪಷ್ಟಪಡಿಸಲಾಗಿದೆ. ಭೂಮಿಯನ್ನು ದಾನ ನೀಡಿದ್ದರೆ; ದಾನನೀಡಲ್ಪಟ್ಟ ಭೂಮಿಯ ಸೀಮೆ, ಭೂಮಿಯ ವಿಧ, ಭೂಮಿಯನೆಲೆ ಮುಂತಾದವುಗಳನ್ನು; ತೋಟ ದಾನ ಮಾಡಿದ್ದರೆ, ತೋಟದಲ್ಲಿದ್ದ ಗಿಡಮರಗಳ ಸಂಖ್ಯೆ, ತೋಟದ ಪ್ರಮಾಣ, ಹಣದಾನ ಮಾಡಿದ್ದರೆ, ಗದ್ಯಾಣ, ಪಣ, ದ್ರಮ್ಮ, ಹಾಗ, ವೀಸ, ಕಾಣಿ ಮುಂತಾದವುಗಳನ್ನು ಹೇಳಲಾಗಿದೆ. ದೇವಾಲಯದ ವಿವಿಧ ಸೇವಾಕಾರ್ಯಗಳಿಗೆ ಭೂದಾನ ನೀಡಿದ್ದಾಗ, ಅಂಗಭೋಗ, ರಂಗಭೋಗ, ತಳವೃತ್ತಿ, ನೃತ್ಯ, ಗೀತ, ವಾದ್ಯ, ಧೂಪ, ನೈವೇದ್ಯ, ಗಂಧ ಮೊದಲಾದವುಗಳಿಗೆ ಎಷ್ಟೆಷ್ಟು ಭೂಮಿಯನ್ನು ವಿನಿಯೋಗಿಸಬೇಕೆಂಬುದನ್ನು ಹೇಳಲಾಗಿದೆ. ಸುಂಕದಾನ ಮಾಡಿದ್ದರೆ, ಯಾವ ಯಾವ ವಸ್ತುಗಳ ಮೇಲಿನ ಸುಂಕವೆಂಬುದನ್ನು

ಹೇಳುವುದರ ಜೊತೆಗೆ ಅವುಗಳಿಂದ ಬರುವ ಸುಂಕದ ಪ್ರಮಾಣ, ಅದನ್ನು ನಿಗದಿತವಾಗಿ ವರ್ಷಕ್ಕೆ, ತಿಂಗಳಿಗೆ, ಇಂತಿಷ್ಟು ಎಂದು ನಿಗದಿಪಡಿಸಲಾಗಿದೆ. ಪ್ರತಿವರ್ಷ ಅಥವಾ ಕಾಲಕಾಲಕ್ಕೆ ದೇವಾಲಯಕ್ಕೆ ಅಥವಾ ಬೇರೆ ಯಾವುದಕ್ಕಾದರೂ ದಾನ ಕೊಡಲು ಒಪ್ಪಿಕೊಂಡಿದ್ದರೆ, ಅಂಥವರಿಂದ ದಾನದ ವಸ್ತುಗಳನ್ನು ಸಂಗ್ರಹಿಸಲು ವ್ಯಕ್ತಿಗಳನ್ನು ನೇಮಿಸಿ ಅವರ ಕಾರ್ಯವನ್ನು ಸ್ಪಷ್ಟಪಡಿಸಲಾಗಿದೆ. ಹೀಗೆ ಯಾವುದೇ ರೀತಿ ಗೊಂದಲಕ್ಕೆಡೆಯಿಲ್ಲದಂತೆ ಎಲ್ಲ ವಿಚಾರಗಳನ್ನು ಹೇಳಲಾಗಿದೆ. ಇಲ್ಲಿ ಕೆಲ ಉದಾಹರಣೆ ನೀಡಲಾಗಿದೆ.

ತ್ರಿಭುವನಮಲ್ಲನ ರಾಣಿ ಪದುಮಲದೇವಿಯು ವಾಂಗೋಳ ಅಗ್ರಹಾರವನ್ನು ಆಳುತ್ತಿರುವಾಗ, ಅಲ್ಲಿನ ಮಹಾಜನರಿಗೆ, ದೇವಾಲಯಕ್ಕೆ ಭೂದಾನ ಮತ್ತು ಹಣದಾನಗಳನ್ನು ಮಾಡುತ್ತಾಳೆ. ದಾನ ನೀಡಿದ ಭೂಮಿಯನ್ನು ಸ್ಪಷ್ಟವಾಗಿ ಯಾರಿಗೆ ಎಷ್ಟೆಷ್ಟು ನೀಡಲಾಗಿದೆ. ಅದರ ನೆಲೆ, ಭೂಮಿಯ ವಿಧ ಮುಂತಾದವುಗಳನ್ನು ಹೇಳಲಾಗಿದೆ.[47] ಅದು ಹೀಗಿದೆ–

'ವಾಂಗೋಳದಶ್ರೀನಾರಸಿಂಘದೇವರಿಗೆಸ್ನಾನನಿವೇದ್ಯಕ್ಕೆ, ಅಂಗಭೋಗಕ್ಕೆ ಸರ್ವಬಾಧಾ–ಪರಿಹಾರವಾಗಿ ಬಿಟ್ಟ ಭೂಮಿ ಎಂತೆಂದರೆ–

ಶ್ರೀನಾರಸಿಂಘದೇವರಿಗೆ ಪುಳಿಯಮನಾಯಕರು ಬಿಟ್ಟ ದೇವರ ಮೂಡಣ ಆಳಿಕೆಯ – ಮತ್ತರು ೮

– ಸವಡಿಪುಣಿಸೆಯ ಮಣಲಕೆಯ – ಮತ್ತರು ೨

ಒಟ್ಟು ಮತ್ತರು ೧೦

– ಬಿದಿರಪಳ್ಳಿಯ ಊರಡೆಯ ಪ್ರಮುಖ ೧೨೦ ಮಹಾಜನರಿಗೆ

– ಪೊಂಗೆ ಇರ್ಪ್ಪಣ ವ್ರಿದ್ಧಿಯಲು ಕೊಟ್ಟ –ಗದ್ಯಾಣ ೨೫

– ಬಲದೇವಘ್ಯೆಸಾಸದ ಬಿಟ್ಟ ಬಳ್ಗಲಲ್ಲಿಯ ಕೆಂಗಾಡು ಭೂಮಿ –೨ ಮತ್ತರು.

ಚಿಕ್ಕಗವುಂಡಕೆರೆಯೊಳಗೆ ಮರಳು ಭೂಮಿ –೩ ಮತ್ತರು

ಉತ್ತಮ ಭೂಮಿ(ಮಾನಿ) –೧ ಮತ್ತರು

ಅಂಬಿಯಗೊಳದಲ್ಲಿ –೧ ಮತ್ತರು

**ಒಟ್ಟು ೭ ಮತ್ತರು ಭೂಮಿ**

ಮಹಾಸಾಮಂತ ಪ್ರಭುಬಿಲ್ಲಮರಸನು ಕೊಂಡಗುಳಿಯಲ್ಲಿ ಶ್ರೀಮಲ್ಲಿಕಾರ್ಜುನ ದೇವರ ಲಿಂಗಪ್ರತಿಷ್ಠೆಮಾಡಿ ದೇವರಿಗೆ ಮತ್ತು ಅಲ್ಲಿರುವ ತಪೋಧನರಿಗೆ ಭೂದಾನ ಬಿಟ್ಟಿದ್ದು, ಅದರ ವಿವರ ಹೀಗಿದೆ. ಮಲ್ಲಿಕಾರ್ಜುನದೇವರ ಮಠದಲ್ಲಿ ಉಣ್ಣುವ ತಪೋಧನರ ಆಹಾರಕ್ಕೆ ಊರಿಂದ ಪಶ್ಚಿಮದ ಹೊಲದಲ್ಲಿ ಮಾದಿಅರಸನ ಮಾನ್ಯದ(ಉತ್ತರ) ದಿಕ್ಕಿಗೆ ಸರ್ವನಮಸ್ಯವಾಗಿ ಧಾರಾಪೂರ್ವಕವಾಗಿ ಬಿಟ್ಟ-ಮೊರಟನ ಕೋಲ ಮತ್ತರು.[48] ಹೆಬ್ಬಾಗಿಲಿನ ಮಗ್ಗುಲಿನಿಂದ ದಾರಿಯಿಂದ ಉತ್ತರಕ್ಕೆ ಅದರ ಮಗ್ಗಲಿಗೆ ಪೂರ್ವಕ್ಕೆ ಊರು. ದಕ್ಷಿಣ ದೇವರಪರಿಸೂತ್ರದಿಂದ

ಉತ್ತರದ ಬಾಗಿಲುಕಾಯುವವರ ಮನೆ ಹೊರಗಾಗಿ ದೇವರಿಗೆ ಸರ್ವನಮಸ್ಯವಾಗಿ ಬಿಟ್ಟ ಕೇರಿ(ಓಣಿ).ಇಲ್ಲಿ ದೇವರಿಗೆ ಊರಿನ ಕೇರಿಯನ್ನು ದಾನವಾಗಿ ಬಿಡಲಾಗಿದೆ. ಆ ಕೇರಿಯಲ್ಲಿ ಬರುವ ಎಲ್ಲ ಸುಂಕ ದೇವರಿಗೆ ಸಲ್ಲಬೇಕೆಂದು ಹೇಳಲಾಗಿದೆ. ಅಲ್ಲಿ ಮಾರಾಟವಾಗುವ ವಸ್ತುಗಳ ಮೇಲೆ ಎಷ್ಟು ಸುಂಕವನ್ನು[49] ಆಕರ ಮಾಡಿಕೊಳ್ಳಬೇಕೆಂಬುದನ್ನು ಶಾಸನದಲ್ಲಿ ವಿವರವಾಗಿ ಹೇಳಲಾಗಿದೆ.

ಹೀಗೆ ಭೂದಾನ ಹಣದಾನ ಸುಂಕದಾನ ಮುಂತಾದ ದಾನಗಳನ್ನು ದೇವಾಲಯಕ್ಕೆ ವ್ಯಕ್ತಿಗಳಿಗೆ ನೀಡಿದ್ದು ಯಾರಿಗೆ ಎಷ್ಟೆಷ್ಟು ಸಲ್ಲಬೇಕೆಂಬುದನ್ನು ಸಂದೇಹಕ್ಕೆಡೆಯಿಲ್ಲದಂತೆ ಶಾಸನಗಳಲ್ಲಿ ಸ್ಪಷ್ಟವಾಗಿ ನಿರೂಪಿಸಲಾಗಿದೆ.

## ೫. ಪ್ರಮುಖ ವ್ಯಕ್ತಿಗಳ ಸಮ್ಮುಖದಲ್ಲಿ ದಾನ ನೀಡುವದು :

ದಾನಪದ್ದತಿಯಲ್ಲಿ ದೇವಾಲಯಕ್ಕೆ ಮಠಕ್ಕೆ ಅಥವಾ ಇನ್ನಾವುದೇ ಕಾರ್ಯಕ್ಕೆ ದಾನಬೀಡುವಾಗ ದಾನಪಡೆಯುವ ಹಾಗೂ ದಾನಿಯ ನಡುವೆ ಸಾಕ್ಷಿಗೆಂಬಂತೆ ಊರಿನ ಮಹಾಜನರನ್ನು, ಹಿರಿಯರನ್ನು ಊರಿನ ಒಡೆಯ, ಸಾಮಂತ, ಇಲ್ಲವೇ ಯಾವನೋ ಒಬ್ಬ ಅಧಿಕಾರಿಯ ಉಪಸ್ಥಿತಿಯಲ್ಲಿ ದಾನಬಿಡುವ ಪರಿಪಾಠ ಶಾಸನಗಳಲ್ಲಿ ಗೋಚರಿಸುತ್ತದೆ. ಕೆಲವು ಸಂದರ್ಭಗಳಲ್ಲಿ ಯಾರ ಸಮ್ಮುಖವನ್ನು ಬಯಸದೇ ನೇರವಾಗಿ ದೇವರನ್ನೇ ಪ್ರಮುಖ ಸಾಕ್ಷಿಯಾಗಿಟ್ಟುಕೊಂಡು ದಾನ ಬಿಡಲಾಗುತ್ತಿತ್ತು. ಹೀಗೆ ಮಧ್ಯಸ್ಥಿಕೆ ಅಥವಾ ಸಾಕ್ಷಿಯನ್ನಾಗಿ ಇಟ್ಟುಕೊಂಡು ದಾನ ಬಿಡುವುದು, ಇನ್ನೂ ಕೆಲಸಲ ದೈವವನ್ನೆ ಸಾಕ್ಷಿಯಾಗಿಸಿ ದಾನ ಬಿಡುವುದು ವಿಶೇಷವಾಗಿದೆ. ದಾನದ ದುರುಪಯೋಗವಾಗದಂತೆ ಮತ್ತು ಅದನ್ನು ಬೇರೆಯವರು ಅಪಹರಿಸದಂತೆ ನೋಡಿಕೊಳ್ಳುವುದು ಹಾಗೂ ದಾನಪಡೆದು ಕೆಲವು ಉದ್ದೇಶಗಳಿಗೆ ನಿಯುಕ್ತರಾದ ವ್ಯಕ್ತಿಗಳು ತಮ್ಮ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸಲಿ ಎಂಬುದೇ ಆಗಿರಬೇಕು. ಬಹುತೇಕ ಎಲ್ಲ ಶಾಸನಗಳಲ್ಲೂ ದಾನವನ್ನು ದೇವಾಲಯದ ಆಡಳಿತಾಧಿಕಾರಿಗಳ, ಅರಸರ, ಸಮ್ಮುಖದಲ್ಲಿ ದಾನ ಬಿಡಲಾಗಿದೆ.

ಕ್ರಿ.ಶ. ೯೭೬ರ ಕುಡತಿನಿ ಶಾಸನದಲ್ಲಿ ದಂಡಾಸನಿ ಗಧಾಧರ ಬ್ರಹ್ಮಚಾರಿಯೂ ಊರಿನ ಐದು ವರ್ಗದವರು ಮತ್ತು ಹರಪನಭಟ್ಟೋಪಾದ್ಯಾಯರ ಸಮ್ಮುಖದಲ್ಲಿ ಭೈರವದೇವರಿಗೆ ಭೂಮಿದಾನ[50] ನೀಡುತ್ತಾನೆ. ಮಹಾಮಂಡಳೇಶ್ವರ ರೇಚರಸನು ನಾಮಗಾವುಂಡನ ಬಾವಿಯಧರ್ಮೇತಕ್ಕೆಂದು ಮದ್ರಕಿ ಅಗ್ರಹಾರರ ಊರೊಡೆಯ ಸರ್ವದೇವಭಟ್ಟ ಮತ್ತು ಐನೂರ್ವ್ವರು ಮಹಾಜನಗಳ ಸಮ್ಮುಖದಲ್ಲಿ[51] ದಾನ ಬಿಡುತ್ತಾನೆ. ಕೆಳ್ವಡಿ ಮನ್ನೂರನ್ನು ಆಳುತ್ತಿದ್ದ ದಂಡನಾಯಕನು (?) ಪಂಪಾತೀರ್ಥದ ವಿರುಪಾಕ್ಷದೇವರ ಸನ್ನಿಧಿಯಲ್ಲಿ[52] ದಾನ ಬಿಡುತ್ತಾನೆ. ಹಾಗೆಯೇ ಶ್ರೀ ಪುಲಿಗೆರೆಯ ಮಹಾಜನಗಳು ಪಂಚಮಠಸ್ಥಾನಗಳ ಸೆಟ್ಟಿ ಪ್ರಮುಖರು ಪುಲಿಗೆರೆ ಮನ್ನೂರರ ಪ್ರಭುಗಾವುಂಡರು ಇರುವ ಸಂದರ್ಭದಲ್ಲಿ ಅವರ

ಸನ್ನಿಧಾನದಲ್ಲಿ ಶ್ರೀ ಸ್ವಯಂಭೂ; ದಕ್ಷಿಣ ಸೋಮನಾಥ ದೇವರ ಅಂಗಭೋಗ, ದೇವಭೋಗ ಇತ್ಯಾದಿಗಳಿಗೆ ಅಲ್ಲಿನ ಸ್ಥಾನಾಚಾರ್ಯರಿಗೆ[53] ದಾನ ಬಿಡಲಾಗಿದೆ. ಮಹಾಪ್ರಧಾನ ಬಾಣಸವರ್ಗಡೆಯೂ ದಂಡನಾಯಕ ಅನಂತಪಾಳಯ್ಯ, ಪೇರ್ಗಡೆಸಿರಿಪತಿನಾಯಕ ತ್ರಿಭುವನ ಮಲ್ಲನ ಮಹಾಮಂಡಳೇಶ್ವರಿ ರೆಬ್ಬಲದೇವಿ ಹಾಗೂ ಕೂಳಿಗೆಯ ಸಮಸ್ತ ಅಧಿಕಾರಿಗಳ ಸಮ್ಮುಖದಲ್ಲಿ ಅಲ್ಲಿನ ಮೂಲಸ್ಥಾನ ದೇವರಿಗೆ ಧೂಪ,ದೀಪ,ನೈವೇದ್ಯ ಜೀರ್ಣೋದ್ಧಾರಕ್ಕೆಂದು ಹಣದಾನವನ್ನು ನೀಡಲಾಗಿದೆ.[54]

ಹೀಗೆ ಅನೇಕ ಶಾಸನಗಳಲ್ಲಿ ಪ್ರಮುಖರ ಸಮ್ಮುಖದಲ್ಲಿ ಮತ್ತು ದೇವರ ಸಮ್ಮುಖದಲ್ಲಿ ವೈವಿಧ್ಯಮಯ ದಾನಗಳನ್ನು ನೀಡಿದ್ದರ ಕುರಿತು ಉಲ್ಲೇಖಗಳಿವೆ. ಅಧ್ಯಯದ ವಿಸ್ತಾರವನ್ನುಗಮನಿಸಿ ಕೆಲವೊಂದನ್ನು ಮಾತ್ರ ನಿರೂಪಿಸಲಾಗಿದೆ.

**೬. ಊರ ಸಮೂಹದಿಂದ ಬಹುವಿಧದ ದಾನ :**

ಕಲ್ಯಾಣ ಚಾಲುಕ್ಯರ ಶಾಸನವನ್ನು ಅವಲೋಕಿಸುತ್ತಾ ಹೋದರೆ ಊರ ಸಮೂಹದಿಂದ, ಅಧಿಕಾರವರ್ಗದವರಿಂದ, ಸಾಮಂತಸಮೂಹದಿಂದ ಪೆರ್ಗಡೆಗಳಿಂದ ನಾನಾ ಬಗೆಯ ದಾನಗಳನ್ನು ನೀಡಿದುದು ಅನೇಕ ಶಾಸನಗಳಲ್ಲಿ ಕಂಡುಬರುತ್ತದೆ.

ಕೆಲವರು ದಾನ ಬಿಡುವಂತಹ ಸಂದರ್ಭದಲ್ಲಿ ಅಲ್ಲೊಂದು ದಾನದ ವಾತಾವರಣ ನಿರ್ಮಾಣವಾಗುತ್ತಿತ್ತು. ಅಲ್ಲಿದ್ದವರು ತಮ್ಮ ಕೈಲಾದಷ್ಟು ದಾನ ಬಿಡುತ್ತಿದ್ದರು. ಭೂದಾನ, ಹಣದಾನ, ನೀಡಲು ಸಾದ್ಯವಾಗದವರು ಇನ್ನೊಬ್ಬರು ನೀಡುತ್ತಿದ್ದ ದಾನದಲ್ಲಿ ಭಾಗಿಯಾಗುತ್ತಿದ್ದರು. ಇನ್ನೂ ಕೆಲವು ಸಂದರ್ಭಗಳಲ್ಲಿ "ಊರಿನ ಜನರೇ ಸೇರಿ ದಾನ" ಬಿಡುತ್ತಿದ್ದರೆಂಬುದಕ್ಕೆ ಬಾಗಳಿಯ ಐವತ್ತು ಜನರು ಸೇರಿ ಅಲ್ಲಿನ ಆದಿತ್ಯದೇವರಿಗೆ ತೋಟದಾನ ಬಿಟ್ಟಿದ್ದನ್ನು ಉಲ್ಲೇಖಿಸುವುದು.[55] ಕುಕನೂರಿನ ಮಹಾಜನರು ಸೇರಿ ಅಲ್ಲಿನ ದೇವಾಲಯಕ್ಕೆ ತಮ್ಮ ಯೋಗ್ಯತಾನುಸಾರವಾಗಿ ದಾನಬಿಡುತ್ತಾರೆ.[56] ಮಾಗಳದ ಇನ್ನೂರ್ವರು ಮತ್ತು ಐನೂರ್ವರು ಮಹಾಜನರು ಸೇರಿ ಅಲ್ಲಿನ ಸೋಮೇಶ್ವರ ದೇವರ ಸೇವೆಗಾಗಿ ಭೂದಾನ ಮಾಡಿದ್ದನ್ನು ಮಾಗಳಿ ಶಾಸನ ತಿಳಿಸುತ್ತದೆ.[57] ಮಂಕಲ್ಕೆರಿಯ ಮಲ್ಲೇಶ್ವರ ದೇವರ ಸೇವೆಗೆಂದು ಅಲ್ಲಿನ ಪ್ರಮುಖರು ಸೇರಿ ದಾನಬಿಡುತ್ತಾರೆ.[58] ಮಹಾಮಂಡಳೇಶ್ವರ ಚಾಲುಕ್ಯ ಗಂಗ ಪೆರ್ಮಾಡಿ ಕುಮಾರ ಸೋಮೇಶ್ವರನು ರಾಜಧಾನಿ ಕೊಲ್ಲಿಪಾಕಿಯ ಅಂಬಿಕಾ ದೇವಿಯ ಸೇವೆಗೆ ಪಾನಪೂರ ಎಂಬ ಗ್ರಾಮವನ್ನು ದತ್ತಿ ಬಿಡುತ್ತಾನೆ. ಆಸಂದರ್ಭದಲ್ಲಿ ಅಲ್ಲಿದ್ದ ಅವನ ಅಧಿಕಾರಿಗಳು ತಮಗೆ ಆ ಗ್ರಾಮದಿಂದ ಬರಬೇಕಾದ ಬೇರೆ ಬೇರೆ ಸುಂಕಗಳನ್ನು ದಾನಬಿಡುತ್ತಾನೆ.[59] ಹೀಗೆ ಅಧಿಕಾರಿಗಳಾಗಲಿ ಮಹಾಜನರಾಗಲಿ ಕೆಲವು ಸಂದರ್ಭಗಳಲ್ಲಿ ಎಲ್ಲರೂ ಸೇರಿಕೊಂಡು ದಾನ ಬಿಟ್ಟ ಉಲ್ಲೇಖಗಳು ಅನೇಕ ಇವೆ. ಈ ದಾನಕಾರ್ಯದಲ್ಲಿ ಸಮಾಜದ ವಿವಿಧ ವರ್ಗದವರೂ ವೃತ್ತಿಯವರು ಸೇರಿರುತ್ತಿದ್ದರು ಎಂದು ತಿಳಿದುಬರುತ್ತದೆ.

೭. ದಾನಗಳ ಸಂರಕ್ಷಣೆ ವ್ಯವಸ್ಥೆ ಅಥವಾ ದಾನವನ್ನು ಕಾಪಾಡುವುದು :

ದಾನಗಳನ್ನು ನೀಡುವುದು ಎಷ್ಟು ಪುಣ್ಯಕರವೋ ಆ ದಾನವನ್ನು ಕಾಪಾಡುವುದು ಮತ್ತು ಮುಂದುವರೆಸಿಕೊಂಡು ಹೋಗುವುದು ಅಷ್ಟೇ ಪುಣ್ಯಕರವಾದುದು ಎಂಬ ಭಾವನೆ ಅಂದಿನ ಜನರಲ್ಲಿ ನೆಲೆಯೂರಿದ್ದಿತು. ದಾನಕೊಟ್ಟ ಪ್ರತಿಯೊಬ್ಬನೂ ತನ್ನ ಸ್ಮರಣೆ ಉದಾರತೆಗಳು ಲೋಕಮಾನ್ಯವಾಗಿರಲಿ ಎಂದು ಬಯಸುತ್ತಿದ್ದ. ತಾನು ಕೊಟ್ಟ ದಾನವು ಸದ್ವಿನಿಯೋಗವಾಗಲೆಂದು ಹಂಬಲಿಸುತ್ತಿದ್ದ. ದಾನ, ರಾಜನೀತಿಯ ಪರಿಣಾಮಕಾರಿಯಾದ ಸಾಧನವಾಗಿದ್ದರೆ ಪ್ರತಿಗ್ರಹಿಗಳೂ ಅವರ ವಂಶದವರೂ ಬಹುಕಾಲ ಅದನ್ನೇ ಅನುಭೋಗಿಸಲು ಅನುಕೂಲವಾಗುವಂತೆ ಸಂರಕ್ಷಿಸುವುದು ಅಗತ್ಯವಾಗಿತ್ತು. ಅದಕ್ಕೆ ಸಂರಕ್ಷಣೆಯ ವಿಶೇಷ ತಂತ್ರಗಳನ್ನು ಬಳಸಿದುದು ಶಾಸನಗಳಿಂದ ಉಕ್ತವಾಗುತ್ತದೆ. ಅದು ದಾನದ ವ್ಯವಸ್ಥೆಯ ಒಂದು ಭಾಗವೂ ಆಗಿತ್ತು.

ಪ್ರಮುಖ ವ್ಯಕ್ತಿಗಳ,ಊರಿನ ಮಹಾಜನರ ಸಮ್ಮುಖದಲ್ಲಿ ದಾನ ಬಿಡುವುದು, ಧರ್ಮದರ್ಶಿಗಳನ್ನು ನಿಯುಕ್ತಗೊಳಿಸುವುದು, ಹಕ್ಕುಪತ್ರಗಳನ್ನ ವಿತರಿಸುವುದು, ಶಾಪಾಶ್ರಯಗಳನ್ನು ಹಾಕಿಸುವುದು ಮುಂತಾದವು ದಾನವನ್ನು ರಕ್ಷಿಸುವುದಕ್ಕಾಗಿ ಬಳಸಲ್ಪಟ್ಟ ತಂತ್ರಗಳು. 'ತಮ್ಮ ಹೊಣೆಯನ್ನು ಉಪೇಕ್ಷೆ ಮಾಡದವರೇ ನಿಜವಾದ ದಾನಿಗಳಾಗುತ್ತಾರೆ' ಎಂಬುದನ್ನು ಒಂದು ಶಾಸನ ಹೇಳುತ್ತದೆ.[60] ಅಂದರೆ ದಾನ ಕೊಟ್ಟರೆ ಮಾತ್ರ ಸಾಲದು ಅದನ್ನು ಸರಿಯಾಗಿ ರಕ್ಷಿಸುವುದು ಮತ್ತು ಸದ್ವಿನಿಯೋಗವಾಗುವಂತೆ ನೋಡಿಕೊಳ್ಳುವುದು ನಿಜವಾದ ದಾನಿಯ ಲಕ್ಷಣ ಎಂದಂತೆ.

**"ಸ್ವದತ್ತಾದ್ವಿಗುಣಂ ಪುಣ್ಯಂ ಪರದತ್ತಾನುಪಾಲನಂ ।**
**ಪರದತ್ತಾಪಹಾರೇಣ ಸ್ವದತ್ತಂ ನಿಷ್ಫಲಂ ಭವೇತ್ ॥"[61]**

(ತಾನೇ ಒಂದು ದಾನವನ್ನು ಕೊಡುವುದರ ಎರಡು ಪಟ್ಟು ಸುಖವು ಪರರು ಕೊಟ್ಟಿದ್ದನ್ನು ಪಾಲಿಸುವುದರಿಂದ ಬರುತ್ತದೆ. ಇತರರು ಕೊಟ್ಟಿದ್ದನ್ನು ಅಪಹರಿಸುವುದರಿಂದ ತಾನು ಕೊಟ್ಟ ದಾನಗಳೂ ನಿಷ್ಫಲವಾಗುತ್ತದೆ')

**"ದಾನಪಾಲನಯೋರ್ ಮಧ್ಯೇ ದಾನಾಚ್ಛೇಯೋನುಪಾಲನಂ ।**
**ದಾನಾತ್ ಸ್ವರ್ಗಂ ಅವಾಪ್ನೋತಿ ಪಾಲನಾತ್ ಅಚ್ಯುತಂ ಪದಂ ॥"[62]**

('ದಾನವನ್ನು ಕೊಡುವುದು ಮತ್ತು ಕೊಟ್ಟದಾನವನ್ನು ಪಾಲಿಸುವುದು–ಇವುಗಳಲ್ಲಿ ದಾನವನ್ನು ಪಾಲಿಸುವುದು ಹೆಚ್ಚು ಶ್ರೇಯಸ್ಕರವಾದುದು. ದಾನವನ್ನಿತ್ತವರು ಸ್ವರ್ಗವನ್ನು ಪಡೆದರೆ, ಅದನ್ನು ಪರಿಪಾಲಿಸಿಕೊಂಡು ಬಂದವರು ಅಚ್ಯುತ ಪದವಿಯನ್ನು ಪಡೆಯುತ್ತಾರೆ')

ಎಂಬ ಶಾಸನೋಲ್ಲೇಖಗಳಿಂದ ದಾನದ ರಕ್ಷಣೆ ಮತ್ತು ಪಾಲನೆ ಮುಖ್ಯವಾಗಿತ್ತೆಂದು ತಿಳಿದುಬರುತ್ತದೆ. ಈ ನಿಟ್ಟಿನಲ್ಲಿ ದಾನ ನೀಡುತ್ತಿದ್ದಾಗ ಅದರ ರಕ್ಷಣೆಗೆ ಯಾವುದಾದರೊಂದು ತಂತ್ರವನ್ನು ಆಶ್ರಯಿಸುತ್ತಿದ್ದರು. ಉದಾಹರಣೆಗಾಗಿ ಕೆಲವನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

ಬಲ್ಲಕುಂದೆಯಲ್ಲಿ ದೇವಾಲಯ ಕಟ್ಟಿಸಿದ ಕೌಶಿಕಗೋತ್ರದ ಮಾಚಿಮಾರ್ಯ ಎಂಬುವವನು ದೇವಾಲಯದ ಪೂಜಾರ್ಥವಾಗಿ ಭೂಮಿದಾನ ಮಾಡುತ್ತಾನೆ. ಆ ದಾನವನ್ನು ಬಲ್ಲಕುಂದೆಯ ವ್ಯಾಪಾರಿಗಳು ಕಾಯಬೇಕೆಂದು ಅವರಿಗೆ ಕರ್ತವ್ಯ ವಹಿಸಲಾಗಿದೆ.[63] ಹಾಗೇ ಮಹಾಮಂಡಳೇಶ್ವರ ರೇವರಸನು ಮದ್ರಕಿ ಅಗ್ರಹಾರದ ನಾಮಗಾವುಂಡನ ಬಾವಿಯ 'ಧರ್ಮ್ಮೇತ' ಕ್ಕೆಂದು ಭೂಮಿ, ಮನೆ, ಹೂದೋಟಗಳನ್ನು ದಾನ ಬಿಡುತ್ತಾನೆ. ಈ ದಾನವನ್ನು ಊರೊಡೆಯ ಪ್ರಮುಖ ಮಹಾಜನ ಐನೂರ್ವ್ವರು ತಪ್ಪದೇ ರಕ್ಷಿಸಬೇಕೆಂದು ನಿಯುಕ್ತಗೊಳಿಸುತ್ತಾನೆ.[64] ದಾನಗಳನ್ನ ರಕ್ಷಿಸಲು (ದೇವಾಲಯಗಳಿಗೆ) ನಾಲ್ಕಾರು ಜನರನ್ನು ಧರ್ಮದರ್ಶಿಗಳಾಗುವಂತೆ ಕೇಳಿಕೊಳ್ಳುತ್ತಿದ್ದರು. ಅಥವಾ ಒಬ್ಬ ವ್ಯಕ್ತಿಗೆ ಅದರ ಹೊಣೆಯನ್ನು ವಹಿಸುತ್ತಿದ್ದರು. ಶಾಸನವೊಂದರಲ್ಲಿ ದಾನವನ್ನು ಅರಸರು, ಅಧಿಕಾರಿಗಳು ಮತ್ತು ಆರು ಜನ ಗಾವುಂಡರು ರಕ್ಷಿಸುವರು ಎಂದಿದೆ.[65] ಕೆಲವು ಸಾರಿ ಆ ಜವಾಬ್ದಾರಿ ಇಡೀ ಊರಿನ ಸಾಮೂಹಿಕವಾದ ಜವಾಬ್ದಾರಿಯೂ ಆಗುತ್ತಿದ್ದಿತು.[66] ದೇವಾಲಯಕ್ಕೆ, ದೇವರಿಗೆ ಬಿಟ್ಟ ದಾನವನ್ನು ಬೇರೆಯವರು ಅಪಹರಿಸದಂತೆ ನೋಡಿಕೊಳ್ಳುವುದು ಮತ್ತು ಯಾವ ಉದ್ದೇಶಕ್ಕಾಗಿ ದತ್ತಿ ಬಿಡಲಾಗಿದೆಯೋ ಆ ಉದ್ದೇಶಗಳಿಗೆ ದಾನದಿಂದ ಬಂದುದನ್ನು ವಿನಿಯೋಗಿಸುವುದು ರಕ್ಷಣೆಯ ಜವಾಬ್ದಾರಿ ಹೊಂದಿದವರ ಕರ್ತವ್ಯವಾಗಿತ್ತು. ಕ್ರಿ.ಶ. ೧೧೧೬ರ ಶಾಸನವೊಂದರಲ್ಲಿ ಹೇಳಿದಂತೆ ಯಾವುದೇ ಒಂದು ಊರಿನ ಕಂಚಗಾರರಲ್ಲಿ ಒಂದೊಂದು ಒಕ್ಕಲು, ವರ್ಷಕ್ಕೆ ಒಂದು ಹಾಗದಂತೆ ದೇವರ ನಂದಾದೀವಿಗೆಗೆ ದಾನ ಕೊಡಲು ಮಾತುಕೊಡುತ್ತಾರೆ. ಪ್ರತಿವರ್ಷ ನಿಗದಿಪಡಿಸಿದಂತೆ ಅದನ್ನು ಎತ್ತಿ ತಂದು ದೇವಕಾರ್ಯವನ್ನು ನಡೆಸುವ ಸಲುವಾಗಿ ಪೂಜಾರಿಯನ್ನು ನಿಯೋಜಿಸಲಾಗುತ್ತದೆ.[67]

ಪಟಾನ್‌ಚೆರು ಶಾಸನದ ಪ್ರಕಾರ ಸರ್ವಜ್ಞ ಸೋಮೇಶ್ವರ ಚಕ್ರವರ್ತಿಯು ಜೋಯಿಸಿಗನಾದ ನನ್ನಯಭಟ್ಟನಿಗೆ ಚಿಂತಾಮಣಿಪುರ ಗ್ರಾಮದ ಕೊಳಗದಾಯವನ್ನು ದತ್ತಿಯಾಗಿ ಕೊಟ್ಟು, ಈ ದತ್ತಿಯನ್ನು ಪಂಚಮಠಸ್ಥಾನದವರು, ನಗರದ ನಲವತ್ತು ವಕ್ಕಲುಗಳು, ನಾಲ್ಕು ಊರಿನ ಸೆಟ್ಟಿಕಾರರು ಸಮಯಗಳು ಪ್ರತಿಪಾಲಿಸಬೇಕೆಂದು ಕಟ್ಟಳೆ ವಿಧಿಸುತ್ತಾನೆ.[68] ಹೀಗೆ ವ್ಯಕ್ತಿಗಳು, ಪ್ರಮುಖರು, ಮಹಾಜನರನ್ನು ದಾನ ರಕ್ಷಣಾ ಕಾರ್ಯಕ್ಕೆ ನಿಯೋಜಿಸಿದ ವಿಷಯಗಳನ್ನು ಸಾಲಗುಂದೆ,[69] ಹೂವಿನಹಡಗಲಿ,[70] ಕುಳೇಕುಮಟಗಿ,[71] ಪುಷ್ಪಗಿರಿ,[72] ಯಾತನೂರು,[73] ಹದ್ಲಿ,[74] ಶಾಸನಗಳು ಉಲ್ಲೇಖಿಸುತ್ತವೆ.

ದಾನಪಾಲನೆಗೆ ವ್ಯಕ್ತಿಗಳನ್ನು ನೇಮಿಸಿದಂತೆ, ಅದರ ರಕ್ಷಣೆಗೆ ಶಾಪಾಶ್ರಯಗಳನ್ನು ಬಳಸಲಾಗುತ್ತಿತ್ತು. ಧಾರ್ಮಿಕ ನಂಬಿಕೆಗಳು ಮತ್ತು ಶಾಪದಲ್ಲಿ ನಂಬಿಕೆ ಬಹುವಾಗಿ ಪ್ರಚಲಿತವಾಗಿದ್ದ ಕಾಲವದು. ದಾನವನ್ನು ಮುಂದುವರಿಸಿಕೊಂಡು ಅದನ್ನು ಕಾಪಾಡಿದವರಿಗೆ ಅಪಾರವಾದ ಪುಣ್ಯ ಬರುವುದೆಂದೂ ದಾನವನ್ನು ಅಪಹರಿಸಿದವರಿಗೆ ಇಲ್ಲವೆ ಹಾಳುಮಾಡಿದವರಿಗೆ ಶಾಶ್ವತವಾಗಿ ನರಕದಲ್ಲಿ ಶಿಕ್ಷೆ ಒದಗುವುದೆಂದು ಶಾಪಶ್ಲೋಕಗಳನ್ನು ಹಾಕಿಸುತ್ತಿದ್ದರು. ರಾಜರೋ ಅಥವಾ ಸಮಾಜದ ಇತರ ಜನರೋ ಕೊಟ್ಟ ದಾನಗಳನ್ನು ಕಸಿದುಕೊಳ್ಳುವುದನ್ನು ತಪ್ಪಿಸಲು

ಶಾಪಶ್ಲೋಕಗಳು ದಾರಿಯಾಗಿದ್ದವು. ದಾನವಾಗಿ ಕೊಟ್ಟ ಭೂಮಿಯನ್ನು ರಾಜರು ಖಂಡಿತವಾಗಿ ರಕ್ಷಿಸುತ್ತಾರೆ ಎಂಬ ಜನರ ನಂಬಿಕೆಗೆ ಧಕ್ಕೆಯಾಗುತ್ತ ಬಂದದ್ದರಿಂದ ಸಮಾಜದಲ್ಲಿ ಅದೃಢತೆ ಹೆಚ್ಚಿದಂತೆಲ್ಲ ಇಂತಹ ಶಾಪಶ್ಲೋಕಗಳನ್ನ ಶಾಸನಗಳಲ್ಲಿ ಉದ್ಧರಿಸುವ ಪದ್ಧತಿ ರೂಢಿಯಲ್ಲಿ ಬಂದಿತು. [75] ಈ ಪದ್ಧತಿ ಪ್ರಾಚೀನ ಕಾಲದಿಂದಲೂ ಇದ್ದು ಕಲ್ಯಾಣ ಚಾಲುಕ್ಯರ ಕಾಲದಲ್ಲೂ ಮುಂದುವರೆಯಿತು. ಹೆಚ್ಚಿನ ಪ್ರಮಾಣದಲ್ಲಿ ಬಳಸಲ್ಪಟ್ಟ ಕೆಲವು ಶಾಪಶ್ಲೋಕಗಳು ಹೀಗಿವೆ.

"ಸ್ವದತ್ತಂ ಪರದತ್ತಂ ವಾಯೋಹರೇತ ವಸುಂಧರಾ ।
ಷಷ್ಠಿರ್ವರ್ಷ ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ ॥[76]

ಅಂದರೆ 'ತಾನೇ ದಾನವಾಗಿ ನೀಡಿದ ಅಥವಾ ಇತರರು ನೀಡಿದ ಭೂಮಿಯನ್ನು ಅಪಹರಿಸುವವನು ಅರವತ್ತು ವರ್ಷಗಳ ಕಾಲ ಅಮೇಧ್ಯದಲ್ಲಿ ಕ್ರಿಮಿಯಾಗಿ ಜನಿಸುತ್ತಾನೆ'.

"ನ ವಿಷಮ್ ಇತ ಅಹುರ್ ದೇವಸ್ವಂ ವಿಷಮಂ ಉಚ್ಯತೇ ।
ವಿಷಮ್ ಏಕಾಕಿನಂ ಹಂತಿ ದೇವಸ್ವಂ ಪುತ್ರ ಪೌತ್ರಕಂ"॥[77]

ಅಂದರೆ : 'ವಿಷವು ವಿಷವೇ ಅಲ್ಲ. ನಿಜವಾದ ವಿಷವೆಂದರೆ ದೇವತೆಗಳಿಗೆ/ಧರ್ಮಕಾರ್ಯಕ್ಕೆ ಬಿಟ್ಟ ದಾನ. ವಿಷ ಒಬ್ಬನನು ಮಾತ್ರ ಕೊಂದರೆ; ಈ ದಾನ, ಅದನ್ನ ಅಪಹರಿಸಿದವರ ಪುತ್ರ ಪೌತ್ರರನ್ನೆಲ್ಲಾ ನಾಶ ಮಾಡುತ್ತದೆ'. ಇವು ಸಂಸ್ಕೃತ ಶ್ಲೋಕಗಳಾಗಿದ್ದರೆ, ಕನ್ನಡದಲ್ಲಿಯೇ ಬರೆದ ಶಾಪಾಶ್ರಯಗಳೂ ಇವೆ.

ಈ ಧರ್ಮಕ್ಕೆ ತಪ್ಪಿದವರು ಯೋಳನೆಯ ನರಕಕೆ ಹೋಹರು ಹೋಹರು"[78]; "ಆರಾಮಂ ಬಿಟ್ಟರ ಬಿಡತೀರದೆನಲ್ವೇಡ ನಡುಸುವಾತನೆ ಬಿಟ್ಟಂ......ಬಳಂ ಕೈವಾರದಿಂ ರಕ್ಷಿಪುದು ಪಕ್ಷದಾತದೊಳೆಲ್ಲಂ"[79]; "ಶಾಸನಮಿದಾವುದೆಲ್ಲಿಯ ಶಾಸನಮಾರಿತ್ತರೇಕೆ ಸಲಿಸುವೆ ನಾನೀ ಶಾಸನಮನೆಂಬ ಪಾತಕನು ಸಕಳಂ ರೌರವಕ್ಕೆ ಗಳಗಳನಿಳಿಗಂ"[80]; "ಈ ಧರ್ಮವ ಕಿಡಿಸಿದ ಲಿಂಗಭೇದಿ ಇಕ್ಕತ್ತಿಗೆಯ ಕವಿಲೆಯ ಕೊಂದ"[81] ಇಂಥ ಕೆಲವು ಪ್ರಮುಖ ಶಾಪಾಶ್ರಯಗಳು ಕನ್ನಡ ಶಾಸನಗಳಲ್ಲಿ ಕಂಡುಬರುತ್ತವೆ. ಇವು ಪಾಪ-ಪುಣ್ಯಗಳ ಪರಿಯನ್ನು ಎಚ್ಚರಿಸುವಂಥವುಗಳು. ಇನ್ನೂ ಕೆಲವು ಕಡೆಗಳಲ್ಲಿ ಬಹುಕಟುವಾದ, ಅಶ್ಲೀಲವಾದ ಮಾತುಗಳನ್ನು ಬಳಸಿರುವುದುಂಟು. ಕ್ರಿ.ಶ. ೧೧೦೪ರ ಒಂದು ಶಾಸನದಲ್ಲಿ "ಈ ಯಾಣೆಯಂ ಮೀರಿದವನಂ ಕೆಡಹಿ ಕೊಲ್ಲುದು ಅವರ ಸತ್ತಡೆ ಹಂದಿ ಸತ್ತುದು ನಾಯಿ ಸತ್ತುದು".[82]

ಹೀಗೆ ದಾನಿಯು ತಾನು ಕೊಟ್ಟ ದಾನವು ದೊಡ್ಡದು ಎಂದು ಅನ್ಯರು ಭಾವಿಸಲಿ ಎನ್ನುವುದಕ್ಕಿಂತ, ತಾನು ಕೊಟ್ಟದು ಉಳಿಯಬೇಕು, ಬೆಳೆಯಬೇಕು ಎಂಬ ವಿಷಯದಲ್ಲಿ ಕಾತರನಾಗಿದ್ದಂತೆ, ಅವುಗಳನ್ನು ಸಂರಕ್ಷಿಸಲು ವ್ಯವಸ್ಥೆ ಮಾಡಿಸುತ್ತಿದ್ದನೆಂಬ ಅಂಶವನ್ನು ತಿಳಿಯಬಹುದು.

## ೮. ಪೂರ್ವದ ಸ್ಥಾನ ಮಾನ್ಯ ಮಾಡುವುದು ಅಥವಾ ಮೊದಲಿನ ದತ್ತಿಯನ್ನು ಪುನಃ ನೀಡುವುದು :

ಒಂದು ರಾಜಕುಲ ಅಳಿದು ಮತ್ತೊಂದು ರಾಜಕುಲ ಪಟ್ಟವನ್ನೇರಿದರೆ, ಒಬ್ಬ ರಾಜನ ಆಳ್ವಿಕೆ ಮುಗಿದು ಮತ್ತೊಬ್ಬ ರಾಜ ಅಧಿಕಾರಕ್ಕೆ ಬಂದರೆ ಇಲ್ಲವೆ ಮೊದಲು ನೀಡಿದ ದಾನಕ್ಕೆ ಕಾಲಮಿತಿ ಹಾಕಿದ್ದು ಅದು ಮುಕ್ತಾಯವಾಗಿದ್ದರೆ ಹಿಂದಿನ ದತ್ತಿಗಳನ್ನು ಮಾನ್ಯಮಾಡುವುದು ರಾಜರ, ಮಾಂಡಳಿಕರ ಕರ್ತವ್ಯಗಳಲ್ಲೊಂದಾಗಿದ್ದಿತು. ಇದು ದಾನ ಸ್ವರೂಪದ ಒಂದು ಲಕ್ಷಣವೂ ಆಗಿದೆ.

ದೊರೆ ಅಹಮಲ್ಲ ತೈಲಪನು ಅಗ್ರಹಾರ ಕಂಚಗಾರ ಬೆಳ್ಗಲಿಯ ಮೂರು ಶಿವಾಲಯಗಳಿಗೆ ನೀಡಿದ ದತ್ತಿಗಳನ್ನು ಮತ್ತೆ ಸ್ಥಿರಪಡಿಸಿದನೆಂದು ಕ್ರಿ.ಶ. ೯೮೧ರ ಕಂಚಗಾರ ಬೆಳಗಲ್ಲು ಶಾಸನ ತಿಳಿಸುತ್ತದೆ.[83] ತಾಮ್ರಪಟವೊಂದರ ಕೊನೆಯಲ್ಲಿ "ತಾಮ್ರಪಟಗಳಲ್ಲಿ ಉಕ್ತವಾಗಿರುವ ಪೂರ್ವನೃಪರ ದಾನವನ್ನು ಧರ್ಮಬುದ್ಧಿಯಿಂದ ರಾಜನು ರಕ್ಷಿಸಬೇಕು, ಇಲ್ಲವಾದರೆ ಅವನಿಗೆ 'ಸಂಸಾರದೋಷ' ಒದಗೀತು" ಎಂದು ಎಚ್ಚರಿಸಿದೆ.[84] "ಧಾರಾಪೂರ್ವಕವಾಗಿ ಕೊಡಲ್ಪಟ್ಟು ಮೂವರಿಂದ ಅನುಭವಿಸಲ್ಪಟ್ಟ, ಸದ್‌ವ್ಯಕ್ತಿ ಗಳಿಂದ ಪಾಲಿತವಾಗಿರುವ ದಾನಗಳನ್ನು ಕಿತ್ತುಕೊಳ್ಳದು"[85] ಎಂಬುದನ್ನು ಇನ್ನೊಂದು ತಾಮ್ರಪಟ ಉಲ್ಲೇಖಿಸಿತ್ತದೆ. ಅಂದರೆ ಇಲ್ಲಿನ ಆಶಯವೆಂದರೆ ಒಮ್ಮೆ ದಾನವನ್ನು ಯಾರೇ ಕೊಟ್ಟಿದ್ದರೂ ಅದನ್ನು ಗೌರವಿಸಬೇಕು ಮತ್ತು ಮುಂದುವರಿಸಬೇಕು ಎಂಬದು. ಅಂತೆಯೇ ಕಲ್ಯಾಣ ಚಾಲುಕ್ಯರ ಕಾಲದ ದಾನಗಳನ್ನು ಪುನರ್ದತ್ತಿಯಾಗಿ ಪೂರ್ವದ ದಾನವನ್ನು ಮಾನ್ಯಮಾಡಲಾಗಿದೆ.

ಕ್ರಿ.ಶ. ೧೦೦೫ರಲ್ಲಿ ಮಹಾಸಾಮಂತ ಶೋಭನರಸನು ಸಿರಿಪುರದ ಗಾವುಂಡರ ಅರವತ್ತೊಕ್ಕಲಿನ ವಿನಂತಿಯ ಮೇರೆಗೆ ಮೂಲಸ್ಥಾನ ದೇವಾಲಯದ ರೇವಬ್ಬೆ ಗೊರವಿಗೆ ಆರು ಮತ್ತರು ಭೂಮಿ ಕೊಡುತ್ತಾನೆ. ಅವಳಿಗೆ ಕೊಟ್ಟ ದಾನಶಾಸನವು ಕಾಲಕ್ರಮದಲ್ಲಿ ಒಡೆದು ಹೋಗಿದ್ದರಿಂದ ಭೂಲೋಕಮಲ್ಲನ ಕಾಲದಲ್ಲಿ ಇದಕ್ಕೆ ಪ್ರತಿಶಾಸನವನ್ನು ಮಾಡಿಸಿ ಅದೇ ಮೂಲಸ್ಥಾನ ದೇವಾಲಯದ ಅಮೃತರಾಶಿ ಪಂಡಿತರಿಗೆ ಕೊಡುತ್ತಾರೆ.[86] ಚಕ್ರವರ್ತಿ ತ್ರೈಲೋಕ್ಯಮಲ್ಲನು (ಸೋಮೇಶ್ವರ– I) ತರ್ದವಾಡಿ ೧೦೦೦ದ ಅಂಕಲಗೆ. ೫೦ರ ಮೊದಲಬಾಡ ಅಂಕುಲರಿಗೆ ಗ್ರಾಮವನ್ನು ಸರ್ವನಮಸ್ಯವಾಡಿ ದಾನ ಬಿಟ್ಟಿರುತ್ತಾನೆ. ಅದನ್ನು ಚಕ್ರವರ್ತಿ ಆರನೆಯ ವಿಕ್ರಮಾದಿತ್ಯನು ಪಟ್ಟಕ್ಕೆ ಬಂದ ಮೊದಲ ವರ್ಷದಲ್ಲಿಯೇ (ಕ್ರಿ.ಶ.೧೦೭೬) ಪುನರ್ಬ್ಬರವಾಗಿ (ಪೂರ್ವದ ಮಾನ್ಯ)' ತ್ರಿಭೋಗಾಭ್ಯಂತರ ಶುದ್ಧಿಯಿಂ' ಧಾರಾಪೂರ್ವಕವಾಗಿ ಮುದ್ದಲದೇವಿಯ ಗಂಡ ಶಂಕರಭಟ್ಟೋಪಾಧ್ಯಾಯರಿಗೆ ಕೊಡುತ್ತಾನೆ.[87] ಇದೇ ರೀತಿ ಮಹಾಮಂಡಳೇಶ್ವರ ಚಿದ್ದಣ ಪೂರ್ವದ ದಾನಗಳನ್ನು ಮಾನ್ಯ ಮಾಡಿಕೊಡುತ್ತಾನೆ.[88]

ಹೀಗೆ ಮೊದಲು ಕೊಟ್ಟ ದಾನಗಳನ್ನು ಪುನಃ ಮಾನ್ಯ ಮಾಡುವುದು ಹಾಗೂ ಅವುಗಳನ್ನು ಪುರಸ್ಕರಿಸುವುದು ಶಾಸನಗಳಿಂದ ತಿಳಿದುಬರುತ್ತದೆ. ಇನ್ನೂ ಅನೇಕ ಶಾಸನಗಳು ಪೂರ್ವದ ದಾನಗಳನ್ನು ಮಾನ್ಯಮಾಡಿದುದನ್ನು ಉಲ್ಲೇಖಿಸುತ್ತವೆ.

**೯. ಷರತ್ತು ವಿಧಿಸುವುದು :**

ಪ್ರತಿಯೊಂದು ದಾನಗಳ ಹಿಂದೆ ಒಂದು ಉದ್ದೇಶವಿರುತ್ತಿತ್ತು. ಪುಣ್ಯ ಸಂಪಾದನೆಯೋ, ಪರೋಪಕಾರವೋ ಅಥವಾ ಧಾರ್ಮಿಕ ಮನೋಭಾವವೋ ಅದು ಯಾವುದೇ ಇರಲಿ ಆ ಉದ್ದೇಶಗಳಿಗೆಂದೇ ಜನರು ದಾನ ಬಿಡುತ್ತಿದ್ದರು. ತಾವು ನೀಡಿದ ದಾನ ಸದ್ವಿನಿಯೋಗ-ವಾಗಲೆಂಬುದು ಪ್ರತಿಯೊಬ್ಬರ ಆಶಯವಿದ್ದಂತೆ ತೋರುತ್ತದೆ. ಅದಕ್ಕೆಂದೆ ಹಲವಾರು ಶಾಸನಗಳು ಕೆಲವು ಶರತ್ತುಗಳನ್ನು ವಿಧಿಸುತ್ತವೆ. 'ಸರ್ವಮಾನ್ಯವಾಗಿ'[೮೯], 'ಸರ್ವಾಂತರ ಸಿದ್ಧಿಯಾಗಿ'[೯೦], 'ಸರ್ವಬಾಧಾ ಪರಿಹಾರವಾಗಿ'[೯೧], ದಾನ ಬಿಟ್ಟ ವಿಷಯಗಳನ್ನು ಶಾಸನಗಳು ಉಲ್ಲೇಖಿಸುತ್ತವೆ. ಈ ಪದಗಳು ಎಲ್ಲ ತೆರಿಗೆಗಳನ್ನು ಮುಕ್ತಗೊಳಿಸಿ ದಾನ ಬಿಡಲಾದ ಸಂಗತಿಯನ್ನು ಸೂಚಿಸುತ್ತವೆ.[೯೨], ದೇವಾಲಯಗಳಿಗೆ, ದಾನ ಪಡೆದ ಭೂಮಿ,ಮನೆ,ಗಾಣ,ತೋಟ ಇವುಗಳ ಒಡೆತನ ದಾನ ಪಡೆದವನಿಗೆ ವರ್ಗಾವಣೆಯಾಗುತ್ತಿತ್ತು. ದಾನ ಪಡೆದವರು ಹಲವು ಸಂದರ್ಭಗಳಲ್ಲಿ ಮೊದಲಿನಂತೆ ದಾನದ ವಸ್ತುಗಳ ಮೇಲಿನ ತೆರಿಗೆಯನ್ನು ಕಟ್ಟಬೇಕಾಗುತ್ತಿತ್ತು. ಅಂಥ ಸಂದರ್ಭಗಳಲ್ಲಿ ದಾನ ನೀಡುವಾಗ ಷರತ್ತು ಅಥವಾ ಕರಾರುಗಳನ್ನು ವಿಧಿಸಲಾಗುತ್ತಿತ್ತು. ಈ ವಿಚಾರವನ್ನು ಪುಷ್ಟೀಕರಿಸುವ ಕೆಲವು ಉದಾಹರಣೆಗಳಲು ಹೀಗಿವೆ.

ಇಮ್ಮಡಿ ತೈಲಪನ ಮಹಾಸಾಮಂತನಾದ ಕದಂಬ ವಂಶದ ಆದಿತ್ಯವರ್ಮರಸನು ಕೋಗಳಿ-೫೦೦ನ್ನು ಆಳುತ್ತಿದ್ದಾಗ ಅಲ್ಲಿನ ಸ್ಥಾನಾಧಿಪತಿ ಗಣಧರದೇವ ಭಟ್ಟಾರರೇ ಮೊದಲಾಗಿ ಅಲ್ಲಿಯ ಗಾವುಂಡ, ಸೆಟ್ಟಿ, ಬ್ರಾಹ್ಮಣರು, ಮಹಾಜನರು ಮತ್ತು ಪಂಚಮಠಗಳಿಗೆ ಭೂಮಿಯನ್ನು ದಾನವಾಗಿ ಹಂಚುತ್ತಾನೆ. ಅವರಲ್ಲಿ ಮಹಾಜನರು, ಗಾವುಂಡರು ಮತ್ತು ಪಂಚಮಠಗಳನ್ನು ಹೊರತುಪಡಿಸಿ ಉಳಿದವರು ಭೂಮಿಗೆ ಪ್ರತಿಫಲವಾಗಿ ತೆರಿಗೆ ಕೊಡಬೇಕೆಂಬುದನ್ನು ಶಾಸನ ವಿಧಿಸಲಾಗಿದೆ.[೯೩] ಅದೇ ರೀತಿ ಭೊಲ್ಲುಂಕೆಯಲ್ಲಿ(ಭಾಲ್ಕಿ) ಕೆಲವು ವ್ಯಾಪಾರಿಗಳು ಒಂದು ಸಭಾಮಂಟಪವನ್ನು ಕಟ್ಟಿಸಿ ಕೆಲವು ದ್ರವ್ಯಗಳನ್ನು ಮತ್ತು ಭೂಮಿಯನ್ನು ದತ್ತಿ ಬಿಡುತ್ತಾರೆ. ಆ ದತ್ತಿಗಳು ಕೇವಲ ದೇಗುಲಕ್ಕೆ ನೇಮಕರಾದವರಿಗೆ ಮಾತ್ರ ಸಲ್ಲಬೇಕೆಂದು ಕರಾರು ವಿಧಿಸುತ್ತಾರೆ.

೫೦ ಜನರು ಸೇರಿ ದುಗ್ಗಿಮಯ್ಯ ಪ್ರತಿಷ್ಠಾಪಿಸಿದ ಆದಿತ್ಯದೇವರಿಗೆ ತೋಟವನ್ನು ದಾನ ಬಿಡುತ್ತಾರೆ. ಈ ತೋಟವನ್ನು ದೇವರ ಸೇವೆಗೆಂದು ಕೋಣೆನ್ನರ ಕನ್ನಯ್ಯ ಎಂಬುವವನು ಪಡೆದುಕೊಳ್ಳುತ್ತಾನೆ. ಈತನು ತನ್ನ ಮಕ್ಕಳಾದಿಯಾಗಿ ಪ್ರತಿವರ್ಷ ಆರು ಹೊನ್ನಿನ ಗದ್ಯಾಣಗಳನ್ನು ಆದಿತ್ಯದೇವರಿಗೆ ನೀಡಬೇಕೆಂದು ಷರತ್ತು ವಿಧಿಸುತ್ತಾನೆ.[೯೪] ಇದನ್ನು ಇನ್ನೊಂದು ದೃಷ್ಟಿಯಿಂದ

ನೋಡಿದರೆ ಭೂಮಿದಾನ ಮಾಡಿದುದನ್ನು, ದೇವಾಲಯದ ವ್ಯವಸ್ಥಾಪಕರು ಬೇರೆಯವರಿಗೆ ಬಾಡಿಗೆಗೆ ಕೊಟ್ಟು ಪ್ರತಿವರ್ಷ ಅದರಿಂದ ಹಣವನ್ನು ಸಂಗ್ರಹಿಸಿ ದೇವರ ಕಾರ್ಯಗಳನ್ನು ಪೂರೈಸುತ್ತಿದ್ದರೆನೋ ಎನ್ನಿಸುತ್ತದೆ. ಇನ್ನೊಂದು ರೀತಿಯ ಕರಾರನ್ನು ಮೋರಿಗೇರಿಯ ಒಂದು ಶಾಸನವು ಉಲ್ಲೇಖಿಸುತ್ತದೆ. ಅದರ ಪ್ರಕಾರ ಕೋಗಳಿ ೫೦೦ರ ಮಠಾಧಿಪತಿಗಳಾಗಿದ್ದ ಸೋಮೇಶ್ವರ ಪಂಡಿತರಿಗೆ ದೇವರ ಸೇವೆ ತಪೋಧನರ ಆಹಾರಕ್ಕೆಂದು ದಾನ ಬಿಡಲಾಗಿದೆ. ಈ ದಾನವನ್ನು ಉಪಭೋಗಿಸಲು ತಪೋಧನರೆಂದು ಪರಿಗಣಿಸದೇ ಅಂಥವರನ್ನು ತಕ್ಷಣವೇ ಹೊರಹಾಕಬೇಕು ಎಂಬ ನಿರ್ಬಂಧವನ್ನು ಹಾಕಲಾಗಿದೆ.[96] ಇನ್ನು ಸುಂಕದಾನವನ್ನು ಹೇಳುವ ಪ್ರತಿಯೊಂದು ದಾನಶಾಸನಗಳೂ ನಿಯಮ ಅಥವಾ ಕರಾರುಗಳನ್ನು ಹೇಳುತ್ತವೆ.[97] ಗ್ರಾಮದಾನವನ್ನು ದತ್ತಿಬಿಟ್ಟಾಗ ಅಲ್ಲಿನ ಸುಂಕವೆಲ್ಲ ಗ್ರಾಮದಾನ ಪಡೆದವರಿಗೆ ಸಲ್ಲಬೇಕೆಂದು ಹೇಳಲಾಗುತ್ತಿತ್ತು. ಮತ್ತು ಯಾವ ಯಾವ ವಸ್ತುಗಳಿಗೆ ಎಷ್ಟೆಷ್ಟು ಸುಂಕವನ್ನು ಸಲ್ಲಿಸಬೇಕೆಂಬುದನ್ನು ನಿಖರಗೊಳಿಸಲಾಗುತ್ತಿತ್ತು.[98] ಅಂಥ ಷರತ್ತುಗಳನ್ನು ವಿಧಿಸುವ ನೂರಾರು ಸಂಖ್ಯೆಯ ಶಾಸನೋಕ್ತ ಉಲ್ಲೇಖಗಳಿವೆ.

ಗದ್ದುಬಳ್ಳಿಯ ಮಠವೊಂದಕ್ಕೆ ಪೆರುಮಾಳಿದೇವ ಎಂಬಾತನು ಎಂಟುನೂರು ಮರದ ಅಡಕೆ ತೋಟವನ್ನು ಕ್ರಯವಾಗಿ ಪಡೆದು ಮಠಕ್ಕೇ ದಾನ ಬಿಡುತ್ತಾನೆ. 'ಕ್ರಯ ಪ್ರಮಾಣ ಶಾಸನ'ದ ಸಂದರ್ಭದಲ್ಲಿ ಹಾಕುವ ಒಂದು ನಿಬಂಧನೆಯ ಅತಿಮುಖ್ಯವಾಗಿದೆ. 'ದಾನ ಬಿಟ್ಟ ಭೂಮಿಯನ್ನು ಮುಂದೆ ಯಾರಿಗೆ ಮಾರಿದರೂ ಊರ ಹಿತ್ತಲ ಭೂಮಿಯು ಯಾವಾಗಲೂ ತೊತ್ತಿನ ಮಕ್ಕಳಿಗೇ ಉಳಿಯಬೇಕು. ಆ ಭೂಮಿಯನ್ನು ಮಾರುವ ಹಕ್ಕು ಯಾರಿಗೂ ಇಲ್ಲ'.[99] ಎಂದು ಹೇಳಲಾಗಿದೆ. ಇಲ್ಲಿನ ಷರತ್ತು ಅಂದಿನ ಮಾನವೀಯ ಮೌಲ್ಯಗಳಿಗೆ ಒಂದು ಉತ್ತಮ ಉದಾಹರಣೆಯಾಗಿದೆ. ದಾನ ಕೊಟ್ಟ ಭೂಮಿಯನ್ನು ಮಾರಬಹುದಾದರೂ ಅಲ್ಲಿ ನಿರ್ದೇಶಿಸಿದ ಒಂದು ಭಾಗ ಭೂಮಿ ಮಾತ್ರ ಮಾರುವಂತಿಲ್ಲ. ಏಕೆಂದರೆ ಅದು ಯಾವಾಗಲೂ ಸೇವಕ ವರ್ಗದ (ತೊತ್ತಿನ ಮಕ್ಕಳು) ಆಸ್ತಿಯೇ ಆಗಿ ಉಳಿಯಬೇಕೆಂದು ಇಲ್ಲಿ ಆಶಿಸಲಾಗಿದೆ.

ಹೀಗೆ ದಾನ ನೀಡುವ ಹಾಗೂ ದಾನ ಪಡೆಯುವ ಕಾರ್ಯದಲ್ಲಿ ಕೆಲವು ನಿಬಂಧನೆಗಳು ಅಥವಾ ಷರತ್ತುಗಳಿಗೆ ಅವಕಾಶವಿದ್ದಿತು. ದಾನ ಕೊಡುವ ಷರತ್ತುಗಳು ವಿಧಿಸಲ್ಪಡುತ್ತಿದ್ದವು.

### ೧೦. ಬೇರೆಯವರಿಂದ ಪಡೆದು ಹಾಗೂ ಕೊಂಡುಕೊಂಡು ದಾನ ಬಿಟ್ಟಿರುವುದು ಅಥವಾ ಕ್ರಯದಾನ :

ದಾನದ ಪದ್ಧತಿಯಲ್ಲಿ ಇನ್ನೊಂದು ವಿಶೇಷ ಸಂಗತಿಯೆಂದರೆ, ಬೇರೆಯವರಿಂದ ಭೂಮಿಯನ್ನು ಪಡೆದು ದಾನ ನೀಡುವುದು. ಹಾಗೂ ಬೇರೆಯವರಿಂದ ಕೊಂಡುಕೊಂಡು ದಾನ ನೀಡುವುದು ಇದನ್ನು 'ಕ್ರಯದಾನ' ಎಂದು ಕರೆಯುತ್ತಾರೆ.[100] ದೇವರಿಗೆ ಭೂಮಿಯನ್ನು ದಾನಮಾಡಲು ಇಚ್ಚಿಸುವವರು, ಅವರಿಗೆ ದಾನಮಾಡಬೇಕಾದ ಸ್ಥಳದಲ್ಲಿ ಸ್ವಂತ ಭೂಮಿ ಇಲ್ಲದಿದ್ದರೆ ಬೇರೆ ಭೂಮಿಯನ್ನು ಕೊಂಡು ದಾನ ನೀಡಬೇಕಾಗುತ್ತದೆ. ದೇವಾಲಯಗಳಿಗೆ

ಇನ್ನಿತರ ವ್ಯಕ್ತಿಗಳಿಗೆ ಭೂದಾನ ಮಾಡಲು ಆಸಕ್ತಿ ಇದ್ದ ದಾನಿಗಳು ಸಾಮಾನ್ಯವಾಗಿ ಭೂಮಿಯನ್ನು ಕೊಂಡು ದಾನ ನೀಡಿದ್ದಾರೆ. ಪಿರಿಯ ಮೊಸರಗಿಯ ದೋತಿಸೆಟ್ಟಿ ಎಂಬುವವನು ಮೂಲಸ್ಥಾನ ದೇವಾಲಯದ ತಪೋಧನರಿಗೆ, ಬ್ರಾಹ್ಮಣರಿಗೆ ಛತ್ರಕ್ಕೆಂದು ೩೫ಮತ್ತರು ಭೂಮಿಯನ್ನು ಬೇರೆಯವರಿಂದ ಕೊಂಡುಕೊಂಡು ದಾನ ಬಿಡುತ್ತಾನೆ.[101] ೨ನೆಯ ಜಯಸಿಂಹನ ರಾಣಿ ಮಹಾದೇವಿಯು ಪುವ್ವರವಳ್ಳಿಯ ಬೀಡಿನಲ್ಲಿದ್ದಾಗ ಬಳ್ಳನಿಟ್ಟಣೆಯ ತ್ರೈಪುರುಷ ದೇವಾಲಯಕ್ಕೆದಾನ ಬಿಡಬೇಕೆಂದು ಅಯ್ಯಣವಾಡಿ ೨೦೦ನ್ನು ಆಳುತ್ತಿದ್ದ ಮನ್ನೆಯ ಲೋಕಾಧಿತ್ಯನಿಂದ ಭೂಮಿಯನ್ನು ಪಡೆದುಕೊಂಡು ದಾನ ಬಿಡುತ್ತಾಳೆ.[102] ಹೆಗ್ಗಡೆ ಚಾವುಂಡಯ್ಯನು ೪೫೦ಕಮ್ಮ ಗದ್ದೆಯನ್ನು ಕ್ರಯಪೂರ್ವಕವಾಗಿ ಕೊಂಡು ಸಿದ್ದೇಶ್ವರ ದೇವರ ನೈವೇದ್ಯಕ್ಕೆಂದು ಬಿಟ್ಟಿದ್ದಾನೆ.[103] ಅಂಕಲಗೆನಾಡ ಮನ್ನೆಯ ಇಂದರಸ ಮತ್ತು ಶ್ರೀಕೇಶವದೇವರಿಗೆ ಮತ್ತು ಬ್ರಾಹ್ಮಣರಿಗೆ ತಮ್ಮ ಧರ್ಮವಾಗಿ, ಭೂಮಿಯನ್ನು ಕೊಂಡು 'ಕ್ರಯದಾನ'ವಾಗಿ ನೀಡಿದ್ದಾರೆ.[104] ಭೂಮಿದಾನ ಮಾಡಬೇಕಾದ ಸ್ಥಳದಲ್ಲಿ ಭೂಮಿಯಿಲ್ಲದಿದ್ದಲ್ಲಿ ಮತ್ತು ಮಾರಾಟಕ್ಕೂ ಸಹ ಭೂಮಿ ಇಲ್ಲದೆ ಆಗಲೇ ಎಲ್ಲ ಭೂಮಿಯು ದೇವಾಲಯಗಳಿಗೆ ದಾನವಾಗಿ ನೀಡಲ್ಪಟ್ಟಿದ್ದರೆ, ಅಂತಹ ಭೂಮಿಯನ್ನು ದೇವಾಲಯಗಳಿಂದಲೇ ಕೊಂಡು ಮತ್ತೆ ಅದೇ ದೇವಾಲಯಗಳಿಗೆ ದಾನ ಮಾಡಲಾಗುತ್ತಿತ್ತು. ಇದರಿಂದ ದಾನಿಯು ಭೂದಾನವನ್ನೇ ಮಾಡಿದಹಾಗಾಗುತ್ತಿತ್ತು. ದೇವಾಲಯದ ಭೂಮಿ ದೇವಾಲಯಕ್ಕೆ ಉಳಿಯುತ್ತಿತ್ತು. ಹೆಸರಿಗೆ ಮಾತ್ರ ನಡೆದ ಕ್ರಯ (ಮಾರಾಟ)ದಿಂದ ದೇವಾಲಯದ ನಿಧಿಗೆ ಹಣ ಸೇರುತ್ತಿತ್ತು. ಅದೇ ಹಣವನ್ನು ಸಾಲವಾಗಿ ಬಂದ ಬಡ್ಡಿಯಿಂದ ದಾನಿಯು ಇಚ್ಚಿಸಿದಂತೆ ಹಂಚಿಕೆ ಮಾಡಲಾಗುತ್ತಿತ್ತು. ಹೀಗೆ ಅನುಕೂಲಕ್ಕೆ ಮಾಡಿಕೊಂಡ ಕ್ರಯದಾನವು ದೇವಾಲಯದ ಐಶ್ವರ್ಯ ಹೆಚ್ಚಲು ಅವಕಾಶ ನೀಡಿತ್ತು. ಅಕ್ಕಲಕೋಟೆಯ ಶಾಸನವೊಂದರ ಪ್ರಕಾರ ಹಡಪವಳ ದಂಡನಾಯಕ ಮಾಧವ ಭಟ್ಟನು ದೇವಾಲಯದಿಂದ ಕ್ರಯವಾಗಿ ೫೦೦ಮತ್ತರು ಭೂಮಿಯನ್ನು ಪಡೆದು ಕೆಳಕಂಡಂತೆ ದಾನ ಮಾಡಿದ್ದಾನೆ.[105]

ಎರಡು ದೇವರ ಅಂಗಭೋಗ, ನಿವೇದ್ಯ, ಖಂಡಸ್ಫುಟಿತ ಜೀರ್ಣೋದ್ಧಾರ, ಪಾತ್ರ ಇತ್ಯಾದಿಗಳಿಗೆ ದಾನ ಬಿಡಲಾಗಿದೆ.

| | |
|---|---|
| ಪಾವುಳಕ್ಕೆ | ೨೨೦ ಮತ್ತರು |
| ಅಕ್ಷರ ಖಂಡಿಕೆಗೆ | ೨೦ ಮತ್ತರು |
| ಧರ್ಮೇತಕ್ಕೆ | ೧೦ ಮತ್ತರು |
| ನೈಷ್ಠಿಕ ತಪೋಧನ ಬ್ರಹ್ಮಚಾರಿಗಳಿಗೆ | ೬೦ ಮತ್ತರು |
| ದೇವರ ಕಾವಲಿನ ಭಟರಿಗೆ.... | ೨೪ ಮತ್ತರು |
| ಹಸುವನ್ನು ಕಾಯುವ ಗೊಲ್ಲನಿಗೆ | ೬ ಮತ್ತರು |
| ಕಾಳೇಶ್ವರ ದೇವರ ಅಂಗಭೋಗ, ನಿವೇದ್ಯಕ್ಕೆ | ೧೦೦ ಮತ್ತರು |
| ಚೈತ್ರ ಪೈತ್ರಕ್ಕೆ | ೫೦ ಮತ್ತರು. |
| | ಒಟ್ಟು ೫೦೦ ಮತ್ತರು |

ಅದೇ ರೀತಿ ಗದ್ದುಂಬಳ್ಳಿಯ ಮಠದ ಆಚಾರ್ಯರಿಂದ ಎಂಟುನೂರು ಮರದ ಅಡಕೆ ತೋಟವನ್ನು ಪೆರುಮಾಳ್ ದೇವನು ಕ್ರಯವಾಗಿ ಪಡೆದು 'ಕ್ರಯಶೇಷ' ಉಳಿಯದಂತೆ ಹಣವನ್ನು ನೀಡಿ ಭೂಮಿಯನ್ನು ಕೊಂಡು ಪುನಃ ಅದೇ ಮಠಕ್ಕೆ ದಾನ ಬಿಡುತ್ತಾನೆ.[106] ಹೀಗೆ ಬೇರೆಯವರಿಂದ ಭೂಮಿಯನ್ನು ಪಡೆದು ಅಥವಾ ಕೊಂಡುಕೊಂಡು ದಾನವನ್ನು ಬಿಟ್ಟಿರುವುದನ್ನು ಹಲವು ಶಾಸನಗಳು ಉಲ್ಲೇಖಿಸುತ್ತವೆ.[107] ಇದೂ ಒಂದು ದಾನದ ವಿಶಿಷ್ಟ ಸ್ವರೂಪವಾಗಿದೆ.

### ೪.೩. ದಾನದ ಪ್ರೇರಣೆಗಳು

ದಾನಕ್ಕೆ ಒಂದು ಸಂದರ್ಭ ಒಂದು ಹಿನ್ನೆಲೆ ಇರುತ್ತಿತ್ತು. ಸಾಮಾಜಿಕ, ಧಾರ್ಮಿಕ ಶೈಕ್ಷಣಿಕ ಅಥವಾ ಇನ್ನಾವುದೊ ಉದ್ದೇಶಕ್ಕೆಂದು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನೀಡಲ್ಪಟ್ಟ ದಾನದತ್ತಿಗಳಿಗೆ ಒಂದಿಲ್ಲೊಂದು ಕಾರಣ ಇರುತ್ತಿತ್ತು. ದೇವಾಲಯವನ್ನು ಕಟ್ಟಿಸುವುದಕ್ಕೋಸ್ಕರ ದೇವರ ಭೋಗ ಅಂಗಭೋಗಗಳಿಗಾಗಿ ದೇವಾಲಯಕ್ಕೆ ಭೇಟಿಕೊಟ್ಟಾಗ ಸೂರ್ಯಗ್ರಹಣ, ಚಂದ್ರಗ್ರಹಣಗಳು ನಡೆದುದಕ್ಕಾಗಿ ಪರೋಕ್ಷ ವಿನಿಯೋಗಕ್ಕಾಗಿ ಹೀಗೆ ಹತ್ತು ಹಲವು ಕಾರಣಗಳಿಂದ ವಿವಿಧ ಸಂದರ್ಭಗಳಲ್ಲಿ ದಾನ ನೀಡಲಾಗಿದೆ. ಕೆಲವು ಸಂದರ್ಭಗಳಲ್ಲಿ ಯಾವುದೇ ಕಾರಣವಿಲ್ಲದೇ ವ್ಯಕ್ತಿ ಸ್ವಯಂ ಪ್ರೇರಿತರಾಗಿ ದಾನ ಬಿಟ್ಟುದುದಕ್ಕೆ ಕೊರತೆ ಏನಿಲ್ಲ. ಅಂದಿನ ಜನಕ್ಕೆ ಇಂಥಹುದೆ ಕಾರಣವೆಂಬ ಆಶಯದಿಂದ ದಾನಕೊಟ್ಟಿರುವುದು ತಿಳಿದು ಬರುತ್ತದೆ. ಅಂದಿನ ಕಾಲದಲ್ಲಿ ಸಾಕಷ್ಟು ದಾನಗಳು ನೀಡಲ್ಪಟ್ಟವು. ಆದರೆ ಇಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ದಾನ ಶಾಸನಗಳ ಸಂಖ್ಯೆ ೧೫೦೦. ಇಷ್ಟೊಂದು ಪ್ರಮಾಣದ ದಾನ-ದತ್ತಿಗಳನ್ನು ನೀಡಲು ಅಂದಿನ ಜನರಿಗಿದ್ದ ಪ್ರೇರಣೆಗಳೇನಿರಬಹುದು ಎಂಬುದನ್ನು ತಿಳಿಯಲೋಸುಗ ದಾನಕ್ಕೆ ಪ್ರೇರಣೆಗಳು ಎಂಬ ಈ ಶಿರ್ಷಿಕೆಯಡಿಯಲ್ಲಿ ಚರ್ಚಿಸಲಾಗಿದೆ. ದಾನಕ್ಕೆ ಪ್ರೇರಣೆಗಳನ್ನು ಸ್ಥೂಲವಾಗಿ ಇಲ್ಲಿ ಹತ್ತು ಪ್ರಕಾರಗಳಲ್ಲಿ ವಿಂಗಡಿಸಲಾಗಿದೆ. ಅವುಗಳಿಂತಿವೆ.

೧) ಧಾರ್ಮಿಕ ಭಾವನೆ ಮತ್ತು ಧರ್ಮ ಪ್ರಸಂಗಗಳು
೨) ಪರೋಕ್ಷ ವಿನಯ
೩) ಸಂಪತ್ತಿನ ಸದ್ವಿನಿಯೋಗ ಅಥವಾ ಪರೋಪಕಾರ ಗುಣ.
೪) ಪ್ರತಿಷ್ಠೆ ಅಥವಾ ಹೆಸರು ಚಿರಸ್ಥಾಯಿಗೊಳಿಸುವರು.
೫) ಕರ್ತವ್ಯ ಭಾವನೆ
೬) ಮನವಿ ಅಥವಾ ಬೇಡಿಕೆ
೭) ದೇವಾಲಯ ನಿರ್ಮಾಣ
೮) ವಾತಾವರಣ
೯) ಸ್ವಧರ್ಮ ನಿಷ್ಠೆ ಮತ್ತು ಅನ್ಯ ಮತ ದ್ವೇಷ
೧೦) ವಿಶೇಷ ಸಂದರ್ಭಗಳು - ಉತ್ಸವ, ಜಾತ್ರೆ ಯಜ್ಞ, ದಿಗ್ವಿಜಯ, ಭೇಟಿ, ಮದುವೆ, ವೃತ್ತಿ ಇತ್ಯಾದಿ

೧. ಧರ್ಮಪ್ರಸಂಗಗಳು :

"ಧರ್ಮನು ದೃಷ್ಟದೃಷ್ಟಸುಖದಾಮಿ" ಎಂಬುದು ಅಂದಿನ ಕಾಲದ ಭಾವನೆಯಾಗಿತ್ತು. ಸುಖವನ್ನು ನೀಡುವ, ಸತ್ಸಂಗವನ್ನು ಒದಗಿಸುವ ಧರ್ಮದ ಬಗೆಗೆ ಜನರಿಗೆ ಅಪಾರ ನಂಬಿಕೆ. ಅಂದಿನ ಕಾಲದಲ್ಲಿ ಜನರಲ್ಲಿ ಬೇರೂರಿದ್ದ ಧಾರ್ಮಿಕ ಭಾವನೆ ದಾನಕ್ಕೆ ಪ್ರೇರಣೆಯಾಗಿತ್ತು. ಪಾಪ–ಪುಣ್ಯ, ಸ್ವರ್ಗ–ನರಕ ಮುಂತಾದವುಗಳ ಭಯದಿಂದ ದೇವರ ಹಿರಿಮೆಗರಿಮೆಗಳನ್ನಾಶ್ರಯಿಸಿ, ಧರ್ಮದ ನಿಷ್ಠತೆಗೆ ಬದ್ಧವಾಗಿ ಹಲವಾರು ದಾನಗಳು ನೀಡಲ್ಪಟ್ಟವು. ಹರಕೆ ಹೊರುವವರು ಪುಣ್ಯಸಿಗಲೆಂದು ಬಯಸುವುದು ಮತ್ತೊಬ್ಬರಿಗೆ ಒಳ್ಳೆಯದಾಗಲೆಂದು ಬಯಸುವದು. ಅನ್ನದಾನ, ವಿದ್ಯಾದಾನ, ಭೂಮಿದಾನ ಮುಂತಾದವುಗಳನ್ನು ಮಾಡುವುದರಿಂದ ಶಾಶ್ವತವಾಗಿ ಸ್ವರ್ಗಕ್ಕೆ ಹೋಗುವರೆಂಬ ಧಾರ್ಮಿಕ ಮನೋಭಾವನೆ ಬೇರೂರಿದ್ದರಿಂದ ಕಲ್ಯಾಣಿ ಚಾಲುಕ್ಯರ ದಾನದತ್ತಿಗಳಿಗೆ ಧರ್ಮಪ್ರಸಂಗಗಳು ದಾನ ದತ್ತಿಗಳಿಗೆ ಪ್ರೇರಣೆಯಾಯಿತು. ಧರ್ಮಸಂದರ್ಭ ಎಂದರೆ ಧರ್ಮದ ಬಗೆಗೆ ತಿಳುವಳಿಕೆ ಮೂಡಿಸುವ ಸಲುವಾಗಿ ಆಯಾವರ್ತಮಾನಗಳಲ್ಲಿ ಚಲಾವಣೆಯಲ್ಲಿದ್ದ ಕಥೆಗಳ ಮತ್ತು ಚರ್ಚೆಗಳ ಮೂಲಕ ದಾನದ ಫಲ ಮತ್ತು ಮಹಾತ್ಮೆಗಳನ್ನು ಕುರಿತು ಕಾರ್ಯಕ್ರಮಗಳನ್ನು ಏರ್ಪಡಿಸುತ್ತಿದ್ದರು. ಅಂತಹ ಕಾರ್ಯಕ್ರಮಗಳೇ ಧರ್ಮಪ್ರಸಂಗಗಳು.

ಧರ್ಮ ಪ್ರಸಂಗಗಳ ಉದ್ದೇಶವೇ ದಾನಧರ್ಮಗಳಲ್ಲಿ ಜನರನ್ನು ತೊಡಗಿಸುವುದಾಗಿತ್ತು. ಆ ಮೂಲಕ ಜನರಿಗೆ ಪ್ರೇರಣೆ ಒದಗಿಸುವುದು ಮತ್ತು ಅವರಲ್ಲಿ ಉದಾರಗುಣವನ್ನು ರೂಪಿಸುವುದಾಗಿತ್ತು. ಇದರಲ್ಲಿ ಭೂಮಿದಾನ – ಅನ್ನದಾನ, ಗ್ರಾಮದಾನಗಳ ಮಹೋನ್ನತಿ ವಿದ್ಯಾದಾನದ ಮಹತ್ವದ ಕುರಿತು ವಿವರಣೆ ನೀಡಲಾಗುತ್ತಿತ್ತು. ಭೂಮಿಗೆ ಸಮನಾದ ನಿಧಿಯು ಬೇರೆ ಇಲ್ಲವಾದ ಕಾರಣ ಭೂದಾನಕ್ಕೆ ಸಮನಾದ ಮತ್ತೊಂದು ದಾನವು ಇಲ್ಲ. ಮರಣದ ನಂತರವು ಸ್ಮರಿಸಲ್ಪಡುವ ಭೂದಾನವು ಸರ್ವಪಾಪಗಳನ್ನು ಪರಿಹರಿಸುತ್ತದೆ; ಗ್ರಾಮದಾನದಿಂದ ಇಪ್ಪತ್ತೊಂದು ಜನ್ಮಗಳವರೆಗೂ ಯಥೇಚ್ಚವಾದ ಐಶ್ವರ್ಯ ಲಭಿಸುತ್ತದೆ; ಈ ಪ್ರಪಂಚದಲ್ಲಿ ಭೂತ, ಭವಿಷ್ಯ, ವರ್ತಮಾನಗಳಲ್ಲಿ ಮುಖ್ಯವಾದುದು ಅನ್ನ. ಎಲ್ಲವೂ ಅನ್ನಮೂಲವಾದುದು ಮತ್ತು ಅನ್ನ ಪ್ರತಿಷ್ಠಾಪಿತವಾದುದು. ಆದ್ದರಿಂದ ಅನ್ನದಾನದಿಂದ ಎಲ್ಲ ದಾನಗಳ ಫಲ ದೊರೆಯುತ್ತದೆ. ಅದರಂತೆಯೇ ಮೂರುಲೋಕಗಳು, ನಾಲ್ಕು ವರ್ಣಗಳು, ನಾಲ್ಕು ಆಶ್ರಮಗಳು, ಬ್ರಹ್ಮಾದಿದೇವತೆಗಳು ಎಲ್ಲರ ಪುಣ್ಯವು ವಿದ್ಯಾದಾನದಲ್ಲಿದೆ. ಉಪಾಧ್ಯಾಯರಿಗೆ, ವಿದ್ಯಾರ್ಥಿಗಳಿಗೆ ದಾನಮಾಡಿದರೆ ತೀರ್ಥಯಾತ್ರೆ ಮಾಡಿದ ಪುಣ್ಯವು ಲಭಿಸುತ್ತದೆ. ಹೀಗೆ ವಿವಿಧ ದಾನಗಳು ಮತ್ತು ಅವುಗಳ ಫಲಗಳನ್ನು ಧರ್ಮಪ್ರಸಂಗಗಳಲ್ಲಿ ಹೇಳಲಾಗುತ್ತಿತ್ತು. ರೇಚರಸ ಎಂಬುವನು ಒಂದು ಧರ್ಮಪ್ರಸಂಗದಿಂದ ಪ್ರೇರಿತನಾಗಿ ದೇವಾಲಯಕ್ಕೆ, ಛತ್ರಕ್ಕೆ ಮತ್ತು ವಿದ್ಯಾದಾನಕ್ಕೆಂದು ಭೂದಾನ ನೀಡುತ್ತಾನೆ. ತನ್ಮೂಲಕ ಅನೇಕರನ್ನು ಪ್ರೇರೇಪಿಸುತ್ತಾನೆ.[108] ಮೇಟಿಸೆಟ್ಟಿ, ಅವನ ಹೆಂಡತಿ ದೋರಿಕಬ್ಬೆ ಮತ್ತು ದಾಸಿ ಸೆಟ್ಟಿಯರು ಧರ್ಮಕಥಾ ಪ್ರಸಂಗದಿಂದ ಧರ್ಮಚಿತ್ತ ಹುಟ್ಟಿ ಮರಿಯಸೆಯಲ್ಲಿ ತಾವೇ ಪ್ರತಿಷ್ಠೆ ಮಾಡಿದ ಮಲ್ಲಿಕಾರ್ಜುನ ದೇವರ ನಿವೇದ್ಯ ಮತ್ತಿತರ ಸೇವೆಗಳಿಗೆಂದು ದಾನ ನೀಡುತ್ತಾರೆ.[109]

ಅದೇ ರೀತಿ ಶಿವಾಚಿಭಟ್ಟ ಎಂಬುವವನು ಧರ್ಮಪ್ರಸಂಗದಿಂದ ಪ್ರೇರಿತನಾಗಿ ಮೂವತ್ತಿರ್ಛ್ಛಾಸಿರಕ್ಕೆ ಬಿನ್ನವಿಸಿ ಭೂಮಿಯನ್ನು ಪಡೆದು ಕೆರೆ ಮತ್ತು ದೇವಾಲಯಗಳನ್ನು ನಿರ್ಮಿಸಲು ದಾನ ನೀಡುತ್ತಾನೆ.[110] ಶಿವಮೊಗ್ಗದ ಶಾಸನವೊಂದು ಹಡವಳ ಹೆಮ್ಮಾಡಿ ದೇವರಸನು ಶಿವಧರ್ಮ ಕಥನವನ್ನು ಕೇಳಿ ದೇವರಿಗೆ ದಾನ ಮಾಡಿ ಇಹಲೋಕಕ್ಕೆ ಖ್ಯಾತಿಯನ್ನು ಪರಲೋಕ್ಕೆ ಸುಖವನ್ನು ಸಂಪಾದಿಸಿದನೆಂದು ಹೇಳುತ್ತದೆ.[111] ಬಳ್ಳಿಗಾವಿಯಲ್ಲಿ ಜಗದೇವರಸನು ತನ್ನ ಮಗ ಬಮ್ಮರಸನ ಜೊತೆಗೆ 'ಚತುರ ಬುಧಜನ ಪರಿವಾರಂಬೆರೆಸು ಧರ್ಮಪ್ರಸಂಗಮಂ' ಕೇಳುತ್ತ ಕೇದಾರ ಮತ್ತು ಆ ಸ್ಥಾನದ ಆಚಾರ್ಯ ಗೌತಮಶರ್ಮನ ಗುಣಗಳನ್ನು ಕೇಳಿ ದೇವರಿಗೆ ಹಲವು ದಾನಗಳನ್ನು ನೀಡಿದ್ದಾನೆ.[112] ಹಾಗೆಯೇ ಮಾಯಿದೇವರಸನು ಬಳ್ಳಿಗಾವೆಯ ನೆಲೆವೀಡಿನಲ್ಲಿ ಒಂದು ದಿನ 'ಸರಳ ಬುಧ ಜನ ಪರಿವಾರ ಪರಿವೃತನಾಗಿರ್ದು ಧರ್ಮಪ್ರಸಂಗ'ವನ್ನು ಕೇಳುತ್ತ ದಕ್ಷಿಣ ಕೇದಾರ ಮತ್ತು ಆಚಾರ್ಯ ವಾಮಶಕ್ತಿ ಪಂಡಿತ ದೇವರ ಗುಣವರ್ಣನೆ ತಿಳಿದು ಇಲ್ಲಿ ಏನಾದರೂ ಒಂದು ಧರ್ಮವನ್ನ ಮಾಡಲೇಬೇಕೆಂದು ಇಚ್ಛೆಸಿ ದತ್ತಿಗಳನ್ನು ಬಿಡುತ್ತಾನೆ.[113] ಈ ಮೇಲಿನ ಸಂದರ್ಭಗಳನ್ನ ಗಮನಿಸಿದಾಗ ದಾನ ನೀಡಲು ಜನರಲ್ಲಿ ಧರ್ಮಪ್ರಸಂಗಗಳು ಪ್ರೇರಣೆಯನ್ನ ನೀಡಿರುವುದು ಸ್ಪಷ್ಟವಾಗುತ್ತದೆ. ಅಲ್ಲದೆ ದಾನ ಮಾಡಿದ, ಈ ಮೇಲೆ ಉಲ್ಲೇಖಿಸಿದ ವ್ಯಕ್ತಿಗಳು ತಮ್ಮ ಪರಿವಾರದೊಂದಿಗೆ ಧರ್ಮಪ್ರಸಂಗಗಳಲ್ಲಿ ಭಾಗವಹಿಸುವುದು ತಿಳಿದುಬರುತ್ತದೆ. ಧರ್ಮಪ್ರಸಂಗಗಳು ಶ್ರವಣ ಮತ್ತು ದೃಶ್ಯ ಮಾಧ್ಯಮಗಳಲ್ಲಿದ್ದವೆನಿಸುತ್ತದೆ. ಈಗಲೂ ಶ್ರವಣ ಮಾಧ್ಯಮದಲ್ಲಿರುವ ಹರಿಕಥೆ, ಶಿವಕಥೆಗಳು, ದೃಶ್ಯ ಮಾಧ್ಯಮದಲ್ಲಿರುವ ಯಕ್ಷಗಾನ ಪ್ರಸಂಗಗಳು, ದೊಡ್ಡಾಟಗಳಂತೆ ಅಂದೂ ಧರ್ಮಪ್ರಸಂಗಗಳು ಜನರಲ್ಲಿ ಧಾರ್ಮಿಕ ಭಾವನೆಯನ್ನು ಹುಟ್ಟಿಸುತ್ತಿದ್ದವು. ಧರ್ಮಪ್ರಸಂಗಗಳಲ್ಲಿ ಯಾವ ರೀತಿಯಾದ ವಿಷಯಗಳಿರುತ್ತಿದ್ದವು ಎಂಬುದನ್ನು ಕ್ರಿ.ಶ. ೧೧೫೪ರ ಶಾಸನವೊಂದು ಹೀಗೆ ತಿಳಿಸುತ್ತದೆ. "ಅಂತೂ ಧರ್ಮಪ್ರಸಂಗಮಂ ಪುಟ್ಟಿಸಿ ಭೂಮಿದಾನದ ಮಹಾತ್ಮೆಯುಮಂ ಮಹೋನ್ನತಿಯುಮಂ ವಿದ್ಯಾದಾನದ ಮಹತ್ವಮುಮಂ ಪೇಳ್ದೊಡೆಮದೆಂತೆಂದೊಡೆ ॥ಶ್ಲೋಕ॥ ಸರ್ವೇಷಾಮೇದ ದಾನಾನಾಂ ಭೂಮಿದಾನಂ ಪರಂಸ್ಕೃತಂ । ಸರ್ವಪಾಪಹರಂ ತದ್ದಿಸ್ವರ್ಗ್ಯಚಾಪುರ್ಮ್ಮನೀಷಿಣಃ . . . . . . . . . ನ ಸಂಶಯಃ । ಯತ್ಪುಂಣ್ಯಂ ತೀರ್ತ್ಥಯಾತ್ರಾಯಾಂ ಯತ್ಪುಣ್ಯಂ ಯಜ್ಞನಾಂ ತಥಾ ತತ್ಪುಣ್ಯಂ ಕೋಟಿಗುಣಿತಂ ವಿದ್ಯಾದಾನಾಲ್ಲಬೇನ್ನರಃ॥". ಹೀಗೆ ಧರ್ಮ ಪ್ರಸಂಗಗಳಲ್ಲಿ ವಿವಿಧ ಬಗೆಯ ಮತ್ತು ಅವುಗಳಿಂದ ಲಭಿಸುವ ಫಲಗಳನ್ನು ವಿವರಿಸಲಾಗುತ್ತಿತ್ತು.[114] ಶಿವಪರವಾದ ಮತ್ತು ವಿಷ್ಣುಪರವಾದ ಪುರಾಣಗಳ ಪ್ರಸಂಗಗಳನ್ನು ಆಯ್ದುಕೊಂಡು ತನ್ಮೂಲಕ ದಾನದ ಮಹಾತ್ಮೆಯನ್ನು ತಿಳಿಸಿ ಕೇಳಿದವರು ನೋಡಿದವರು ದಾನ ಮಾಡುವುದರ ಮೂಲಕ ಧಾರ್ಮಿಕ ಕಾರ್ಯಗಳಲ್ಲಿ ತೊಡಗುವಂತೆ ಈ ಧರ್ಮಪ್ರಸಂಗಗಳು ಪ್ರೇರಣೆ ನೀಡುತ್ತಿದ್ದವು.

೨. ಪರೋಕ್ಷವಿನಯ :

ದೇವಾಲಯಗಳ ನಿರ್ಮಾಣ ಮತ್ತು ಅವುಗಳಿಗೆ ದಾನ ನೀಡಿದ ಸಂದರ್ಭಗಳಿಗೆ ಪರೋಕ್ಷವಿನಯದ ಪ್ರೇರಣೆಯೂ ಒಂದು. ಶಾಸನಗಳ ಅಧ್ಯಯನದಲ್ಲಿ ಹಲವು ಶಾಸನಗಳ ಉಲ್ಲೇಖಗಳು ಪರೋಕ್ಷ ವಿನಯದ ಕಾರಣಕ್ಕೆ ದಾನಬಿಟ್ಟಿರುವುದನ್ನು ತಿಳಿಸುತ್ತವೆ.

ಪರೋಕ್ಷ ವಿನಯವೆಂದರೆ ಪರಲೋಕಕ್ರಿಯೆ, 'ಪರೋಕ್ಷ ಕ್ರಿಯೆ' ಎಂಬ ಪದಗಳೇ ಅಲ್ಪಸ್ವಲ್ಪ ವ್ಯತ್ಯಾಸಗೊಂಡು ಅರ್ಥವ್ಯಾಪ್ತಿಯನ್ನು ಹೆಚ್ಚಿಸಿಕೊಂಡು ಅಂತ್ಯಸಂಸ್ಕಾರಗಳಲ್ಲಿ ಸತ್ತವ್ಯಕ್ತಿಯ ಮರಣೋತ್ತರ ಜೀವನದ ಶ್ರೇಯಸ್ಸಿಗಾಗಿ ಮಾಡುವ ಕರ್ತವ್ಯಗಳು, ಆಚರಣೆಗಳು ಪರೋಕ್ಷ ವಿನಯ ಎನಿಸುತ್ತವೆ.[115] "ವ್ಯಕ್ತಿಯ ಸಾವಿನನಂತರ ಅವನಿಗೆ ಸದ್ಗತಿದೊರೆಯಲಿ" ಎಂಬ ಉದ್ದೇಶದಿಂದ ಮಾಡುವ ದಾನ ಪರೋಕ್ಷ ವಿನಯದಾನ. ವಿನಯ ಎಂದರೆ "ಮುಕ್ತಿಗೆ" ಕೊಂಡೊಯ್ಯುವಿಕೆ ಎಂದಾಗುತ್ತದೆ. ಅಂದರೆ "ಸತ್ತ ವ್ಯಕ್ತಿಯ ಆತ್ಮವನ್ನು ಮುಕ್ತಿಗೊಳಿಸಲೆಂದೆ ನೀಡಿದ ದಾನ ಪರೋಕ್ಷ ವಿನಯ" ಎಂದು[116] ಡಾ॥ ಎಂ. ಚಿದಾನಂದಮೂರ್ತಿಯವರು ಅಭಿಪ್ರಾಯಪಟ್ಟಿದ್ದಾರೆ.

ಪರೋಕ್ಷ ವಿನಯವಾಗಿ ದಾನ ನೀಡುತ್ತಿದ್ದರಿಂದ ದಾನಕಾರ್ಯಕ್ಕೆ ಇದೊಂದು ಪ್ರೇರಣೆಯಾಗಿದೆ. ಇಂತಹ ದಾನ ಕೊಟ್ಟ ಕೆಲ ಉದಾಹರಣೆಗಳನ್ನು ಈ ಕೆಳಗಿನಂತೆ ಗಮನಿಸಬಹುದಾಗಿದೆ.

ತಿಕಣ್ಣ ಪ್ರಮುಖ ಲೆಂಕಸಾಸಿರ್ವ್ವನು ವಿನಯಾದಿತ್ಯದೇವನು ಮರಣ ಹೊಂದಿದಾಗ ಅವನ ಪರೋಕ್ಷವಾಗಿ ವಿನಯವಾಗಿ ೨೪ಜನರಿಗೆ ಸತ್ರವನ್ನು ನೊಳಂಬೇಶ್ವರ ಲಂಕೇಶ್ವರ ದೇವರ ಪ್ರತಿಷ್ಠೆಯನ್ನು ಮಾಡಿಸಿ ಅದಕ್ಕೆ ದಾನ ಬಿಡುತ್ತಾನೆ.[117] ಮಹಾಸಾಮನ್ತ ಮಾಚಿಯನ್ನನು 'ಶಿವಲೋಕ ಪ್ರಾಪ್ತನಾದ' ನಂತರ ಹೆಗ್ಗಡೆ ಮೈಯಿಂದಯ್ಯ ಎಂಬುವನು ಪರೋಕ್ಷ ವಿನಯವಾಗಿ ಮಾಚೇಶ್ವರ ದೇವಾಲಯ ಮಾಡಿಸುತ್ತಾನೆ.[118] ತೊರೆ ನಾಡ ಹೆರ್ಜಾದಿಯಲ್ಲಿ ಮಹಾಪ್ರಧಾನ ದಂಡನಾಯಕ ಚಟ್ಟಿಮಯ್ಯ ಮತ್ತು ಅವನ ತಮ್ಮ ಚಾಮರಾಜ ಇಬ್ಬರು ಸೇರಿ ತಮ್ಮನ್ನು ಹೆತ್ತ ತಾಯಿಕಮ್ಮವ್ವೆಗೆ ಪರೋಕ್ಷ ವಿನಯವಾಗಿ ಎರಡು ಬಸದಿಗಳನ್ನು ಮಾಡಿಸಿ ಅದಕ್ಕೆ ದಾನ ಬಿಟ್ಟಿದ್ದಾರೆ.[119] ತೊರೆಕಾರಟ್ಟಿಯ ಆಚಯನ ಮಗ ಕೇಶವಭಟ್ಟನು ತನ್ನ ಮಾತಾಪಿತೃಗಳ ೨೧ ಕುಲದ ಪರೋಕ್ಷವಿನಯ ಮಾಡಿ ದಾನ ನೀಡಿದ್ದಾನೆ.[120] ಆರನೇ ವಿಕ್ರಮಾದಿತ್ಯನ ರಾಣಿ ಮಾಳಲಾದೇವಿಯು ಪರೋಕ್ಷವಿನಯವಾಗಿ ಕಲ್ಕೇರೆಯಲ್ಲಿ ಶಿವಾಲಯ ನಿರ್ಮಿಸಿ ಅದಕ್ಕೆ ಭೂದಾನ ನೀಡಿದ್ದಾಳೆ.[121] ಹೀಗೆ ಇನ್ನೂ ಹಲವಾರು ಶಾಸನಗಳು ಪರೋಕ್ಷವಿನಯವಾಗಿ ದಾನ ನೀಡಿದ ಉಲ್ಲೇಖಗಳು ದೊರಕುತ್ತವೆ. ಸತ್ತವ್ಯಕ್ತಿಯು ಬದುಕಿದ್ದಾಗ ಗಳಿಸಿದ ಯಶಸ್ಸು ಕೀರ್ತಿ ಒಳ್ಳೆಯ ಹೆಸರು ಅವನ ಸಾವಿನ ನಂತರವೂ ಬಹಳ ಕಾಲ ಜನರ ಮನಸ್ಸಿನಲ್ಲಿ ಉಳಿಯಲಿ ಎಂಬ ಕಾರಣದಿಂದ ಮತ್ತು ಸತ್ತವ್ಯಕ್ತಿಗೆ ಸದ್ಗತಿ ದೊರೆಯಲಿ ಎಂಬ ಕಾರಣಕ್ಕೆ

ಪರೋಕ್ಷ ವಿನಯ ಮಾಡುತ್ತಿದ್ದರು. ಅದು ದಾನದತ್ತಿಗಳಿಗೆ ಪ್ರೇರಕವಾದ ಅಂಶಗಳಲ್ಲಿ ಒಂದಾಗಿತ್ತು ಎಂಬುದು ಕಂಡುಬರುತ್ತದೆ.

## ೩. ಸಂಪತ್ತಿನ ಸದ್ವಿನಿಯೋಗ ಅಥವಾ ಪರೋಪಕಾರಗುಣ :

ಧರ್ಮಪೊಳಲಿನ (ಡಂಬಳ) ಅಜ್ಜಮಯ್ಯ ಅಥವಾ ಅಜ್ಜಮನಾಯಕ ಎಂಬಾತನು ತನ್ನ ತೋಳ್ಬಲದಿಂದ ಸಂಪಾದಿಸಿದ ಐಶ್ವರ್ಯವನ್ನು ಸಾರ್ಥಕಗೊಳಿಸಲು ಅಜ್ಜಮೇಶ್ವರ ಎಂಬ ಹೆಸರಿನ ಶಿವನಭವನವನ್ನು ಕಟ್ಟಿಸಿ ಅದಕ್ಕೆ ಭೂದಾನ ಬಿಡುತ್ತಾನೆ, ಕಲ್ಯಾಣ ಚಾಲುಕ್ಯರ ಕಾಲದ ಆದರ್ಶವೇ ಇದಾಗಿತ್ತು, ನ್ಯಾಯವಾದ ರೀತಿಯಲ್ಲಿ ಧನಸಂಪಾದನೆ ಮಾಡಬೇಕು, ಆ ಧನದ ಸಹಾಯದಿಂದ ಸಮಾಜೋಪಯೋಗಿ ಧರ್ಮಕಾರ್ಯಗಳನ್ನು ಮಾಡಬೇಕು ಎಂಬುದಾಗಿತ್ತು. ಇದರಿಂದ ನೂರಾರು ಸಾವಿರಾರು ಸಂಖ್ಯೆಯಲ್ಲಿ ದಾನಗಳು ನೀಡಲ್ಪಟ್ಟವು. ಪ್ರತಿಯೊಂದು ದಾನಕ್ಕೂ ಸಂಪತ್ತಿನ ಸದ್ವಿನಿಯೋಗಾರ್ಥವಾಗಿ ನೀಡಲಾಗಿದೆ ಎಂದು ಹೇಳಿಲ್ಲವಾದರೂ ದಾನ ಹಿನ್ನಲೆಯ ಉದ್ದೇಶವೇ ಪರೋಪಕಾರವಾಗಿದೆ. ಸಂಪತ್ತನ್ನು ಛತ್ರ, ಅರವಂಟಿಗೆ, ಕೆರೆ, ಸಾಲೆ, ತೋಟ, ಬಾವಿ, ತಟಾಕ, ಅಗ್ಗಿಷ್ಟಿಕೆ,ದೇವಾಯತನಕ್ಕೆ ವಿನಿಯೋಗಿಸಬೇಕು. ತಂದೆಯ ಐಶ್ವರ್ಯವನ್ನು ತಿಂದು ಮದಿಸಿದವನು ಒಳ್ಳೆಯ ಮನುಷ್ಯ ಎನ್ನಿಸಿಕೊಳ್ಳುವುದಿಲ್ಲ ಎಂಬ ಭಾವನೆ ಸಾರ್ವತ್ರಿಕವಾಗಿತ್ತು. ರಾಜರು, ಸಾಮಂತರು, ಮಾಂಡಳಿಕರು, ವಿವಿಧ ವರ್ಗದ ಅಧಿಕಾರಿಗಳು ಮತ್ತು ಶ್ರೀಮಂತ ವರ್ಗಕ್ಕೆ ಸೇರಿದ ಅನೇಕರು ದಾನ ಮಾಡಿದ್ದಾರೆ. ಅವರಲ್ಲಿ ಕೆಲವರಿಗಾದರೂ ತಾವು ಸಂಪಾದಿಸಿದ ಸಂಪತ್ತು ಸತ್ಪಾತ್ರಕ್ಕೆ ಸಲ್ಲಲಿ ಎಂಬ ಅಭಿಲಾಷೆ ಇದ್ದೇ ಇರುತ್ತದೆ. ನಿಡೋಣಿ ಶಾಸನವೊಂದರಲ್ಲಿ ಬರುವಂತೆ ಮೇಣ್ಡಿಯ ಬರ್ಮ್ಮಣನು ನಿಡುವಣಿಯಲ್ಲಿ ವಿಷ್ಣುಗೃಹವನ್ನು ತನ್ನ ಸಂಪತ್ತಿನಿಂದ ನಿರ್ಮಿಸುತ್ತಾನೆ.[122] ಅದಕ್ಕೆ ಕಾರಣವನ್ನು ಬಹು ಮನೋಜ್ಞವಾಗಿ ಈಕೆಳಗಿನಂತೆ ವರ್ಣಿಸಿದೆ.

**ಪಡೆದಪೆವೆಂದು ನೆತ್ತಿಯ ಬೆಮರು ಮಿಡಿಯಿಂದಿಳಿವನ್ತು ದುಕ್ಕದಲು**
**ದುಡಿಯುತಮಿರ್ಪ್ಪರಲ್ಲದೆ ಜಸಂಬಡೆವಲ್ಲಿಗೆ ಧರ್ಮದಲ್ಲಿಗೇಂ ।**
**ಬಿಡುವರೆ ಪೊಂನನೊಕ್ಕಲಿಗರಮ್ಮ ಒಬಾಪ್ಪೆನೆ ವಿಷ್ಣುಗೇಹಮಂ**
**ನಿಡುವಣಿಯಲ್ಲಿ ಮಾಡಿಸಿದ ಮೇಣ್ಡಿಯ ಬರ್ಮ್ಮಣನನ್ತಿರೋವ್ವರುಂ॥**

**ಗಿಡುಗಡಿದುರ್ತ್ತು ಬಿತ್ತಿ ಫಲಮಂ ಪಡೆದುಣ್ಣದೆ ಲಾಬಲೋಬದಿಂ**
**ಮಡಗಿ ಬಳಿಕ್ಕೆ ಗಾವಣಿಗೆ ಗಂಟಿಗೆ ಟೊಪ್ಪರವಿಟ್ಟುಕೊಳ್ವನಿ ।**
**ಗೂಡಿ ನ್ರಿಪಜ್ಗತ್ತ ತೆತ್ತು ಬರಿದಾಗಿ ಬೆಳ್ಮೊಗದಿಂದವಿರ್ಪ್ಪಬೆ**
**ಳ್ಗುಡಿಯರನೇಕೆ ಪೋಲಿಸುವೆ ಬರ್ಮ್ಮಣನೊಳು ಹಿತಧರ್ಮ್ಮಕಾರ್ಯನೊಳ್**

**ತಾನುಣ್ಣದೆ ಪೆರರ್ಗ್ಗಿಕ್ಕದೆ**
**ಪೇನಿಯ ಪೆವ್ವಡುಕೆಯೆನಿಸಿ ಮಡಗದೆ ಧನಮಂ ।**
**ಮಾನವರತ್ನಂ ಬರ್ಮ್ಮಣ**
**ನಾನಂದದೆ ವಿಷ್ಣು ಭವನಮಂ ಮಾಡಿಸಿದಂ ॥**

ಅಂದರೆ : ಧರ್ಮಕ್ಕೆ ಹಣವನ್ನು ಬಿಡದೆ, ದುಡಿಯುತ್ತಲೇ ಇದ್ದು, ಕೂಡಿಟ್ಟ ಹಣವನ್ನು ರಾಜನಿಗೆ ತೆತ್ತು, ತಾನು ಉಣ್ಣದೆ ಬೇರೆಯವರಿಗೂ ನೀಡದೆ ಉಡುಗೊರೆಯಾಗಿ ಹಣವನ್ನು ಉಳಿಸದೆ, ಗಳಿಸಿದ ಧನವನ್ನು ಸರಿಯಾಗಿ ವಿನಿಯೋಗಿಸದೇ ನೆತ್ತಿಯ ಬೆವರನ್ನು ಸುರಿಸುತ್ತಾ ದು:ಖದಿಂದ ದುಡಿಯುತ್ತಲೇ, ಉತ್ತು-ಬಿತ್ತಿ ಫಲವನ್ನು ಮಾತ್ರ ಪಡೆಯದೆ ಇರುವ ಜನರಂತೆ ಇರದೇ ಬರ್ಮ್ಮಣನು ಆನಂದದಿಂದ ತನ್ನ ಸಂಪತ್ತನ್ನೆಲ್ಲ ವಿನಿಯೋಗಿಸಿ ವಿಷ್ಣುಭವನವನ್ನು ನಿರ್ಮಿಸಿದನೆಂದು ಶಾಸನ ಉಲ್ಲೇಖಿಸುತ್ತದೆ.

ಅದರಂತೆ "ಪಡೆದರ್ಥಂ ಕಳ್ಳರಿಂ ದಾಯಿಗರಿನಳಿಪರಿಂ ಭೂಪರಿಂ ಕಿಚ್ಚಿನಿಂದಂ ಕಿಡುಗುಂ ತಾನಂತದೆ ಶಾಸ್ವತಮೆನಿಶಾಸ್ವತಂ ಮಾರ್ಪನೆಂದಾದಡೆ" ಎಂದು ಭಾವಿಸಿ ಕಾಳಿಯಕ್ಕನು ಸದ್ಭಕ್ತಿಯಿಂದ ಜಿನಪತಿ ಸದ್ಗೇಹವನ್ನು ಸೆಂಬನೂರಿನಲ್ಲಿ ಮಾಡಿಸಿದಳೆಂದು ಶಾಸನವೊಂದು ತಿಳಿಸುತ್ತದೆ.[123]ಅದೇ ರೀತಿ 'ಪಡೆದೊಡಮೆಯೊಳನಿತಿನಿತಂ ಮಡಗದೆ' ರೇವಗವುಂಡನು ದಾನವನ್ನು ಮಾಡಿ ಕೆರೆ, ಬಾವಿ, ದೇಗುಲಗಳನ್ನು ನಿರ್ಮಿಸುತ್ತಾನೆ.[124] ಏಚಿಸೆಟ್ಟಿ ಎಂಬಾತನು 'ಪಡೆದರ್ತ್ಥಂ ದ್ವಿಜದೇವತಾ ಪ್ರಕಾರ ದಾನೂನ ಪೂಜಾರ್ತ್ಥವಾದೊಡೆ ಸೌಖ್ಯಾನ್ವಿತನಪ್ಪೆನಲ್ಲದಡೆ ದಾರಿದ್ರಾನ್ವಿತಾಯಾಸದೊಳು ತೊಡೆರ್ವ್ವಂತಪುದಿದೆಂದು' ತಿಳಿದು ಬಡವರಿಗೆ ಅನ್ನದಾನ ಮಾಡಲು ಮತ್ತು ಶಂಕರ ದೇವಾರ್ಚನೆಗೆಂದು ತಾನು ಗಳಿಸಿದ ಮಾನ್ಯವನ್ನು ವಿನಿಯೋಗಿಸುತ್ತಾನೆ.[125]

ಈ ಮೇಲಿನ ಶಾಸನೋಲ್ಲೇಖಗಳನ್ನು ಗಮನಿಸಿದಾಗ ದಾನಕ್ಕೆ ಕಾರಣವಾದ ಅಂಶಗಳಲ್ಲಿ ಗಳಿಸಿದ ಸಂಪತ್ತನ್ನು ಸದ್ವಿನಿಯೋಗ ಮಾಡುವುದು ಒಂದಾಗಿತ್ತೆಂಬುದು ತಿಳಿದುಬರುತ್ತದೆ. ಗಳಿಸಿದ ಸಂಪತ್ತನ್ನು ಹಾಗೇ ಇಟ್ಟರೆ ಅದು ಕೆಡುತ್ತದೆ. ಧರ್ಮಕ್ಕೆ, ದೇವಾಲಯಕ್ಕೆ, ಕೆರೆ, ಆರವೆ, ಸತ್ರಗಳ ನಿರ್ಮಾಣಕ್ಕೆಂದು ಅದನ್ನು ವಿನಿಯೋಗಿಸಿದರೆ ಹೇಗಾದರೂ ಒಂದು ವಿಧದಲ್ಲಿ ಬೇರೆಯವರಿಗೆ ಉಪಯೋಗವಾಗುತ್ತದೆ. ತಾನೂ ಉಣ್ಣದೆ, ಬೇರೆಯವರಿಗೂ ಕೊಡದೆ ಕೂಡಿಟ್ಟ ಹಣ, ಹೊನ್ನು, ಸಂಪತ್ತುಗಳು 'ತಿಂದುಂಡು ಹೇನಿಗೆ ಉಡುಗೊರೆ ನೀಡಿದಂತೆ' ವ್ಯರ್ಥವಾಗದೆ ಸದ್ಬಳಕೆಯಾಗಬೇಕೆಂದು ಅಂದಿನ ಜನ ಆಶಿಸುತ್ತಿದ್ದರು. ಈ ಕಾರಣಕ್ಕಾಗಿಯೇ ದಾನ-ದತ್ತಿಗಳು ನೀಡಲ್ಪಟ್ಟವು. ಇದರ ಹಿನ್ನಲೆಯಾಗಿ ಅಂದಿನ ಜನರ ಪರೋಪಕಾರ ಗುಣವೇ ಗೋಚರವಾಗಿತ್ತದೆ.

### ೪. ಪ್ರತಿಷ್ಠೆ ಅಥವಾ ಹೆಸರು ಚಿರಸ್ಥಾಯಿಗೊಳಿಸುವುದು :

ದಾನಗಳ ಬೆಳವಣಿಗೆಯಲ್ಲಿ ವ್ಯಕ್ತಿಯ ಹೆಸರು ಚಿರಸ್ಥಾಯಿಯಾಗಿ ಉಳಿಯಲಿ ಎಂಬ ಕಾರಣವೂ ಮಹತ್ವ ಪಡೆದಿದೆ. ಪಾಪ, ಪುಣ್ಯ, ಪರೋಪಕಾರಗಳ ಹಿಂದೆ ಮಾನವ ಸಹಜವಾದ ಸ್ವಪ್ರತಿಷ್ಠೆಯೂ ದಾನಕಾರ್ಯಗಳಿಗೆ ಪ್ರೇರಕವಾಗಿತ್ತು. ಅಂದಿನ ಕಾಲದಲ್ಲಿ ವ್ಯಕ್ತಿಯ ಹೆಸರು ಯಾವುದೇ ಇರಲಿ ಆ ಹೆಸರು ಚಿರಸ್ಥಾಯಿಯಾಗಿ ಉಳಿಯಬೇಕು ಎಮಬ ಹಂಬಲದಿಂದ ವ್ಯಕ್ತಿ ತನ್ನ ಹೆಸರಿಗೆ 'ಈಶ್ವರ' ಎಂಬ ಪದವನ್ನೋ 'ಭಟ್ಟಾರಕ' ಎಂಬ ಅಂಕಿತವನ್ನೋ ಸೇರಿಸಿ

ಆ ಹೆಸರಿನ ದೇವರನ್ನು ಪ್ರತಿಷ್ಠಾಪಿಸಿ ತನ್ನ ಹೆಸರನ್ನು ಚಿರಸ್ಥಾಯಿಗೊಳಿಸುವ ಇಚ್ಛೆ ಹೊಂದಿದ್ದರು.[126] ಈ ಕಾರಣದಿಂದ ದೇವಾಲಯಗಳನ್ನು ಕಟ್ಟಿಸಿ ಅದಕ್ಕೆ ತಮ್ಮ ಹೆಸರನ್ನು ದೇವರಿಗೆ ಇಡುತ್ತಿದ್ದರು. ತನ್ಮೂಲಕ ದೇವಾಲಯವನ್ನು ಕಟ್ಟಿಸಿದವನು ಶಿವನೇ (ದೇವರು) ಆಗಿ ಬಿಡುತ್ತಾನೆ ಎಂದು ನಂಬಿದ್ದರು. ಈ ನಂಬಿಕೆಯಿಂದ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕಟ್ಟಲ್ಪಟ್ಟು, ವ್ಯಕ್ತಿಯ ಹೆಸರನ್ನೇ ದೇವರಿಗೆ ಇಟ್ಟಿರುವ ಹಲವಾರು ನಿದರ್ಶನಗಳನ್ನು ಡಾ. ಎಚ್. ಎಸ್. ಗೋಪಾಲರಾವ್ ಗುರುತಿಸಿದ್ದಾರೆ.[127] ಕೋಟಿಗಾವುಂಡ ತನ್ನ ಹೆಸರಿನ 'ಕೋಟೇಶ್ವರ' ದೇವರನ್ನು,[128] ಒದ್ದಿರಾಜ ಎಂಬಾತನು 'ಒದ್ದೇಶ್ವರ' ದೇವರನ್ನು,[129] ಅಜ್ಜಮಯ್ಯನು 'ಅಜ್ಜಿಮೇಶ್ವರ' ಎಂಬ ಶಿವಭವನವನ್ನು, ದೇವಕಬ್ಬೆ 'ದೇವಕೇಶ್ವರ'[130] ದೇವಾಲಯವನ್ನು ಕಟ್ಟಿಸಿರುವುದು ತಿಳಿದುಬರುತ್ತದೆ.

ಪ್ರತಿಷ್ಠೆಗಾಗಿ ಇಲ್ಲವೆ ಹೆಸರು ಚಿರಸ್ಥಾಯಿಯಾಗಲೆಂದು ದೇವಾಲಯಗಳನ್ನು ಕಟ್ಟಿಸುವುದೆಂದರೆ ಕೇವಲ ಅದೊಂದೇ ಕಾರ್ಯವಾಗಿರಲಿಲ್ಲ. ಇಂದಿಗೂ ಈ ಭಾವನೆ ಜನಮಾನಸದಲ್ಲಿ ಉಳಿದುಕೊಂಡು ಬಂದಿದೆ. ನ್ಯಾಯವಾಗಿ ದುಡಿದು ಗಳಿಸಿದ್ದವರಲ್ಲಿ ಒಂದು ಭಾಗವನ್ನು ಮುಡಿಪಿಡುವುದು, ಮುಡಿಪಿಟ್ಟದ್ದನ್ನು ದೇವಾಲಯಕ್ಕೋ ದಾನ ಕಾರ್ಯಗಳಿಗೋ ವಿನಿಯೋಗಿಸುವುದನ್ನು ಇಂದಿಗೂ ನೋಡಬಹುದು. ಇಸ್ಲಾಂ ಅನುಯಾಯಿಗಳಿಗೆ ಇದೊಂದು ಕಡ್ಡಾಯ ವ್ರತವಾಗಿದೆ. ದೇವಾಲಯ ಕಟ್ಟಿಸಿ,ದೇವರನ್ನು ಪ್ರತಿಷ್ಠೆ ಮಾಡಿದ ಮಾತ್ರಕ್ಕೆ ಆ ಕಾರ್ಯ ಪೂರ್ಣವಾಗುತ್ತಿರಲಿಲ್ಲ. ದೇವಾಲಯ ನಿರಂತರವಾಗಿ ಮುಂದುವರಿದುಕೊಂಡು ಹೋಗಬೇಕು, ಅಲ್ಲಿ ದೇವತಾ ಪೂಜೆ ನಿತ್ಯ ನೆರವೇರಬೇಕು, ಅದಕ್ಕಾಗಿ ಹಲವು ವ್ಯವಸ್ಥೆಗಳನ್ನು ಮಾಡಬೇಕಿತ್ತು. ಅವಕ್ಕೆಲ್ಲ ಹೇರಳವಾಗಿ ಹಣ,ಭೂಮಿ ಮುಂತಾದವುಗಳ ಅವಶ್ಯಕತೆಯಿತ್ತು. ಈ ಅವಶ್ಯಕತೆಗಳನ್ನು ದಾನದಿಂದಲೇ ಪೂರೈಲಾಗುತ್ತಿತ್ತು. ಮೇಲೆ ಉಲ್ಲೇಖಿಸಿದ ದೇವಾಲಯ, ದೇವರುಗಳ ಪ್ರತಿಷ್ಠೆಯನ್ನಷ್ಟೇ ಮಾಡದೇ ಅದಕ್ಕೆ ಸೂಕ್ತ ವ್ಯವಸ್ಥೆಗಳನ್ನು ಮಾಡಿ, ಉದಾರವಾಗಿ ದಾನಬಿಟ್ಟಿದ್ದಾರೆ.

ಇನ್ನೂ ಕೆಲವು ಶಾಸನಗಳು ಉಲ್ಲೇಖಿಸುವಂತೆ 'ಇಳಾಪ್ರಖ್ಯಾತ'[131]ನಾಗಲು, 'ಯಶ:ಪ್ರತಿಷ್ಠೆ'[132]ಗಾಗಿ, 'ಇಹಲೋಕಕ್ಕೆ ಕೀರ್ತಿ'[133] ತರುವಾಸೆಯಿಂದ, 'ದೊರೆತ ಕೀರ್ತಿ'[134] ಯನ್ನು ಶಾಶ್ವತಗೊಳಿಸಲು ದಾನಗಳನ್ನು ಬಿಡಲಾಗಿದೆ. ಹೀಗೆ ದಾನಬಿಟ್ಟ ವ್ಯಕ್ತಿಗಳಿಗೆ ಸಮಾಜದ ಜನರಿಂದ ಮಾನ-ಮನ್ನಣೆಗಳು ದೊರೆಯುತ್ತಿದ್ದುವು. ದಾನಶಾಸನಗಳಲ್ಲಿ ದಾನಿಗಳನ್ನು ವಿಶೇಷವಾದ ಪದಗಳಿಂದ ಬಣ್ಣಿಸಿರುವುದು ಇದಕ್ಕೆ ಸಾಕ್ಷಿ ಎನಿಸುತ್ತದೆ. 'ಸಮಸ್ತಗುಣಗಣಾಳಂಕ್ರಿತಂ ಕಲಿಕಾಲಕರ್ಣ್ನಂ' ಎಂದು ಆಳಂಬೆಯ ಕೂಡಲ ಮಲ್ಲಿಕಾರ್ಜುನ ದೇವರಿಗೆ ಭೂಮಿದಾನ ನೀಡಿದ ಮಧುಸೂದನಯ್ಯ ನಾಯಕನನ್ನು ಬಣ್ಣಿಸಲಾಗಿದೆ.[135] ಮಹಾಮಾತ್ಯ ಪೆಗ್ಗಡೆ ಮಾದಿಮಯ್ಯನನ್ನು 'ಸಹಾಯಸಿಂಹ' ಎಂದು ಬಣ್ಣಿಸಲಾಗಿದೆ.[136] ಅದೇರೀತಿ ನಿಪ್ಪಾಣಿಯಲ್ಲಿ ಸರಸ್ವತಿದೇವಿಯನ್ನು ಪ್ರತಿಷ್ಠಾಪಿಸಿ ೩೦೦ಮತ್ತರು ತೋಟದಾನ ಮಾಡಿದ ಇಮ್ಮಡಿ ಜಯಸಿಂಹನ ರಾಣಿ ಸೋಮಲದೇವಿಯನ್ನು 'ಬಂಧು ಚಿಂತಾಮಣಿ, ದಾನಗುಣ ವಿಶುದ್ಧ ಕೀರ್ತಿಗಾತ್ರಯದಾನಿ.

ಧರ್ಮಮೂರ್ತಿ' ಎಂದು ಹೊಗಳಲಾಗಿದೆ.[137] ಜಯಸಿಂಹನ ಸಹೋದರಿ ಅಕ್ಕಾದೇವಿಯನ್ನು 'ದೀನಾನಾಥ ಚಿಂತಾಮಣಿ, ಏಕವಾಕ್ಯೆ, ಗುಣದ ಬೆಡಂಗಿ' ಮುಂತಾಗಿ ವರ್ಣಿಸಲಾಗಿದೆ.[138]

ಹೆಸರು ಚಿರಸ್ಥಾಯಿಗೊಳಿಸುವಲ್ಲಿ ಎಂಥ ಪರಾಕಾಷ್ಠೆಯನ್ನು ತಲುಪುತ್ತಿದ್ದರು ಎಂಬುದಕ್ಕೆ ಇಮ್ಮಡಿ ಜಯಸಿಂಹನ ಕಾಲದ ಒಂದು ಶಾಸನ ಬಹು ಮನೋಜ್ಞವಾಗಿ ಹೇಳುತ್ತದೆ.[139] ಜಯಸಿಂಹನ ದಂಡನಾಯಕ ನಾಗವರ್ಮನು ತನ್ನ ಪರಾಕ್ರಮವನ್ನು ಪ್ರದರ್ಶಿಸಿ ವೈರಿಗಳನ್ನು ಸಂಹರಿಸಿದ್ದಂದ ರಾಜನಿಂದ ಗ್ರಾಮದಾನ ಪಡೆಯುತ್ತಾನೆ. ತನಗೆ ದಾನವಾಗಿ ಬಂದ ತಡಕಲ್ಲ ಗ್ರಾಮವನ್ನು ದಂಡನಾಯಕ ನಾಗವರ್ಮನು ಸಂಪೂರ್ಣವಾಗಿ ಧರ್ಮಕಾರ್ಯಕ್ಕಾಗಿಯೇ ಬಳಸುತ್ತಾನೆ. ತಂದೆಯ ಹೆಸರಿಗೆ ನಾರಾಯಣ ದೇವಾಲಯವನ್ನು, ತಾಯಿಯ ಹೆಸರಿನಲ್ಲಿ ಆದಿತ್ಯದೇವರನ್ನು, ಚಿಕ್ಕಪ್ಪ ಶರಿಮಯ್ಯನ ನೆನಪಿಗಾಗಿ ಐಯ್ಯೇಶ್ವರ ದೇವರು, ತನ್ನ ಹೆಸರಿನಲ್ಲಿ ನಾಗೇಶ್ವರ ದೇವರು, ತನ್ನ ಪತ್ನಿಯ ಹೆಸರಿನಲ್ಲಿ ಸರಸ್ವತಿ ಮಂಟಪ, ಮಗನ ಹೆಸರಿನಲ್ಲಿ ಭೈರವೇಶ್ವರ ದೇವರು, ತಂಗಿಯ ಹೆಸರಲ್ಲಿ ಮಲ್ಲಿಕಾರ್ಜುನ ದೇವರು, ಇದರೊಂದಿಗೆ ಘಳಿಗೆ ಬಾಗಿಲವಾಡ, ಸಂಧ್ಯಾಮಠ ಮುಂತಾದವುಗಳನ್ನು ಮಾಡಿಸುತ್ತಾನೆ. ಅಷ್ಟೇ ಅಲ್ಲದೆ ಆ ದೇವಾಲಯಗಳಲ್ಲಿ ಕಾಳಾಮುಖ ಮುಖ್ಯರು ಆಗಿದ್ದ ವಾಗೇಶ್ವರ ಪಂಡಿತರಿಗೆ ತ್ರಿಕಾಲಪೂಜೆಗೆ, ತಪೋಧನರ ವಿದ್ಯಾರ್ಥಿ ಮಾನಿಗಳ ಆಹಾರದಾನಕ್ಕೆ, ಪಾವುಳ ಪರಿವಾರ ಜೀವಿತಕ್ಕೆ, ದೇವಾಲಯದ ಜೀರ್ಣೋದ್ಧಾರಕ್ಕೆಂದು ೫೦ ಮತ್ತರು ಕರಿನೆಲವನ್ನು, ೩ ಮತ್ತರು ಹೂದೋಟ, ೧೬ ಅಂಗಡಿಗಳು, ೨ಗಾಣಗಳನ್ನು ದಾನಮಾಡುತ್ತಾನೆ. ದೇವರ ನೈವೇದ್ಯಕ್ಕೆ-ಕೋಲಮತ್ತರು ೧ನ್ನು ನೀಡುತ್ತಾನೆ.[140] ನಾಗವರ್ಮನು ತನ್ನ ಹೆಸರಿನಲ್ಲಷ್ಟೇ ಅಲ್ಲದೇ ತನ್ನ ಪರಿವಾರದವರೆಲ್ಲರ ಹೆಸರಿನಲ್ಲೂ ದೇವರು, ದೇವಾಲಯಗಳನ್ನು ನಿರ್ಮಿಸಿ ಅವರೆಲ್ಲರನ್ನೂ ಸದಾಕಾಲ ನೆನೆಯುವಂತಾಗಲಿ ಎಂದು ದಾನಕಾರ್ಯಗಳನ್ನು ಮಾಡಿರುವುದನ್ನು ಗಮನಿಸಬಹುದು.

ಹೀಗೆ ಕಲ್ಯಾಣ ಚಾಲುಕ್ಯರ ಕಾಲದ ದಾನಗಳಿಗೆ ಪ್ರತಿಷ್ಠೆ ಇಲ್ಲದೆ ಹೆಸರು ಚಿರಸ್ಥಾಯಿಯಾಗಿ ಉಳಿಯಲಿ ಎಂಬುದೂ ಒಂದು ಕಾರಣವಾಗಿರುವುದು ಸ್ಪಷ್ಟವಾಗುತ್ತದೆ.

**೫. ಕರ್ತವ್ಯ ಭಾವನೆ :**

ಪ್ರಾಚೀನ ಕರ್ನಾಟಕದ ಮಹಾಜನರು ಅಂದಿನ ಸಮಾಜದಲ್ಲಿ ಷಟ್ಕರ್ಮಗಳನ್ನು ತಮ್ಮ ಆದ್ಯ ಕರ್ತವ್ಯಗಳೆಂದು ನಂಬಿದ್ದರು. ಯಜನ-ಯಾಜನ,ಅಧ್ಯಯನ-ಅಧ್ಯಾಪನ, ದಾನ-ಪ್ರತಿಗ್ರಹಣ ಇವು ಷಟ್ಕರ್ಮಗಳಾಗಿದ್ದವು. 'ಪಾಠವನ್ನು ಓದುವುದು-ಓದಿಸುವುದು,ಯಾಗವನ್ನು ಮಾಡುವುದು-ಮಾಡಿಸುವುದು, ದಾನವನ್ನು ನೀಡುವುದು-ದಾನವನ್ನು ಸ್ವೀಕರಿಸುವುದು' ಎಂದು ಮೇಲಿನ ಷಟ್ಕರ್ಮಗಳನ್ನು ಅರ್ಥೈಸಬಹುದು.[141] ಅಂದಿನ ಕಾಲದಲ್ಲಿ ಮಹಾಜನರು 'ಯಮನಿಯಮ ಸ್ವಾಧ್ಯಾಯ ಧ್ಯಾನಧಾರಣ ಮೌನಾನುಷ್ಠಾನ'ಗಳಲ್ಲಿ ನಿರತರಾಗಿದ್ದುದನ್ನು ಹಲವಾರು ಶಾಸನಗಳು ಉಲ್ಲೇಖಿಸುತ್ತವೆ.[142] ವಿಶೇಷವಾಗಿ ಆಚಾರ್ಯರು, ಬ್ರಾಹ್ಮಣರನ್ನು

ಷಟ್ಕರ್ಮನಿರತರೆಂದು ಬಹುಸಂಖ್ಯೆಯ ಶಾಸನಗಳಲ್ಲಿ ಹೇಳಲಾಗಿದೆ. ಇಲ್ಲಿ ನಾವು ಗಮನಿಸಬೇಕಾದ ಅಂಶವೆಂದರೆ, ಅಂದಿನ ಕಾಲದ ಜನರ ಆರು ಕರ್ತವ್ಯಗಳಲ್ಲಿ ಎರಡು ಕರ್ತವ್ಯಗಳು ದಾನಕಾರ್ಯಗಳಿಗೆ ಸಂಬಂಧಿಸಿವೆ. ದಾನ ನೀಡುವುದು ಮತ್ತು ದಾನ ಪಡೆಯುವುದು ಷಟ್ಕರ್ಮಗಳಲ್ಲಿ ಸ್ಥಾನ ಪಡೆದಿದ್ದವು. ಇದರಿಂದ ಸಹಜವಾಗಿಯೇ ದಾಶೀಲತೆಗೆ ಪ್ರೇರಣೆ ಸಿಕ್ಕಿದೆ.

ಈಗಾಗಲೇ ದಾನದ ಅರ್ಥವನ್ನು ವಿವರಿಸುವಾಗ ರಾಜರ ಕರ್ತವ್ಯಗಳಲ್ಲಿ ದಾನನೀಡುವುದು ಹಾಗೂ ಅವಶ್ಯಕತೆ ಬಿದ್ದಾಗ ದಾನ ಪಡೆಯುವುದು ಒಂದು ಕರ್ತವ್ಯವಾಗಿತ್ತು ಎಂಬುದನ್ನು ಗಮನಿಸಿದ್ದೇವೆ. 'ಕ್ಷತ್ರಿಯರಿಗೆ ಭೂಮಿದಾನ,ಭೂಮಿಪಾಲನೆಗೆ ಮಿಗುವಧರ್ಮವಿಲ್ಲ' ಎಂಬುದನ್ನು ಶಾಸನವೊಂದು ಉಲ್ಲೇಖಿಸುತ್ತದೆ.[143] ಅಂದರೆ, ಭೂಮಿಯನ್ನು ರಕ್ಷಿಸುವುದು ಮತ್ತು ಭೂಮಿದಾನ ಮಾಡುವುದಕ್ಕಿಂತ ಹೆಚ್ಚಿನ ಧರ್ಮಕಾರ್ಯ ಕ್ಷತ್ರಿಯರಿಗೆ ಇಲ್ಲ ಎಂಬುದು ಇಲ್ಲಿನ ಆಶಯ. ನಾಡನ್ನಾಳುವ ಪ್ರಭುಗಳ ಮುಖ್ಯ ಕರ್ತವ್ಯವೆಂದರೆ ಪ್ರಜೆಗಳ ರಕ್ಷಣೆ. ಅದು ವೈರಿಗಳಿಂದ ಇರಬಹುದು ಅಥವಾ ರಾಜ್ಯದಲ್ಲಿನ ಸಂಕಷ್ಟಗಳಿಂದ ಇರಬಹುದು. ಬಡವ ಬಲ್ಲಿದನೆಂಬ ತಾರತಮ್ಯವಿಲ್ಲದೆ ಎಲ್ಲರೂ ಸಮಬಾಳು ಬಾಳುವಂತೆ ನೋಡಿಕೊಳ್ಳುವುದು ಭೂಪಾಲನ ಮುಖ್ಯ ಕರ್ತವ್ಯ. ಪ್ರಜೆಗಳ ಸುಖಜೀವನಕ್ಕೆ ಸಾಕಷ್ಟು ಸೌಲಭ್ಯಗಳು ಬೇಕಾಗುತ್ತವೆ. ಮುಖ್ಯವಾಗಿ ಮೂಲಭೂತ ಅವಶ್ಯಕತೆಗಳಾದ ಆಹಾರ, ನೀರು, ವಸತಿ, ವಿದ್ಯೆ, ವಸ್ತ್ರ ಇವು ಸಮರ್ಪಕವಾಗಿ ಪೂರೈಕೆಯಾಗಬೇಕು. ಈ ನಿಟ್ಟಿನಲ್ಲಿ ಕೆರೆ, ಆರವೆ, ಛತ್ರ, ಅಗ್ರಹಾರ, ಘಟಿಕಾಸ್ಥಾನಗಳನ್ನು ನಿರ್ಮಿಸುವುದು ಅದರ ಮೂಲಕ ಅವಶ್ಯಕತೆಗಳನ್ನು ಪೂರೈಸಲು ಕ್ರಮಕೈಕೊಳ್ಳಬೇಕಾಗಿತ್ತು. ಇವೆಲ್ಲ ರಾಜರ, ಮಾಂಡಳಿಕರ, ಅಧಿಕಾರಿಗಳ ಕರ್ತವ್ಯ ಆಗಿತ್ತು. ಈ ದೆಸೆಯಲ್ಲಿ ಕರ್ತವ್ಯ ನಿರ್ವಹಣೆಯಸಲುವಾಗಿಯೂ ಕೆಲವಾದರೂ ದಾನಗಳು ನೀಡಲ್ಪಟ್ಟಿವೆ.

ಶಾಸನಗಳಲ್ಲಿ 'ಕರ್ತವ್ಯ ಭಾವನೆಯಿಂದಲೇ ದಾನ ನೀಡಲಾಗಿದೆ' ಎಂದು ಹೇಳಿಕೊಂಡಿಲ್ಲ–ವಾದರೂ ಈ ಪ್ರೇರಕ ಅಂಶವನ್ನು ಅಲ್ಲಗಳೆಯುವಂತಿಲ್ಲ. ಶುಕ್ರನೀತಿಸಾರದ ಪ್ರಕಾರ 'ರಾಜ್ಯಾಡಳತದ ವೆಚ್ಚದಲ್ಲಿ ನಾಲ್ಕು ಪ್ರಧಾನ ಅಂಶಗಳಿವೆ. ಈ ನಾಲ್ಕು ಅಂಶಗಳಲ್ಲಿ ದಾನವೂ ಒಂದು. ರಾಜ್ಯದ ಒಟ್ಟು ಉತ್ಪತ್ತಿಯ ಶೇಕಡಾ ಎಂಟನ್ನು ದಾನಕ್ಕಾಗಿ, ಶೇಕಡಾ ಎಂಟನ್ನು ರಾಜ ತನ್ನ ಸ್ವಂತಕ್ಕಾಗಿ, ಉಳಿದುದನ್ನು ಆಡಳಿತ ಮತ್ತು ಜನಹಿತಕ್ಕಾಗಿ ವಿನಿಯೋಗಿಸಬೇಕು' ಎಂದು ಹೇಳಲಾಗಿದೆ.[144] ಅದೇ ರೀತಿ ಕಲ್ಯಾಣ ಚಾಲುಕ್ಯ ಚಕ್ರವರ್ತಿ ಮೂರನೆ ಸೋಮೇಶ್ವರ ಹೇಳುವಂತೆ "ರಾಷ್ಟ್ರದಲ್ಲಿ ಸಂಪ್ರಾಪ್ತವಾದ ಸಂಪತ್ತಿನಲ್ಲಿ ನಾಲ್ಕು ಭಾಗಗಳನ್ನು ಮಾಡಬೇಕು. ಧರ್ಮ, ಅರ್ಥ, ಕಾಮಗಳಿಗೆ ಮೂರು ಭಾಗವನ್ನು ಬಳಸಬೇಕು. ಒಂದು ಭಾಗವನ್ನು ಸಂಚಯನ ಮಾಡಬೇಕು".[145] "ಸತ್ಯ, ಶೌರ್ಯ, ಕ್ಷಮೆ, ದಾನ ಮತ್ತು ಗುಣಜ್ಞತೆ ಈ ಐದು ಗುಣಗಳು ರಾಜನಲ್ಲಿ ಅವಶ್ಯ ಇರಲೇಬೇಕು."[146] ಇಲ್ಲಿ ಉದ್ಧರಿತವಾದ ವಿಷಯಗಳ ಪ್ರಕಾರ, ಆಡಳಿತದ ವೆಚ್ಚದಲ್ಲಿ ದಾನಕ್ಕೆಂದೇ ಕೆಲವು ಭಾಗವನ್ನು ನಿಗದಿಪಡಿಸಲಾಗಿತ್ತು. ರಾಜನ ಗುಣಗಳಲ್ಲಿ

ದಾನಶೀಲತೆಯೂ ಒಂದು. ಈ ಗುಣವೇ ಆಡಳಿತದ ಚುಕ್ಕಾಣಿ ಹಿಡಿದ ವ್ಯಕ್ತಿಗಳಲ್ಲಿ ಕರ್ತವ್ಯ ಭಾವನೆಯಂತೆ ದಾನಕ್ರಿಯೆಗೆ ಪ್ರೇರಣೆ ನೀಡಿದೆ ಎಂದು ಹೇಳಬಹುದು.

**೬. ಮನವಿ ಅಥವಾ ಬೇಡಿಕೆ :**

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ದಾನಗಳಿಗೆ ಪ್ರೇರಣೆಗಳು ಹಲವಾರಿದ್ದರೂ ಯಾವುದೇ ಪ್ರೇರಣೆಗಳಿಗೆ ಒಳಗಾಗದೇ ದಾನ ಮಾಡುವ ಪ್ರವೃತ್ತಿ ದಾನಿಯಲ್ಲಿರಲಿ, ಇಲ್ಲದಿರಲಿ ದಾನ ಕಾರ್ಯಗಳು ನಡೆದಿವೆ. ಹಲವಾರು ಶಾಸನಗಳಿಂದ ತಿಳಿದು ಬರುವಂತೆ ದಾನಿ ಮತ್ತು ಪ್ರತಿಗ್ರಹಿಗಳ ಮಧ್ಯ ಅನೇಕ ಜನರು ಬೆಸುಗೆಯ ಕೊಂಡಿಯಾಗಿ ಕಾರ್ಯನಿರ್ವಹಿಸಿ. ಆ ಮೂಲಕ ದಾನ ನೀಡಲು ಕಾರಣರಾಗಿದ್ದಾರೆಂಬುದಕ್ಕೆ 'ಬಿನ್ನವಿಸಿ'[147] 'ಬಿನ್ನಪಂಗೆಯ್ದು'[148], 'ಬಿನ್ನಪದಿಂ'[150] 'ಆಣೂತಿಯಿಂದ'[151] ಎಂಬ ಪದಗಳು ಬೇರೆಯವರ ಮನವಿಯ ಮೇರೆಗೆ ದಾನಬಿಟ್ಟ ವಿಷಯಗಳನ್ನು ಶಾಸನಗಳು ತಿಳಿಸುತ್ತವೆ. ಯಾವ ಉದ್ದೇಶಗಳಿಗೆ ದಾನ ಬಿಡಬೇಕೆಂಬುದನ್ನು ಅಧಿಕಾರಿಗಳು, ಪ್ರಮುಖರು ತಿಳಿದು ರಾಜನಿಗೆ ಮನವರಿಗೆ ಮಾಡಿಕೊಟ್ಟಾಗ, ಆತನಲ್ಲಿ ಬಿನ್ನವಿಸಿಕೊಂಡಾಗ ರಾಜನು ದಾನ ಬಿಟ್ಟಿದ್ದಾನೆ ಮತ್ತು ಅಧೀನ ಅಧಿಕಾರಿಗಳಿಗೆ ಆಜ್ಞೆಯನ್ನಿತ್ತಿದ್ದಾನೆ.

ಕ್ರಿ.ಶ. ೧೦೩೨ರ ಮಸ್ಕಿ ಶಾಸನದ ಪ್ರಕಾರ, ಅಷ್ಟೋಪವಾಸಿ ಕನಕನನ್ದಿ ಭಟಾರರ ಪ್ರಾರ್ಥನೆಯಂತೆ, ಕಾಳಿದಾಸನ ಚೂಳಾಯ್ತ ರೇವಣನ ವಿಜ್ಞಾಪನೆಯ ಮೇರೆಗೆ, ಸಮಸ್ತ ಪ್ರಧಾನರ ಇಚ್ಛೆಯಂತೆ ಚಕ್ರವರ್ತಿ ಇಮ್ಮಡಿ ಜಯಸಿಂಹನು ಕನಕನನ್ದಿ ಭಟಾರರಿಗೆ ಭೂದಾನ ಮಾಡಿದ್ದಾನೆ.[152] ವೈದ್ಯರತ್ನಾಕರ ಪ್ರಾಣಾಚಾರ್ಯ ಅಗ್ಗಳಯ್ಯನ ಬಿನ್ನಹದಂತೆ ಸೈದಾಪುರದ ಬುದ್ಧ ಸೇನ ಜಿನಾಲಯಕ್ಕೆ ಬಹುವಿಧದ ದಾನಗಳನ್ನು ನೀಡಿದ್ದಾನೆ.[153] ತ್ರೈಲೋಕ್ಯಮಲ್ಲನು ಕಸಮಡುವಿನ ಪಶ್ಚಿಮದಲ್ಲಿ ಬೀಡು ಬಿಟ್ಟಿದ್ದಾಗ ಅವನ ಮಾಂಡಳಿಕ ವಿದಯ್ಯನ ಆಣತಿಯಂತೆ ಅಲ್ಲಿನ ತ್ರೈಲೋಕ್ಯಮಲ್ಲಜೀಯರಿಗೆ ೧೦೦ ಮತ್ತರು ಭೂಮಿಯನ್ನು ದಾನ ಮಾಡುತ್ತಾನೆ[155]. ಮಹಾಪ್ರಧಾನ ಚೆಟ್ಟಿಮಯ್ಯನು ವಡ್ಡರಾವುಳ ಸುಂಕದ ಅಧಿಕಾರಿಯಾಗಿದ್ದಾಗ 'ಚಕ್ರವರ್ತಿಗೆ ಬಿನ್ನಪಂಗೆಯ್ದು' ವಿಕ್ರಮಪುರದ ನಾಲ್ವತ್ತೆರಡು ಜನರಿಗೆ ಸುಂಕದಾನ ಮಾಡುತ್ತಾನೆ.[155] ಹಾಗೆ ಮಹಾಸಾಮಂತ ಗೋನರಸನು ದಂಡನಾಯಕ ಮಾರ್ತಾಂಣ್ಡಯ್ಯ ಬಿನ್ನವಿಸಿದನೆಂದು ಮುಕ್ಕುಂದದಲ್ಲಿನ ಛತ್ರಕ್ಕೆಂದು ೫೦ ಮತ್ತರು ಭೂಮಿಯನ್ನು, ೫೦ ಮತ್ತರು ಭೂಮಿಯ ಮೇಲಿನ ಸುಂಕವನ್ನೂ ದಾನ ನೀಡುತ್ತಾನೆ.[156] ಮಹಾಸಾಮಂತ ಬೇತರಸನ ಪೆಗ್ಗಡೆ ವೈಜರಾಜನ ಮಗ ನಾರಾಣಯ್ಯನು ಸಣಗರದ ಗಾವುಂಡರಾದ ಮುಪ್ಪಡಯ್ಯ, ಪುನ್ನರಡ್ಡಿಯರನ್ನು 'ಒಡಂಬಡಿಸಿ' (ಒಪ್ಪಿಸಿ) ಅಲ್ಲಿನ ದುದ್ಧಮಲ್ಲ ಜೀನಾಲಯಕ್ಕೆ ಒಂದು ರಾಟಣವನ್ನು ದಾನ ಕೊಡಿಸುತ್ತಾನೆ.[157] ತ್ರೈಲೋಕ್ಯಮಲ್ಲದೇವನ ರಾಣಿ ಶ್ರೀ ಕೇತಲದೇವಿ ಬಿನ್ನಪಗೈಯ್ದು ಪೊನ್ನವಾಡದೊಳಗೆ ಚಾಂಕಿಮಯ್ಯನು ಮಾಡಿಸಿದ ಶ್ರೀ ಶಾಂತಿನಾಥದೇವರ ತ್ರಿಭುವನ ತಿಲಕ ಚೈತ್ಯಾಲಯದಲ್ಲಿದ್ದ 'ರಿಸಿಯರ' ಆಹಾರದಾನಕ್ಕೆ ೩೦ ಮತ್ತರು ಕರಿನೆಲ, ೩೫ ಮತ್ತರು ತೋಟ, ಒಂದು ಅಂಗಡಿ,

ಒಂದು ಗಾಣ, ಅಲ್ಲಿನ ಸೇವಾವರ್ಗಕ್ಕೆ ಮನೆಗಳನ್ನು ದಾನವಾಗಿ ಕೊಡಿಸುತ್ತಾಳೆ.[158] ಕಮ್ಮಾರ ಚೆರುವಿನ ಚಟ್ಟಗಾವುಂಡ, ನಾಮಗಾವುಂಡ, ಆಚಗಾವುಂಡ, ತಿಕ್ಕಲಗಾವುಂಡ ಮುಂತಾದ ಗಾವುಂಡರ ವಿನಂತಿಯ ಮೇರೆಗೆ ಮಹಾಮಂಡಳೇಶ್ವರ ವೀರನೊಳಂಬ ಗಟ್ಟಿದೇವನು ಅಲ್ಲಿನ ಎರಡು ದೇವಾಲಯಗಳಿಗೆ ತಲಾ ಹನ್ನೆರಡು ಮತ್ತರು ಭೂಮಿಯನ್ನು ದಾನ ಮಾಡಿದ್ದಾನೆ.[159]

ಹೀಗೆ ಬೇರೆಯವರ ಮನವಿ, ಬೇಡಿಕೆ, ಬಿನ್ನಹದ ಮೇರೆಗೆ ದಾನ ನೀಡಿರುವುದನ್ನು ನೂರಾರು ಸಂಖ್ಯೆಯಲ್ಲಿ ಶಾಸನಗಳು ಉಲ್ಲೇಖಿಸುತ್ತವೆ. ಬದನೆಹಾಳು,[160] ಕೊಲನಪಾಕ,[161] ಆಲಂಪುರ,[162] ಪುಲಕುರ್ತಿ,[163] ಉಚ್ಚಂಗಿದುರ್ಗ,[164] ಮಾನ್ವಿ[165] ಶಾಸನಗಳು ಹೀಗೆ ಮುನ್ನೂರಕ್ಕೂ ಹೆಚ್ಚು ಶಾಸನಗಳು ವಿನಂತಿಯ ಮೇರೆಗೆ ಅಥವಾ ಬಿನ್ನಹದ ಮೇರೆಗೆ ದಾನ ನೀಡಿರುವುದನ್ನು ಉಲ್ಲೇಖಿಸುತ್ತವೆ.

ದೇವಾಲಯಕ್ಕೇ, ಇಲ್ಲವೆ ವ್ಯಕ್ತಿಗಳಿಗೆ ದಾನ ನೀಡಬೇಕೆಂದಾಗ ಅಧಿಕಾರಿಗಳು ರಾಜನ ಗಮನಕ್ಕೆ ತಂದು ಅವನಿಂದ ಅಪ್ಪಣೆ ಪಡೆದು ದಾನ ನೀಡುತ್ತಿದ್ದರು. ಉನ್ನತ ಅಧಿಕಾರದಲ್ಲಿರುವ ವ್ಯಕ್ತಿಗಳಿಗೆ ರಾಜ್ಯದಲ್ಲಿನ ಎಲ್ಲ ಅಗತ್ಯಗಳೂ ತಿಳಿದಿರುವುದು ಅಸಾಧ್ಯದ ಸಂಗತಿ. ಈ ನಿಟ್ಟಿನಲ್ಲಿ ಅಗತ್ಯತೆಗಳಿಗೆ ಅನುಗುಣವಾಗಿ ದಾನ–ಧರ್ಮ ಕಾರ್ಯಗಳು ನಡೆದು, ಅದರಿಂದ ಪ್ರಜೆಗಳಿಗೆ ಉಪಯೋಗವಾಗಲು ಮನವಿಯ ಮೇರೆಗೆ ದಾನ ಬಿಡಿಸಿರುವುದರಿಂದ ತಿಳಿಯುತ್ತದೆ.

## ೭. ದೇವಾಲಯ ನಿರ್ಮಾಣ

ದೇವಾಲಯ ನಿರ್ಮಾಣ ಮತ್ತು ದಾನ–ದತ್ತಿಗಳಿಗೆ ಅವಿನಾಭಾವ ಸಂಬಂಧ. ಕಲ್ಯಾಣ ಚಾಲುಕ್ಯರ ಕಾಲ ಧಾರ್ಮಿಕ ನಂಬಿಕೆಯ ಪರ್ವಕಾಲ. ಕದಂಬರ ಕಾಲದಿಂದಲೂ ದೇವಾಲಯಗಳ ನಿರ್ಮಾಣ, ಜೀರ್ಣೋದ್ಧಾರ ಮತ್ತು ನಿರ್ವಹಣೆಗೆ ದಾನ–ದತ್ತಿಗಳನ್ನು ನೀಡಲಾಗಿದೆ. ಬದಾಮಿ ಚಾಲುಕ್ಯರ ಕಾಲಕ್ಕೆ ದೇವಾಲಯಗಳ ನಿರ್ಮಾಣದಲ್ಲಿ ವಿಶೇಷವಾದ ಪ್ರಗತಿಯಾಯಿತು. ಈ ವಿಷಯದಲ್ಲಿ ರಾಷ್ಟ್ರಕೂಟರೂ ಹಿಂದೆ ಬೀಳಲಿಲ್ಲ. ಕಲ್ಯಾಣದ ಚಾಲುಕ್ಯರ ಕಾಲಕ್ಕೆ ಬಂದಂತೆ ದೇವಾಲಯಗಳ ನಿರ್ಮಾಣ ಕಾರ್ಯ ಹಾಗೂ ಅವುಗಳಿಗೆ ನೀಡಿದ ದಾನಗಳ ಸಂಖ್ಯೆಯಲ್ಲಿ ಗಣನೀಯ ಹೆಚ್ಚಳವಾಯಿತು.

ದಾನಗಳಿಗೆ ದೇವಾಲಯ ನಿರ್ಮಾಣವೂ ಒಂದು ಪ್ರೇರಣೆ ಮತ್ತು ಕಾರಣವಾಗಿದೆ. ದೇವಾಲಯಗಳ ನಿರ್ಮಾಣದಲ್ಲಿ ಅರಸರಾದಿಯಾಗಿ ಅವನ ಕುಟುಂಬವರ್ಗ, ಅಧಿಕಾರಿಗಳು, ಧರ್ಮಗುರುಗಳು ಮಾತ್ರವಲ್ಲದೇ ಸಾಮಾನ್ಯ ಜನತೆಯೂ ಆಸಕ್ತಿ ವಹಿಸಿರುವುದನ್ನು ಹಲವು ಶಾಸನಗಳಿಂದ ತಿಳಿಯಬಹುದು. ದೇವಾಲಯ ನಿರ್ಮಾಣ ಮಾಡುವುದು ಕೇವಲ ಒಂದೇ ಕಾರ್ಯ ಮಾತ್ರವಾಗಿರಲಿಲ್ಲ. ಕಟ್ಟಿದ ದೇಗುಲಗಳು ಶಾಶ್ವತವಾಗಿ ಉಳಿಯಬೇಕು, ಅಲ್ಲಿ ನಿತ್ಯ ಪೂಜೆ, ಹೋಮ ಹವನ ನೈವೇದ್ಯ, ಅನ್ನದಾನಗಳು ನಡೆಯಬೇಕು ಯಾವಾಗಲೂ ನೃತ್ಯ, ಸಂಗೀತ, ವಾದ್ಯ, ಗೀತೆಗಳು ನಡೆಯುತ್ತಿರಬೇಕು. ದೇವರನ್ನು ಆಶ್ರಯಿಸಿ ಬಂದವರಿಗೆ ಧನ್ಯತೆಯ

ಅನುಭಾವ ಉಂಟಾಗಬೇಕು. ಪೂಜೆಗೊಳ್ಳಲ್ಪಡುವ ದೇವನಿಗೆ ಭೂಮಿಯಲ್ಲಿ ನಂದನವನವನ್ನು ನಿರ್ಮಿಸಬೇಕು. ಇವೆಲ್ಲಕ್ಕೂ ಅಂದಿನ ಜನ ಬದ್ಧರಾಗಿದ್ದರು. ಈ ವ್ಯವಸ್ಥೆಗಳಿಗೆ ಅಂದು ಸಾಕಷ್ಟು ಭೂಮಿ, ಹಣ, ಶ್ರಮಿಕವರ್ಗ ಹಾಗೂ ಜನರ ಸಹಕಾರ ಬೇಕಿತ್ತು. ಈ ಎಲ್ಲ ಕಾರ್ಯಗಳನ್ನು ಪೂರೈಸುವುದು ದೇವಾಲಯದ ನಿರ್ಮಾಣದ ಒಂದು ಭಾಗವಾಗಿತ್ತು. ಅದಕ್ಕೆಲ್ಲ ದಾನಗಳೇ ಮೂಲವಾಗಿದ್ದವು.

ನಮಗೆ ಲಭ್ಯವಿರುವ ಶಾಸನಗಳಿಂದ ತಿಳಿದು ಬರುವಂತೆ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಸುಮಾರು ೫೦೦ಕ್ಕೂ ಹೆಚ್ಚು ದೇವಾಲಯಗಳು ನಿರ್ಮಾಣವಾಗಿವೆ. ಇವುಗಳಲ್ಲಿ ಸುಮಾರು ೬೦ ಬಸದಿಗಳು ಮತ್ತು ಉಳಿದವುಗಳಲ್ಲಿ ಶೇಕಡಾ ೮೦ ರಷ್ಟು ಶಿವಾಲಯಗಳು.[166] ಈ ಅಂಕಿ–ಸಂಖ್ಯೆ ಕೇವಲ ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟದ್ದಕ್ಕಷ್ಟೇ ಸೀಮಿತವಾಗಿದೆ. ಇನ್ನೂ ದೊರೆಯಲಾರದ ಶಾಸನಗಳು ಹಾಗೂ ಶಾಸನಗಳಲ್ಲಿ ಉಲ್ಲೇಖಿಸದೇ ಇರುವ ದೇವಾಲಯಗಳೂ ಇರಬಹುದು ಎಂಬುದನ್ನು ಗಮನಿಸಬೇಕು. ಪ್ರತಿಯೊಂದು ದೇವಾಲಯ ನಿರ್ಮಾಣವಾಗಲೂ ಸಾಮಾನ್ಯವಾಗಿ ದಾನಗಳನ್ನು ನೀಡಲಾಗಿದೆ. ಇದರಿಂದ ದೇವಾಲಯ ನಿರ್ಮಾಣ ದಾನಗಳಿಗೆ ಪ್ರಮುಖ ಪ್ರೇರಣೆಯಾಗಿತ್ತು ಎಂಬುದು ತಿಳಿದುಬರುತ್ತದೆ. ಅಂಥ ಕೆಲವು ಉದಾಹರಣೆಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಒಂದನೆಯ ಜಗದೇಕಮಲ್ಲನ ರಾಣಿ ಸೋಮಲದೇವಿಯು ನಿಪ್ಪಾಣಿಯಲ್ಲಿ ಸರಸ್ವತಿದೇವಿಯನ್ನು ಪ್ರತಿಷ್ಠಾಪಿಸಿ ಅದರ ಅಂಗಭೋಗ, ರಂಗಭೋಗ, ನೈವೇದ್ಯಕ್ಕೆ, ಅಲ್ಲಿ ವಿದ್ಯಾರ್ಜನೆ ಮಾಡುವ 'ವಿದ್ಯಾರ್ಥಿಗಳಮಸನಾಚ್ಛಾದನ'ಕ್ಕೆ, ಮೂರ್ತಿಯನ್ನು ಕೆತ್ತಿದ ಶಿಲ್ಪಿ ಸುಮೋಜನಿಗೆ ಒಟ್ಟು ೩೦೦ ಮತ್ತರು ತೋಟವನ್ನು, ೫೦ ಪೊನ್ನ ಗದ್ಯಾಣಗಳನ್ನು ದಾನ ಮಾಡುತ್ತಾಳೆ.[167] ಆರನೆಯ ವಿಕ್ರಮಾದಿತ್ಯನ ರಾಣಿಯರಲ್ಲಿ ಒಬ್ಬಳಾದ ಮಾಳಲದೇವಿಯು ಕಲ್ಕೇರಿಯಲ್ಲಿ ಶಿವಾಲಯ, ಆದಿತ್ಯಾಲಯ, ವಿಷ್ಣುಗ್ರಹ, ಬುದ್ಧವಿಹಾರ, ನಾಗಾಲಯ ಮುಂತಾದವುಗಳನ್ನು ಮಾಡಿಸಿದಳು. ಅವಳು ಮಾಡಿಸಿದ ಸ್ವಯಂಭು ಸೋಮೇಶ್ವರ ದೇವರಿಗೆ ಪೆರ್ಗ್ಗಡೆ ದಿವಾಕರನು ಬನವಾಸಿ ೧೨೦೦೦ದ ಕಂಪಣ ಬಾಸವೂರ–೧೪೦ರ ಬಳಿಯ ಬರದೊದೊರೆಯ ದಕ್ಷಿಣದಲ್ಲಿರುವ 'ಪುಲ್ಲವಳ' ಎಂಬ ಗ್ರಾಮವನ್ನು ಧಾರಾಪೂರ್ವಕವಾಗಿ ದತ್ತಿ ಕೊಟ್ಟನೆಂದು ಕಲ್ಕೇರಿ ಶಾಸನ ತಿಳಿಸುತ್ತದೆ.[168]

ಕಲ್ಯಾಣ ಚಾಲುಕ್ಯರ ಸಾಮಂತರಲ್ಲೇ ಪ್ರಖ್ಯಾತರೂ ಮತ್ತು ಪ್ರಬಲರೂ ಆಗಿದ್ದ ಹೊಯ್ಸಳರು ಹಲವಾರು ಜಗತ್ಪ್ರಸಿದ್ಧ ದೇವಾಲಯಗಳನ್ನು ಕಟ್ಟಿಸಿ ಅವುಗಳಿಗೆ ಸಾಕಷ್ಟು ದಾನಗಳನ್ನು ನೀಡಿದ್ದಾರೆ. ಹೊಯ್ಸಳ ವಿಷ್ಣುವರ್ಧನನು ತನ್ನ ಪಿರಿಯರಸಿ ಪಟ್ಟಮಹಾದೇವಿ ಶಾಂತಲೆಯ ಜೊತೆಗೆ ಬೇಲೂರಿನಲ್ಲಿ ವಿಜಯನಾರಾಯಣ ದೇವಾಲಯ ನಿರ್ಮಿಸಿ ಅದಕ್ಕೆ ಬಹು ವಿಧದ ದಾನಗಳನ್ನು ನೀಡಿದ್ದಾನೆ.[169] ಅದೇ ರೀತಿ ಅವನ ಆಳ್ವಿಕೆಯಲ್ಲಿ ತಲಕಾಡಿನಲ್ಲಿ ಕೀರ್ತಿನಾರಾಯಣ ದೇವಾಲಯ,[170] ಶಾಂತಿಗ್ರಾಮದಲ್ಲಿ ಧರ್ಮೇಶ್ವರ ದೇವಾಲಯಗಳು[171]

ನಿರ್ಮಾಣವಾಗಿವೆ. ಇವೆಲ್ಲಕ್ಕೂ ದೇವರ ಸೇವೆಗೆ, ಪೂಜೆ, ನೈವೇದ್ಯ, ರಂಗಭೋಗ, ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆಂದು ಹೀಗೆ ಬೇರೆ ಬೇರೆ ಉದ್ದೇಶಗಳಿಗೆ ಭೂದಾನ ನೀಡಲಾಗಿದೆ.

ಮೂರನೆಯ ಸೋಮೇಶ್ವರನ ಕಾಲದಲ್ಲಿ ಅವನ ಮಹಾಮಂಡಳೇಶ್ವರ ಬಿಜ್ಜಲದೇವರಸನು ಕನ್ನಪಯ್ಯನಾಯಕ ಎಂಬಾತನು ಕಟ್ಟಿಸಿದ ಕನ್ನೇಶ್ವರ, ಚಟ್ಟೇಶ್ವರ ಮತ್ತು ಮಲ್ಲಿಕಾರ್ಜುನ ತ್ರಿಕೂಟ ಶಿವಾಲಯಕ್ಕೆ ಭೂಮಿದಾನ ನೀಡಿದ್ದಾನೆ.[172] ದಂಡನಾಯಕ ಪೋಚಿಮಯ್ಯನು 'ಕೆಱೆಯುಂ ಕೆಱೆಯ ತುಂಬುಳಗಳುಮಂ ಬಾವಿಗಳಮಂ ಮಾಡಿಯೂರೊಡೆವಾಳ್ಕೆಯುಂ ಮೇಲಾಳ್ಕೆಯುಂ ತಂನದಾಗಿ ಪೋಚೇಶ್ವರಮಂ ಮಾಡಿಸಿ' ಆ ದೇಗುಲಕ್ಕೆ ಭೂಮಿದಾನವನ್ನೂ ಮಾಡಿ, ಇಬ್ಬರು 'ವಿದ್ಯಾಮನ್ತ್ರ-ಮನೆ'ಗಳನ್ನು ದತ್ತಿ ಮಾಡಿಕೊಟ್ಟಿದ್ದಾನೆ.[173] ಕ್ರಿ.ಶ. ೧೦೪೪ರ ನಂದವಾಡಗಿ ಶಾಸನದ ಪ್ರಕಾರ ಮಹಾಮಂಡಳೇಶ್ವರನೊಬ್ಬನು ಅನೇಕ ದೇವಾಲಯಗಳನ್ನು ಕಟ್ಟಿಸಿ ಜೀರ್ಣೋದ್ಧಾರ ಮಾಡಿಸಿದ್ದಾನೆ. ಹೀಗಾಗಿ ಅವನನ್ನು 'ಭಾವನ ಗಂಧವಾರಣ' ಎಂದು ಕರೆಯಲಾಗಿದೆ.[174] ಅವನು ದೇವಾಲಯ ನಿರ್ಮಿಸಿ ಅದಕ್ಕೆ ಪೂರಕವಾಗಿ ಯಾವ ರೀತಿ ದಾನಗಳನ್ನು ನೀಡಿದನೆಂಬುದನ್ನು ಶಾಸನ ವಿಹಂಗಮವಾಗಿ ವಿವರಿಸುತ್ತದೆ.

| | | |
|---|---|---|
| ಚಾಲುಕ್ಯರ ರಾಜಧಾನಿ ಕಲ್ಯಾಣದಲ್ಲಿ | – | ತುಂಬೇಶ್ವರ ದೇವಾಲಯ, ಮಠ, ದೀಪಮಾಲೆ ಕಂಬ ಮತ್ತು ಒಂದು ಕೆರೆ |
| ರಾಜಧಾನಿ ಅಣ್ಣಿಗೇರಿಯಲ್ಲಿ | – | ಚೋಳಗೊಂಡ ತ್ರೈಪುರುಷ ದೇವರಸಾಲೆ, ಭೋಗಾದಿತ್ಯನ ಆಲಯ, ಪೆರ್ಮಾಡಿ ಬಸದಿಪುರದ ಕೇರಿ ಮತ್ತು ದೊಡ್ಡಕೆರೆ |
| ಮುಳ್ಗುಂದದಲ್ಲಿ | – | ಶ್ರೀ ಪಾಳೇಶ್ವರ ಮಠ |
| ಕೊಳ್ಪುಗೆಯಲ್ಲಿ | – | ದಿಕ್ಪಾಲಕರ ಸಮೇತ ಶಿವಾಲಯ ಮತ್ತು ಜಲಶಯನದೇವರ ತೀರ್ಥ(ಕೊಳ) |
| ನಂದಾಪುರದಲ್ಲಿ | – | ಕೇತೇಶ್ವರ ದೇವಾಲಯ |
| ಕೋಹಳ್ಳಿಯಲ್ಲಿ | – | ದಾನವಿನೋದ ತ್ರೈಪುರುಷ ದೇವಾಲಯದ ಸಾಲೆ |
| ಮಂಡಲಿಗೆರೆಯಲ್ಲಿ | – | ಶಂಭುನಾರಾಯಣ (ಹರಿಹರ) ದೇವಾಲಯ |
| ಬೆಳ್ಗಲ್ಲಿಯಲ್ಲಿ | – | ಕೇತೇಶ್ವರ ದೇವಾಲಯ |
| ರಾಜಧಾನಿ ಬನವಾಸಿಯಲ್ಲಿ | – | ಜಯಂತೀ ಮಧುಕೇಶ್ವರದ ಮೊಗಸಾಲೆ |
| ಕರಿವಿಡಿಯಲ್ಲಿ | – | ಕೇತೇಶ್ವರ ದೇವಾಲಯ |
| ನವಿಲೆಯಲ್ಲಿ | – | ಜಡೆಯಸಂಕರ ದೇವಾಲಯ |
| ನಂದವಾಡಗೆಯಲ್ಲಿ | – | ನಾಗಲೇಶ್ವರ ದೇವಾಲಯ, ಮಠ |
| ಪೇರೂರಲ್ಲಿ | – | ಕೇತೇಶ್ವರ ದೇವಾಲಯ |

ಹೀಗೆ ಅನೇಕ ದೇವಾಲಯಗಳನ್ನು ಕಟ್ಟಿಸಿದ್ದಲ್ಲದೆ, ಪೊನಗುಂದದ ತ್ರಿಭುವನತಿಳಕ ಬಸದಿ, ಪುರಗೂರ ವೀರಜಿನಾಲಯ, ಕುಂದರಗೆಯ ಜಿನಮಂದಿರಗಳನ್ನು ಜೀರ್ಣೋದ್ಧಾರ ಮಾಡಿಸಿದ. ಇದೇ ಸಂದರ್ಭದಲ್ಲಿ ಸಂಗಮದ ಸಂಗಮೇಶ್ವರ ದೇವರ ಗೋಪುರ ಜೀರ್ಣೋದ್ಧಾರಕ್ಕೆ ೧೦೦ ಮತ್ತರು ಭೂಮಿದಾನ ನೀಡಿದ. ಇದಲ್ಲದೆ,

| | |
|---|---|
| ಪಾಳಪಾವಿಗ ಮಾರೋಜನಿಗೆ | – ೫೦ ಮತ್ತರು |
| ಪಂಚಮಹಾಶಬ್ದಕ್ಕಾಗಿ ಧರೋಜನಿಗೆ | – ೧೦ ಮತ್ತರು |
| ವಂಸಿಗನಿಗೆ | – ೧೦ ಮತ್ತರು |
| ಇಬ್ಬರು ಹಾಡುಗಾರರಿಗೆ | – ೩೦ ಮತ್ತರು |
| ಇಬ್ಬರು ಪಾತ್ರದವರಿಗೆ | – ೪೮ ಮತ್ತರು |
| (ರಂಗ)ಭೋಗದ ಸೂಳೆ ನಾಲ್ವರಿಗೆ | – ೭೬ ಮತ್ತರು |
| ಮಾಲೆಗಾರನಿಗೆ | – ೧೩ ಮತ್ತರು |
| ದಂಡೀಶ್ವರನಿಗೆ | – ೧೨ ಮತ್ತರು ಭೂಮಿಯನ್ನು ದಾನ ನೀಡುತ್ತಾನೆ. |

ಈ ಉಲ್ಲೇಖವನ್ನು ಗಮನಿಸಿದರೆ ದೇವಾಲಯ ನಿರ್ಮಾಣ ಹಾಗೂ ದೇವಾಲಯದ ಜೀರ್ಣೋದ್ಧಾರದ ಸಂದರ್ಭದಲ್ಲಿ ದೇವಾಲಯಕ್ಕೆ ಬೇಕಾದ ಮುಂದಿನ ಎಲ್ಲ ವ್ಯವಸ್ಥೆಗಳನ್ನು ಹೇಗೆ ಮಾಡುತ್ತಿದ್ದರು ಮತ್ತು ಅದಕ್ಕೆ ಯಾವ ರೀತಿಯಲ್ಲಿ ದಾನ ನೀಡುತ್ತಿದ್ದರು ಎಂಬುದು ತಿಳಿದು ಬರುತ್ತದೆ.

ದೇವಾಲಯ ನಿರ್ಮಾಣ ಮಾಡಲು ಹಿನ್ನೆಲೆಗಳೇನೇ ಇರಬಹುದು. ಆದರೆ, ದಾನಕ್ಕೆ ದೇವಾಲಯ ನಿರ್ಮಾಣ ಸಂದರ್ಭವೂ ಒಂದು ಹಿನ್ನೆಲೆಯಾಗಿದೆ, ಕಾರಣವಾಗಿದೆ ಎಂದು ಸ್ಪಷ್ಟವಾಗಿ ಹೇಳಬಹುದು. ತಡಖೇಲ ಶಾಸನವು ದಂಡನಾಯಕ ನಾಗವರ್ಮನು ಸಕ್ಕರಗೆ ಎಂಭತ್ತರೊಳಗಿನ ತಡಕಲ್ಲದಲ್ಲಿ ತನ್ನ ಪರಿವಾರದವರೆಲ್ಲರ ಹೆಸರಿನಲ್ಲಿ ಒಂದೊಂದು ದೇವಾಲಯ ಕಟ್ಟಿಸಿ ಅವುಗಳಿಗೆ ಪೂಜೆ, ನೈವೇದ್ಯ, ಪಾತ್ರ, ಪಾವುಳ, ಆಹಾರದಾನಕ್ಕೆ, ದೇಗುಲದ ಜೀರ್ಣೋದ್ಧಾರಕ್ಕೆ, ಅಲ್ಲಿನ ಬ್ರಾಹ್ಮಣರಿಗೆ ಚೈತ್ರ ಪವಿತ್ರಕ್ಕೆ ಮುಂತಾದವುಗಳಿಗೆ ಭೂಮಿ, ಹಣ, ಅಂಗಡಿ, ಗಾಣಗಳನ್ನು ದಾನ ಮಾಡಿರುವುದನ್ನು ವಿವರವಾಗಿ ತಿಳಿಸುತ್ತದೆ.[175] ಇದೇ ಸಂದರ್ಭದಲ್ಲಿ ಆ ಊರಿನ ಸಿಂಗಿಸೆಟ್ಟಿಯರೂ ಊರಿನ ಮಹಾಜನರು ಆದೇವಾಲಯಗಳಿಗೆ ದಾನ ಬಿಡುತ್ತಾರೆ.

ಕರಡಿಕಲ್ಲು,[176] ಬಳ್ಳಿಗಾವೆ,[177] ಮಲ್ಖಾಣ,[178] ಹೊಸೂರು,[179] ನಿಲಗುಂದ,[180] ನಿಡೋಣಿ[181] ಶಾಸನಗಳು ಹಾಗೂ ಇನ್ನೂ ಅನೇಕ ಶಾಸನಗಳು ದೇವಾಲಯ ನಿರ್ಮಿಸಿ ಆ ಸಂದರ್ಭದಲ್ಲಿ ದೇವಾಲಯದ ನಿರ್ಮಾತೃ ಮತ್ತು ಅಲ್ಲಿ ನೆರೆದಿದ್ದ ಜನರೂ ದಾನ ಮಾಡಿದುದನ್ನು ತಿಳಿಸುತ್ತವೆ.

## 8. ವಾತಾವರಣ :

ಶಾಸನಗಳಲ್ಲಿ ಬರುವ ಅಸಂಖ್ಯಾತ ದಾನ-ದತ್ತಿಗಳನ್ನು, ದಾನಿಗಳ ಔದಾರ್ಯವನ್ನು ಕಂಡಾಗ ಆ ದಾನಿಗಳೆಲ್ಲರೂ ಸ್ವಭಾವತಃ ಉದಾರಿಗಳೇ ಇಲ್ಲವೆ ಸಾಂಘಿಕವಾದ ವಾತಾವರಣದ ಪ್ರಭಾವದಿಂದ ಪ್ರಚೋದಿತರೇ ಎಂಬ ಸಂದೇಹ ಉದ್ಭವಿಸುತ್ತದೆ. ಇಲ್ಲಿ ಎರಡೂ ಅಂಶಗಳನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಹಲವರು ತಮ್ಮ ಔದಾರ್ಯ, ಪರೋಪಕಾರ ಬುದ್ಧಿಯಿಂದ ದಾನ ನೀಡಿದರೆ; ಕೆಲವರಾದರೂ ಅಂಥ ಸಾಮಾಜಿಕ ವಾತಾವರಣದಿಂದ ಪ್ರೇರಿತರಾಗಿ ದಾನ ನೀಡಿದ್ದಾರೆ. ಪ್ರಾರ್ಥನೆ, ಯಜ್ಞ, ಧಾರ್ಮಿಕ ವಿಧಿಗಳು ನಡೆದಾಗ ಅವುಗಳಲ್ಲಿ ಭಾಗವಹಿಸುವವರ ಅನುಭವಗಳ ಅಭಿವ್ಯಕ್ತಿಯಾಗುತ್ತದೆ. ಅಲ್ಲದೆ ಆ ಸಮೂಹದ ಮನೋಭಾವ ಮತ್ತು ವ್ಯವಸ್ಥೆಗಳನ್ನು ರೂಪಿಸುವುದರಲ್ಲಿ ಮತ್ತು ನಿರ್ಣಯಿಸುವುದರಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತದೆ. ದೊಡ್ಡ ದೊಡ್ಡ ದೇವಸ್ಥಾನಗಳನ್ನು ಕಟ್ಟಿಸಿದಾಗಲೋ, ಉತ್ಸವವೊಂದನ್ನು ವೈಭವದಿಂದ ನೆರವೇರಿಸಿದಾಗಲೋ, ರಾಜನ ಆಗಮನದಿಂದ ವಿಶೇಷ ಪೂಜೆಗಳು ನಡೆದಾಗಲೋ ಅಲ್ಲಿ ಸೇರಿದ್ದ ಜನರ ದೊಡ್ಡ ಸಮೂಹದಲ್ಲಿ ದಾನ ಬುದ್ಧಿಯು ಸಾಂಕ್ರಾಮಿಕವಾಗಿ ಹರಡುತಿತ್ತು ಎಂದು ಊಹಿಸಬಹುದು.[182] ಅಂತೆಯೇ ದೇವರ ಪ್ರತಿಷ್ಠೆಯ ಸಂದರ್ಭದಲ್ಲಿ ಉತ್ಸವಗಳ ಸಂದರ್ಭದಲ್ಲಿ ಜನರು ಸಾಮೂಹಿಕವಾಗಿ ದಾನ ಬಿಟ್ಟಿರುವುದನ್ನು ಕಾಣಬಹುದು.

ಬಾಳಂಬೀಡಿನ ಮಹಾಪ್ರಭೂ ಬಮ್ಮಗಾವುಂಡನು ಬಾಳಂಬೀಡಿನಲ್ಲಿ ಬ್ರಹ್ಮೇಶ್ವರದೇವರನ್ನು ಪ್ರತಿಷ್ಠಿಸಿ ವಿಮಳ ಶಕ್ತಿ ಪಂಡಿತ ದೇವರ ಪಾದತೊಳೆದು "ಬ್ರಹ್ಮೇಶ್ವರ ದೇವರಂಗಭೋಗ, ಜಲ, ಗಂಧಾಕ್ಷತೆ, ಪುಷ್ಪ, ದೀಪ, ಧೂಪ, ನಿವೇದ್ಯ, ತಾಂಬೂಲಮೆಂಬ ಅಷ್ಟವಿಧಾರ್ಚನೆಗೆ ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ 'ಗದ್ದೆ ಕಮ್ಮ ೫೦ ಮತ್ತರನ್ನು, ಅಲ್ಲಿದ್ದ ತಪೋಧನರ ಆಹಾರದಾನಕ್ಕೆ ೫೦ ಕಮ್ಮಗದ್ದೆ, ದೇವರಿಗೆ ಕಮ್ಮ ೬೦ ಮತ್ತ, ೫೦೦ ಮರದ ತೋಂಟ ಮತ್ತರು, ದೇವರ ನಂದಾದೀವಿಗೆಗೆ ಮಾನೆಂಣ್ಣೆ ಕೊಳಗವಿಂಡ ಗಾಣ' ಮುಂತಾದವುಗಳನ್ನು ದಾನಬಿಡುತ್ತಾನೆ.[183] ಈ ದಾನಶೀಲತೆ ಅಲ್ಲಿ ನೆರೆದಿದ್ದ ಜನ ಸಮೂಹದ ಮೇಲೆ ಬೀರಿದ ಪ್ರಭಾವ ಹೇಗಿತ್ತು ಎಂಬುದನ್ನು ಇದೇ ಶಾಸನದಿಂದ ತಿಳಿಯಬಹುದು. ಬಮ್ಮಗಾವುಂಡನ ದಾನದಿಂದ ಪ್ರೇರಿತವಾದ ತಂಬುಲಿಗ ಸಾಸಿರ್ವರು ದೇವರಿಗೆ ತಮ್ಮ ವ್ಯಾಪಾರದ ಪ್ರತಿಯೊಂದು ವಸ್ತುವಿನ ಹೇರಿಗೊಂದು ವೀಸವನ್ನು ಮತ್ತು ತಲಾ ಎಲ್ಲರೂ ಅರ್ಧ ವೀಸದಂತೆ ದತ್ತಿ ಬಿಡುತ್ತಾರೆ. ಆ ದೇವಾಲಯದ ಶಕ್ತಿಪಂಡಿತದೇವ ಗುರುಗಳ ಮಗಳು ಕುರುವರ ಬಾಗಿಯಕ್ಕ ದೇವರ ಗರ್ಭಗೃಹ ಸುಖನಾಸಿಯ ಕೆಲಸಕ್ಕೆಂದು ೧೫ ಗದ್ಯಾಣಗಳನ್ನು ನೀಡುತ್ತಾಳೆ. ಗುರುಗಳ ಇನ್ನೊಬ್ಬ ಮಗಳು ಉತ್ತರಕಬ್ಬೆ ದೇವಕಾರ್ಯ, ಗುರುಗಳ ಕಾರ್ಯಗಳನ್ನು ಜನ್ಮ ಜನ್ಮಾಂತದವರೆಗೆ ನಡೆಯುವಂತೆ ದತ್ತಿಬಿಡುತ್ತಾಳೆ.

ಸಿಂದವಾಡಿ ಸಾಸಿರವನ್ನು ಆಳುತ್ತಿದ್ದ ಮಹಾಮಂಡಳೇಶ್ವರ ಮಲ್ಲರಸನ ಪಾದಪದ್ಮೋಪ ಜೀವಿಯಾದ ಗುತ್ತಿಯ ದಂಡನಾಯಕ ಕೇಶವರಾಜನು ಗುತ್ತಿಯ ನರಸಿಂಹ ವಿಷ್ಣುಗೃಹದ

ದೇವಸ್ನಾನ ನಿವೇದ್ಯಾದಿಗಳಿಗೆಂದು ೧೦೦ ಮತ್ತರು ಭೂಮಿ, ಗಾಣ, ತೋಟ ಮುಂತಾದವುಗಳನ್ನು ದಾನ ನೀಡುತ್ತಾನೆ. ಇದೇ ಸಂದರ್ಭದಲ್ಲಿ ಅಲ್ಲಿ ನೆರೆದಿದ್ದ ಇತರ ಅಧಿಕಾರಿಗಳಿಂದ ಮಹಾ ಪ್ರಧಾನ ಕಾಳಿದಾಸಯ್ಯನ ಸಮರ್ಪಣೆಯಿಂದ ಗುತ್ತಿಯ ಪೆರ್ಗಡೆ ಹಣಪಯ್ಯ, ಬಿಲ್ಲವರಸ, ಸಾವಾಸಿ ಜನಾರ್ಧನ ಭಟ್ಟನಾಯಕ, ಕೋಟೆಯ ಉತ್ತಿಭಟ್ಟನಾಯಕ, ಸಾವಿರಾಣನಾಯಕ, ಸೇನಬೋವ ನಾಕರಸ ಮುಂತಾದವರು ಸೇರಿ ೧೦೦ ಮತ್ತರು ಭೂಮಿಯನ್ನು, ಮನೆ ನಿವೇಶನಗಳನ್ನು ನೀಡುತ್ತಾರೆ. ಹಾಗೇ ಅಲ್ಲಿದ್ದ ಕನ್ನಡ ಸನ್ಧಿ ವಿಗ್ರಹಿ ದಂಡನಾಯಕ ಭಯೊಡೆಯ, ದಂಡನಾಯಕ ಸೋವರಸ, ದಂಡನಾಯಕ ಸೂರ್ಯ್ಯಭಟ್ಟನಾಯಕ, ಮಂಡಳಿಕ ಭಟ್ಟನಾಯಕ, ಸೇನಬೋವ ನಾಕರಸ, ಚನ್ದಿಮಯ್ಯನಾಯಕ ಮುಂತಾದವರು ಕೆರೆಯನ್ನು ಕಟ್ಟಿಸಲೆಂದು ೩೩ ಮತ್ತರು ಭೂಮಿಯನ್ನು ದಾನ ನೀಡುತ್ತಾರೆ.[184]

ಇನ್ನು ದೇವಾಲಯ ನಿರ್ಮಾಣ ಅಥವಾ ಜಿನಾಲಯ ಕಟ್ಟಿಸುವಾಗಲೂ ಈ ರೀತಿಯ ವಾತಾವರಣದ ಪ್ರೇರಣೆ ಬಹು ಮಹತ್ತರವಾಗಿರುತ್ತಿತ್ತು. ಎಲ್ಲರೂ ಸಹಕಾರದಿಂದ ಕೂಡಿ ದೇವಾಲಯದ ಕಾರ್ಯವನ್ನು ನೆರವೇರಿಸುತ್ತಿದ್ದರು. ಒಬ್ಬರು ಒಂದು ಕಾರ್ಯಕ್ಕೆಂದು ದಾನ ನೀಡಿದರೆ, ಮತ್ತೊಬ್ಬರು ಸ್ವಯಂಪ್ರೇರಿತರಾಗಿ ಮತ್ತು ಸಮೂಹದಿಂದ ಪ್ರೇರಿತರಾಗಿ ಮತ್ತೊಂದು ಕಾರ್ಯವನ್ನು ಪೂರೈಸಲು ದಾನ ನೀಡುತ್ತಿದ್ದರು. ಬಸವಕಲ್ಯಾಣದಲ್ಲಿ ಚಂದ್ರಪ್ರಭ ಜಿನಾಲಯವನ್ನು ಕಟ್ಟಿಸಿದ್ದು ಕಾಲಾಂತರದಲ್ಲಿ ಅದು ಶಿಥಿಲಗೊಂಡಾಗ ರಚ್ಚಮಲ್ಲ ಪೆರ್ಮಾಡಿ ಮತ್ತು ರವಿಯಣ ಎಂಬುವರು ಚಂದ್ರನಾಥ ಬಸದಿಯನ್ನು ಹೊಸದಾಗಿ ಮಾಡಿಸುತ್ತಾರೆ. ಈ ಸಂದರ್ಭದಲ್ಲಿ ದೇವಪಾರ್ಯ್ಯ, ಚಟ್ಟಪ, ಭರತ, ಶ್ರೀಪತಿ ಮತ್ತು ರಾವದೇವನೆಂಬುವವರೆಲ್ಲರೂ ಬಸದಿಯ ನಿರ್ಮಾಣಕ್ಕೆ ಸಹಾಯ ಮಾಡಿದರೆಂದು ಬಸವಕಲ್ಯಾಣದ ಶಾಸನ ತಿಳಿಸುತ್ತದೆ.[185] ಇದೇ ಕಾರ್ಯದಿಂದ ಪ್ರೇರಿತಳಾದ ಜಕ್ಕಣಬ್ಬೆ ಎಂಬುವವಳು ಅಲ್ಲಿನ ಮುನಿಗಣಕ್ಕೆ ಆಹಾರದಾನದ ವ್ಯವಸ್ಥೆಯನ್ನು ಮಾಡಿಸಿದರೆ, ವೈಜಪಯ್ಯನ ಹಿರಿಯ ಮಗನಾದ ಹೀರಪಾಂಕ ಎಂಬುವವನು ಬಸದಿಯ ಸಹಸ್ರಕೂಟ ಬಿಂಬವನ್ನು ಮಾಡಿಸುತ್ತಾನೆ. ಅದೇ ರೀತಿ ಈಶ್ವರಸೆಟ್ಟಿ ಎಂಬುವವನು ಮಾನಸ್ತಂಭವನ್ನು ದಾನ ಮಾಡುತ್ತಾನೆ.[186]

ಈ ಮೇಲಿನ ಎಲ್ಲ ಉದಾಹರಣೆಗಳಿಂದ ದಾನ ಕಾರ್ಯ ಮಾಡುತ್ತಿದ್ದ ಒಂದು ಧಾರ್ಮಿಕ ವಾತಾವರಣವು ಇನ್ನೂ ಹೆಚ್ಚಿನ ದಾನಗಳನ್ನು ನೀಡಲು ಜನರಿಗೆ ಪ್ರೇರಣೆಯಾಗಿತ್ತು ಎಂಬುದನ್ನು ತಿಳಿಯಬಹುದು. ಇದೇ ರೀತಿ ಸಾಮಾಜಿಕ ವಾತಾವರಣದಿಂದ ಪ್ರೇರಿತರಾಗಿ ಅನೇಕ ಜನರು ದಾನ ನೀಡಿದ ಉಲ್ಲೇಖಗಳು ಮೂನ್ನೂರಾ ಐವತ್ತಕ್ಕೂ ಹೆಚ್ಚು ಶಾಸನಗಳಲ್ಲಿ ಸಿಗುತ್ತವೆ. ಹೀರೇಹಡಗಲಿ,[187] ಆಲಂಪುರ,[188] ದೇವರಗುಡಿ,[189] ದಿಗ್ಗಾಂವ,[190] ಬಾಗಳಿ,[191] ಪೊಲವಾಸ,[192] ಬಸವಕಲ್ಯಾಣ,[193] ಚಟ್ನಹಳ್ಳಿ[194] ಶಾಸನಗಳು ವಾತಾವರಣದ ಪ್ರಭಾವದಿಂದ ಸಾಮೂಹಿಕವಾಗಿ ದಾನನೀಡಿದ ವಿವರಗಳನ್ನು ತಿಳಿಸುತ್ತವೆ.

## ೯. ಸ್ವಧರ್ಮ ನಿಷ್ಠೆ ಮತ್ತು ಅನ್ಯಮತ ದ್ವೇಷ :

ಧರ್ಮ. ಧರ್ಮನಿಷ್ಠೆ ಮತ್ತು ಅನ್ಯಮತ ದ್ವೇಷಗಳ ಕಾರಣದಿಂದ ಪುರಾತನ ಕಾಲದಿಂದಲೂ ಭಾರತೀಯ ಸಮಾಜದಲ್ಲಷ್ಟೇ ಅಲ್ಲ ಪ್ರಪಂಚದ ನಾನಾ ಕಡೆಗಳಲ್ಲಿ ಸಂಘರ್ಷಗಳು ನಡೆಯುತ್ತಾ ಬಂದಿವೆ. ಕರ್ನಾಟಕದಲ್ಲಿ ಕ್ರಿ.ಶ. ೧೨ನೇ ಶತಮಾದನ ಕೊನೆಯ ಭಾಗದಲ್ಲಿ ಸ್ವಧರ್ಮ ನಿಷ್ಠೆ ಮತ್ತು ಅನ್ಯಮತ ದ್ವೇಷ, ನಿಂದನೆಗಳು ಬಹಿರಂಗವಾಗಿಯೇ ನಡೆದಿರುವುದನ್ನು ಕಾಣಬಹುದು. ಬಹು ಹಿಂದೆಯೇ ಸಾಹಿತ್ಯ ಕೃತಿಗಳಲ್ಲಿ ಈ ರೀತಿಯ ಉದಾಹರಣೆಗಳು ಸಿಗುತ್ತವೆ. ಶಾಸನಗಳಲ್ಲಿ ಈ ರೀತಿಯ ಭಾವನೆಗಳು ವ್ಯಕ್ತವಾಗಿರುವುದನ್ನು ಗಮನಿಸಬಹುದು. ರಾಜರು ಹಾಗೂ ಉನ್ನತ ಹುದ್ದೆಯಲ್ಲಿದ್ದ ಅಧಿಕಾರಿಗಳು ಅನ್ಯಮತದ ಬಗ್ಗೆ ಸಹಿಷ್ಣುತೆಯ ಭಾವನೆ ಹೊಂದಿದ್ದರೂ ಅವರಲ್ಲಿ ಸ್ವಧರ್ಮ ನಿಷ್ಠೆ ಮಾನವ ಸಹಜ ಸ್ವಭಾವಕ್ಕೆ ಅನುಗುಣವಾಗಿ ವ್ಯಕ್ತವಾಗಿದೆ. ಮೌರ್ಯರ ಕಾಲದಿಂದಲೂ ಆಳರಸರಲ್ಲಿ ಸ್ವಧರ್ಮ ನಿಷ್ಠೆ ಸಹಜವಾಗಿತ್ತು. ಚಂದ್ರಗುಪ್ತಮೌರ್ಯ ಜೈನಧರ್ಮಕ್ಕೆ ತೋರಿಸಿದಷ್ಟು ನಿಷ್ಠೆಯನ್ನು ಬೇರೆ ಧರ್ಮಗಳಿಗೆ ತೋರಿಸಿಲ್ಲ. ಅಶೋಕ ತಾನು ಸ್ವೀಕರಿಸಿದ ಬೌದ್ಧಧರ್ಮಕ್ಕೆ ತೋರಿದ ನಿಷ್ಠೆ, ನೀಡಿದ ದಾನಗಳಷ್ಟು ಬೇರೆ ಧರ್ಮಗಳಿಗೆ ನೀಡಿಲ್ಲ, ಶಾತವಾಹನರು, ಕದಂಬರು, ಗಂಗರು, ಬದಾಮಿ ಚಾಲುಕ್ಯರು, ತಂಜಾವೂರಿನ ಚೋಳರು, ಮಳಖೇಡದ ರಾಷ್ಟ್ರಕೂಟರು ಅವರವರ ಆಳ್ವಿಕೆಯ ಅವಧಿಯಲ್ಲಿ ತಾವು ಪಾಲಿಸುತ್ತಿದ್ದ ಧರ್ಮಕ್ಕೆ ನಿಷ್ಠರಾಗಿದ್ದರು. ತಂಜಾವೂರಿನ ಚೋಳರು ಕಲ್ಯಾಣ ಚಾಲುಕ್ಯರ ಸಮಕಾಲೀನರಾಗಿದ್ದು, ಅವರ ಶೈವ ನಿಷ್ಠೆ ಪರಾಕಾಷ್ಠೆಯನ್ನು ತಲುಪಿತ್ತು. ವೈಷ್ಣವರಾಗಿದ್ದ ರಾಮಾನುಜಾಚಾರ್ಯರನ್ನು ಶಿವಭಕ್ತನಾಗಿದ್ದ ಕರಿಕಾಲಚೋಳ ನಾನಾ ವಿಧದಲ್ಲಿ ಕಾಡಿದ್ದು: ಅದರಿಂದ ಬೇಸತ್ತು ರಾಮಾನುಜಾಚಾರ್ಯರು ಕಲ್ಯಾಣ ಚಾಲುಕ್ಯರ ಮಹಾಮಂಡಳೇಶ್ವರ ಹೊಯ್ಸಳ ವಿಷ್ಣುವರ್ಧನನ ಆಶ್ರಯ ಬೇಡಿಬಂದದ್ದು ಇತಿಹಾಸ ಪ್ರಸಿದ್ಧ ಘಟನೆ. ಕಲ್ಯಾಣ ಚಾಲುಕ್ಯರೂ ಸಹ ತಮ್ಮ ನಿಷ್ಠೆಯನ್ನು ಹಿಂದೂ ಧರ್ಮಕ್ಕೆ ಅದರಲ್ಲೂ ಶೈವಮತಕ್ಕೆ ತೋರಿದಷ್ಟು ಬೇರೆ ಮತಗಳಿಗೆ ತೋರಿಸಲಿಲ್ಲ. ಈ ಹಿಂದೆಯೇ ಉಲ್ಲೇಖಿಸಿದಂತೆ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ೫೦೦ಕ್ಕೂ ಹೆಚ್ಚು ದೇವಾಲಯಗಳು ನಿರ್ಮಾಣವಾದರೆ ಇವುಗಳಲ್ಲಿ ೯೦ ಬಸದಿಗಳು, ಉಳಿದವುಗಳಲ್ಲಿ ಶೇಕಡಾ ೮೦ ರಷ್ಟು ಶಿವಾಲಯಗಳು. ಇಲ್ಲಿ ಚಾಲಕ್ಯರ ರಾಜಧರ್ಮ ಶೈವಮತವಾಗಿದ್ದರಿಂದ ಸಹಜವಾಗಿಯೇ ಶೈವಮತಕ್ಕೆ ಹೆಚ್ಚಿನ ಪ್ರೋತ್ಸಾಹಗಳು ದೊರೆತವು.

ಎಲ್ಲಾ ಮತಗಳೂ ತಮ್ಮ ಅನುಯಾಯಿಗಳಿಂದ ನಿಷ್ಠೆಯನ್ನು ಬಯಸುತ್ತವೆ. ಆ ನಿಷ್ಠೆಯನ್ನು ತೋರ್ಪಡಿಸಬೇಕೆಂದರೆ ಅದರ ತತ್ವಗಳನ್ನು ಪಾಲಿಸುವುದು, ಪ್ರಚಾರ ಮಾಡುವುದು, ಅದನ್ನು ಪೋಷಿಸುವುದು, ಕೈಲಾದಷ್ಟು ದಾನ-ದತ್ತಿಗಳನ್ನು ನೀಡಿ ಮತ-ಧರ್ಮದ ಅಭಿವೃದ್ಧಿ ಮಾಡುವುದು ಪ್ರಮುಖ ಮಾರ್ಗಗಳು. ಈ ನಿಟ್ಟಿನಲ್ಲಿ ಸಹಜವಾಗಿ ಸ್ವಧರ್ಮನಿಷ್ಠೆ ದಾನ-ದತ್ತಿಗಳನ್ನು ನೀಡಲು ಪ್ರೇರಕ ಅಂಶಗಳಾಗಿವೆ. ಅದರೊಂದಿಗೆ ಸ್ವಮತ ನಿಷ್ಠೆ ಹೆಚ್ಚಿದಂತೆ ಅನ್ಯಮತ ದ್ವೇಷ ಅಂಕುರಿಸುತ್ತದೆ. ಇದು ೧೨ನೆಯ ಶತಮಾನದ ಕೊನೆಯ ಭಾಗದಲ್ಲಿ

ಬಹಿರಂಗವಾಗಿಯೇ ವ್ಯಕ್ತವಾಗಿದೆ. 'ಪರಸಮಯ ಗಿರಿ ವಜ್ರದಂಡರುಂ ಜಗದ ಉದ್ಧಂಡರುಂ ಜಿನ ಸಮಯ ವನದಹ ದಾವಾನಳರುಂ ಮುನಿದರ್ಗ್ಗೆ ಹಾಳಾಹಳರುಂ ಬೌದ್ಧಸಮಯ ವಿಧ್ವಂಸನ ಪ್ರವೀಣರುಂ ಬಗೆಯಲು ಜಾಣರುಂ ಅನ್ಯ ಸಮಯಿಗಳ ಬೆನ್ನ ಬಾರನೆತ್ತುವರುಂ ಸೆಣಸುವರ ನೆತ್ತರಂ ಮರುಳ್ಗಳಿಂ ಕುಡಿಸುವರುಂ ಪರಸಮಯ ಘರಟ್ಟರುಂ ವೀರಕುಪ್ಪರ ವಟ್ಟಿರುಂ ಕಾಲನ ನಾಲಗೆಯ ಕೀಳ್ವರುಂ [ಚಾ]ರಿಯಂ ಕೂರದರ್ಗ್ಗೀವರುಂ ನಂಜನಂಜದುಂಬರಂ...' ಎಂದು ಶಾಸನವೊಂದು ಪರಮತವನ್ನು 'ಹೊಸೆದು ಮುಕ್ಕಿ'ದ ಪುರಾತನ ನೂತನರೆನಿಸಿದ ಅಸಂಖ್ಯಾತ ಗಣಂಗಳಲ್ಲಿ ಒಬ್ಬನಾದ ವೀರದಾಸನನ್ನು ವರ್ಣಿಸುತ್ತದೆ.[195] ಇದು ಆತನಿಗಿದ್ದ ಸ್ವಧರ್ಮ ನಿಷ್ಠೆಯನ್ನೂ, ಆತನ ಪರಮತ ದ್ವೇಷವನ್ನು ತಿಳಿಸುತ್ತದೆ. ಇದಕ್ಕೆ ಅಂದಿನ ಕಾಲದಲ್ಲಿ ಮನ್ನಣೆಯೂ ಇತ್ತು ಎಂಬುದೂ ಸಹ ಇದೇ ಶಾಸನದಿಂದ ತಿಳಿಯುತ್ತದೆ. ವೀರದಾಸನು 'ಪರಸಮಯಿಗಳಂ ಪಡಲ್ವಡಿಸೀಲೋಕಮನಾಕಂಪಂಗೊಳ್ಸಿ ಬಸದಿಗಳಂ ಹೊಸೆದು ಮುಕ್ಕಿ'ದನೆಂದು ವರ್ಣಿತನಾಗಿದ್ದಾನೆ. ಅಷ್ಟೇ ಅಲ್ಲದೆ ಇವನ ಈ ಸಾಧನೆಗೆ ಮಹಾಮಂಡಳೇಶ್ವರ ವಿರುಪದೇವರಸನು 'ಗಣಮತ'ವಾಗಿ ಭೂಮಿ, ಮತ್ತಿತರ ದಾನಗಳನ್ನು ನೀಡಿದನೆಂದು ಉಲ್ಲೇಖವಿದೆ.

ಅಣ್ಣಿಗೇರಿಯ ಶಾಸನವೊಂದು ಕಲಿಗೊಗ್ಗಿದೇವನನ್ನು ಜೈನ ಮೃಗಬೇಂಟೆಕಾರ, ಜೈನಾಗಮ ಧೂಮಕೇತು, ಜೈನ ಕುಠಾರ, ಜೈನಫಣಿ, ವೈನತೇಯ ಎಂದು ಮುಂತಾಗಿ ವರ್ಣಿಸಿದೆ.[196] ಅದೇ ರೀತಿ ಅಬ್ಬಲೂರು ಶಾಸನವು ಏಕಾಂತದ ರಾಮಯ್ಯನ ಶೈವನಿಷ್ಠೆ ಹೊಗಳುತ್ತದೆ. ಅವನಿಗೂ ಜೈನರಿಗೂ ನಡೆದ ಸಂವಾದ, ಪರಸ್ಪರ ಪಣಗಳು, ಪವಾಡದೋಪಾದಿ–ಯಲ್ಲಿ ಏಕಾಂತದ ರಾಮಯ್ಯನು ಗೆದ್ದುದನ್ನು ವಿವರಿಸುತ್ತದೆ.[197] ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಜೈನರಿಗೆ ಮತ್ತು ಶೈವರಿಗೆ ಹೋರಾಟ, ಮಾತಿನ ಮೂಲಕ ಅವಹೇಳನ, ನಿಂದನೆಯ ಮಟ್ಟವನ್ನು ಮೀರಿ ಕೃತಿಯ ಮೂಲಕವೂ ತಮ್ಮ ವಿರೋಧವನ್ನು ವ್ಯಕ್ತಪಡಿಸಿರುವುದು. ಜೈನ – ಶೈವ ಘರ್ಷಣೆಯಲ್ಲಿ ಆಗಲೇ ದುರ್ಬಲವಾಗಿದ್ದ ಬೌದ್ಧಮತವು ಕೆಲವೆಡೆಗಳಲ್ಲಾದರೂ ತನ್ನ ಅಸ್ಥಿತ್ವ ಉಳಿಸಿಕೊಳ್ಳುವಲ್ಲಿ ಹವಣಿಸುತ್ತಿತ್ತು. ಇಂತಹ ಮತೀಯ ಘರ್ಷಣೆಗಳು ಒಂದು ರೀತಿಯಲ್ಲಿ ಪ್ರತಿಷ್ಠೆಯ ವಿಷಯವಾಗಿ ಪರಿಣಮಿಸಿ ದಾನ – ದತ್ತಿಗಳಿಗೆ ಪ್ರೇರಣೆಯಾಗಿತ್ತು ಎಂಬುದನ್ನು ಅಲ್ಲಗಳೆಯುವಂತಿಲ್ಲ.

ನಾಗಯ್ಯನಾಯಕನ ಪೆರ್ಗ್ಗಡೆ ಕಾರಸ್ಥಾನದ ಅನುಭವ ಮತ್ತು ಅನುಕೂಲತೆಯಿಂದ ದೇಗುಲವಾಯ್ತು ಎಂದು ವಡ್ಡನಹಳ್ಳಿಯ ಒಂದು ಶಾಸನ ತಿಳಿಸುತ್ತದೆ.[198] ವ್ಯಕ್ತಿಯ ಅಧಿಕಾರ ಎಷ್ಟೇ ಚಿಕ್ಕದಾಗಿದ್ದರೂ ಅದರಿಂದ ಅವನಿಗೆ ಕೆಲವು ಅನುಕೂಲತೆಗಳು ಲಭಿಸುವುದು ಸಹಜ ಆ ಅನುಕೂಲತೆಗಳನ್ನು ದೇವಾಲಯ ನಿರ್ಮಾಣದಂತಹ ಕಾರ್ಯಗಳಿಗೆ ಬಳಸಿಕೊಂಡಿರುವುದು ಅವನ ಸ್ವಧರ್ಮ ನಿಷ್ಠೆಯನ್ನು ತೋರಿಸಿಕೊಡುತ್ತದೆ. ಕಂಗಾಳದೇವ ಎಂಬ ವ್ಯಕ್ತಿಯು 'ಪರದೇಸಿತನ'ದಲ್ಲಿ ಇದ್ದು, ತಿರಿದುತಂದು ಅದರಿಂದ ಹನುಮಂತ ದೇವರ ಗುಡಿಗೆ

ಕಡುಪಂಜರವನ್ನು ಮಾಡಿಸಿ ದಾನ ಮಾಡಿದ್ದಾನೆ.[199] ಕುಂಬಾರ ಒಮ್ಮಣನು 'ತಲೆಪೂಸದ ಅಂನ ಉಣ್ಣದ ವೀರವ್ರತ'ವನ್ನು ಕೈಗೊಂಡು ಕುಂಬೇಶ್ವರ ದೇವರನ್ನು ಮಾಡಿಸಿದ್ದಾನೆ.[200] 'ಪಡೆದರ್ಥಂ ಕಳ್ಳರಿಂ ದಾಯಿಗರಿನಳಿಪರಿಂ ಭೂಪರಿಂ ಕಿಚ್ಚಿನಿಂದಂ ಕಿಡುಗುಂತಾನನ್ತದೇ ಶಾಸ್ವತಮೆನಿ....ಶಾಸ್ವತಂ ಮಾರ್ಪೆನೆಂದಾಗಡೆ' ಕಾಳಿಯಕ್ಕನು ಅಧಿಕ ಭಕ್ತಿಯಿಂದ 'ಕಡುರಯ್ಯಂ ತಾನೆನಲು' ಜಿನಪತಿ ಸದ್ಗೇಹವನ್ನು ಮಾಡಿಸುತ್ತಾಳೆ.[201] ಈ ಮೇಲಿನ ಎಲ್ಲ ಉದಾಹರಣೆಗಳಿಂದ ಆ ಕಾಲದ ಜನತೆಯ ಧರ್ಮನಿಷ್ಠೆ, ಕಾರ್ಯತತ್ಪರತೆ ಮತ್ತು ಕಾರ್ಯಸಾಧನೆಯು ಧಾರ್ಮಿಕ ಚಟುವಟಿಕೆಗಳಿಗೆ ಪ್ರೇರಕವಾಗಿರುವ ಅಂಶವನ್ನು ತಿಳಿಸಿಕೊಡುತ್ತವೆ.

ಶಾಸನಗಳಿಂದ ಇಂಥ ಕೆಲವು ಉಲ್ಲೇಖಗಳು ದೊರೆತರೂ ಹೇಳಿಕೊಳ್ಳದೇ ತಮ್ಮ ಧರ್ಮಕ್ಕೆ ನಿಷ್ಠರಾಗಿ, ಧರ್ಮದ ಕಾರ್ಯಗಳಿಗೆ ದಾನ ನೀಡಿ ಪೋಷಿಸಿದವರು ಅನೇಕರು. ತಮ್ಮನ್ನು 'ಮನುಚರಿತ ನಿರತ'[202]ರೆಂದು, ತಮ್ಮ ಊರುಕೇರಿಗಳಲ್ಲಿ, ಮನ-ಮನೆಗಳಲ್ಲಿ ವೇದದ ನಾದ ಅನಾವರಣಗೊಳ್ಳುತ್ತಿತ್ತು ಎಂದು ಹೇಳಿಕೊಳ್ಳುವಲ್ಲಿ, 'ಭೀಮೇಶ್ವರ', 'ಮಹೇಶ್ವರ', 'ಶಂಕರಯ್ಯ', 'ನರಸಿಂಹ', 'ಸೋಮೇಶ್ವರ' ಮುಂತಾದ ಹೆಸರುಗಳನ್ನು ಇಟ್ಟುಕೊಳ್ಳುವುದರಲ್ಲೂ ಅಂದಿನ ಜನರಲ್ಲಿ ಬೇರೂರಿದ ಧಾರ್ಮಿಕ ನಿಷ್ಠೆ ವ್ಯಕ್ತವಾಗುತ್ತದೆ. ಪ್ರತಿಯೊಂದು ದಾನಶಾಸನಗಳ ಪ್ರಾರಂಭ ಮತ್ತು ಮುಕ್ತಾಯಗಳಲ್ಲಿ ಕಂಡುಬರುವ ಪ್ರಾರ್ಥನಾ ಶ್ಲೋಕಗಳು, ರಾಜರ ಬಿರುದಾವಳಿಗಳು ಸಹ ಧರ್ಮಪ್ರೇರಿತವಾಗಿವೆ. ಕಲ್ಯಾಣ ಚಾಲುಕ್ಯರು ಹಾರಿತ ಗೋತ್ರದವರೆಂದು, ಬ್ರಹ್ಮನ ಚುಳಕದಿಂದ ಹುಟ್ಟಿದವರೆಂದೂ ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ. ಇಲ್ಲೆಲ್ಲ ಪರಮತ ದ್ವೇಷಕ್ಕೆ ಎಡೆಕೊಡದೆ ಸ್ವಧರ್ಮ ನಿಷ್ಠೆ ಅನಾವರಣಗೊಂಡಿದೆ.

## ೧೦. ವಿಶೇಷ ಸಂದರ್ಭಗಳು

ದಾನಗಳಿಗೆ ಕಾರಣವಾದ ವಿಶೇಷ ಸಂದರ್ಭಗಳಿಗೂ ಸ್ಥಾನವಿದೆ. ಜಾತ್ರೆ, ಉತ್ಸವ, ಯಜ್ಞ, ಜಯ, ಮದುವೆ, ತೀರ್ಥಕ್ಷೇತ್ರಕ್ಕೆ ಭೇಟಿ ಕೊಡುವುದು, ಬೇರೆ ಬೇರೆ ನೆಲೆಬೀಡುಗಳಲ್ಲಿ ಉಳಿದುಕೊಳ್ಳುವುದು ಈ ಎಲ್ಲ ಸಂದರ್ಭಗಳಲ್ಲಿ ದಾನ ದತ್ತಿಗಳು ಕೊಡಲ್ಪಟ್ಟಿವೆ. ಇವುಗಳನ್ನು ದಾನಕ್ಕೆ ಪ್ರೇರಣೆಯಾದ ವಿಶೇಷ ಸಂದರ್ಭಗಳೆಂದು ಪರಿಗಣಿಸಲಾಗಿದೆ. ಸೂರ್ಯಗ್ರಹಣ, ಚಂದ್ರಗ್ರಹಣ, ಉತ್ತರಾಯನ, ದಕ್ಷಿಣಾಯನ, ಸಂಕ್ರಮಣ, ವ್ಯತಿಪಾತಗಳು ಸೇರಿದ ದಿನಗಳು ಶುಭದಿನಗಳೆಂದು ಭಾವಿಸಲ್ಪಟ್ಟಿದ್ದು, ದಾನಕಾರ್ಯಗಳಿಗೆ ಕಾರಣವಾಗಿವೆ. ಉಳಿದೆಲ್ಲ ಕಾರಣಗಳಿಗಿಂತ ಒಟ್ಟಾಗಿ ವಿಶೇಷ ಸಂದರ್ಭಗಳನ್ನು ಪರಿಗಣಿಸಿದರೆ ದಾನಗಳಿಗೆ ಇವೇ ಹೆಚ್ಚಿನ ಪ್ರೇರಕಗಳಾಗಿರುವುದು ಕಂಡುಬರುತ್ತದೆ. ದೀಪಾವಳಿ ನಿಮಿತ್ತ,[204] ದೇವಾಲಯಕ್ಕೆ ಸುಣ್ಣ ಬಳಿಯುವ ನಿಮಿತ್ತ,[205] ತೀರ್ಥಸ್ನಾನ ಮಾಡಿದ ನಿಮಿತ್ತ,[206] ತೀರ್ಥಕ್ಷೇತ್ರಕ್ಕೆ ಭೇಟಿ ನೀಡಿದ ನಿಮಿತ್ತ,[207] ಕಾಳಗದಲ್ಲಿ ವ್ಯಕ್ತಿ ಸತ್ತಾಗ,[208] ದೇವರ ಪ್ರತಿಷ್ಠೆ ನಿಮಿತ್ತ[209] ಹೀಗೆ ಅನೇಕ ನಿಮಿತ್ತಗಳ ಸಂದರ್ಭಗಳಲ್ಲಿ ದಾನಗಳನ್ನು ನೀಡಲಾಗಿದೆ.

ಕುಕನೂರು ಶಾಸನದಲ್ಲಿ 'ಸಂಕ್ರಮಣ ವ್ಯತಿಪಾತ ಅಮವಾಸ್ಯೆ ಪೋರ್ಣಿಮೆ ಉತ್ತರಾಯನ ದಕ್ಷಿಣಾಯನ ಸೋರ್ಯಗ್ರಹಣ ಸೂರ್ಯಗ್ರಹಣ'ದ ದಿನಗಳು ಪುಣ್ಯದಿನಗಳೆಂದು ಹೇಳಿದೆ.[210] ಇವುಗಳಲ್ಲಿ ಯಾವುದಾದರೊಂದು ದಿನ ಸಂಭವಿಸಿದಾಗ ದಾನ ನೀಡಿದರೆ ಅತ್ಯಂತ ಫಲಪ್ರದವಾದುದು ಎಂಬ ನಂಬಿಕೆ ಗಾಢವಾಗಿ ಬೇರೂರಿತ್ತು. ಇನ್ನು ಇವುಗಳಲ್ಲಿ ಹೆಚ್ಚಿನ ಘಟನೆಗಳು ಒಂದೇ ದಿನ ಸಂಭವಿಸಿದಾಗ ದಾನ ನೀಡುವುದು, ಧಾರ್ಮಿಕ ವಿಧಿಗಳನ್ನು ಪೂರೈಸುವುದರಿಂದ ದ್ವಿಗುಣ ಫಲ ದೊರೆಯುವುದೆಂದು ನಂಬಲಾಗಿತ್ತು. ಯಾವುದೇ ಒಂದು ಒಳ್ಳೆಯ ಕಾರ್ಯವನ್ನು ಪ್ರಾರಂಭಿಸಬೇಕಾದರೆ ತಿಥಿ, ವಾರ, ನಕ್ಷತ್ರ, ಸಂವತ್ಸರ ಗ್ರಹಣ, ಗುಳಿಕಾಲ, ಯಮಗಂಡಕಾಲ ಮುಂತಾದವುಗಳನ್ನು ನೋಡುವುದು, ಶುಭಗಳಿಗೆಯಲ್ಲಿ ಕಾರ್ಯ ಪ್ರಾರಂಭಿಸುವುದು ಅತೀಪುರಾತನ ಕಾಲದಿಂದ ಇಂದಿನವರೆಗೂ ನಡೆದುಕೊಂಡು ಬಂದ ಸಂಪ್ರದಾಯ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಪುಣ್ಯದಿನಗಳ ಕಾರಣಕ್ಕಾಗಿಯೇ ದೇವಾಲಯಗಳಿಗೆ, ಅರ್ಚಕರಿಗೆ, ಬ್ರಾಹ್ಮಣರಿಗೆ ದಾನಗಳನ್ನು ನೀಡಲಾಗಿದೆ. 'ಹುಣ್ಣಿಮೆ ಆದಿತ್ಯವಾರಮುಂ ಸಂಕ್ರಾಂತಿಯುಂ ವ್ಯತಿಪಾತಮುಂ ಕೂಡಿದ ಪುಣ್ಯದಿನ'ದಂದು ಕಲ್ಕೇರಿಯ ಸೋಮೇಶ್ವರ ದೇವರಿಗೆ ಸುಂಕದಾನ ನೀಡಲಾಗಿದೆ.[211] ವ್ಯತಿಪಾತ ಸೇರಿದ ದಿನ ದಾನ ಕಾರ್ಯಗಳಿಗೆ ಅತ್ಯಂತ ಪ್ರಸಿದ್ಧವಾದುದು. ಆ ದಿನ ಪ್ರತಿಸಾರಿ ಬಂದಾಗಲೂ ದಾನ ನೀಡಲಾಗಿದೆ. ಇದಕ್ಕೆ ಉತ್ತಮ ನಿದರ್ಶನವೆಂದರೆ ಕುಕನೂರಿನ ಶಾಸನ.[212] ಇದೊಂದೆ ಶಾಸನದಲ್ಲಿ ಕ್ರಿ.ಶ. ೧೧೦೭, ೧೧೨೭, ೧೧೩೨, ೧೧೫೭ರ ತೇದಿಯ ನಾಲ್ಕು ದಾನ ಶಾಸನಗಳು ಸೇರಿವೆ. ಈ ಶಾಸನಗಳಲ್ಲಿ ವ್ಯತಿಪಾತ ಸೇರಿದ ದಿನದಂದೇ ದಾನ ನೀಡಿದ ಉಲ್ಲೇಖವಿದೆ. ಅದೇ ರೀತಿ– ಸೂರ್ಯಗ್ರಹಣ ಚಂದ್ರಗ್ರಹಣ, ಸಂಕ್ರಮಣಗಳು ಸಂಭವಿಸಿದಾಗಲೂ ಪ್ರತಿಬಾರಿ ದಾನ ಮಾಡಲಾಗಿದೆ. ಅಮವಾಸೆ, ಹುಣ್ಣಿಮೆಗಳೂ ದಾನಕ್ಕೆ ಕಾರಣವಾಗಿವೆ.

ಜಾತ್ರೆ, ಉತ್ಸವಗಳನ್ನು, ದೇವರ ಕಾರ್ಯಗಳಿಗಾಗಿ ಜನರು ಒಂದೆಡೆ ಸೇರಿದಾಗ ದಾನಗಳನ್ನು ನೀಡಲಾಗಿದೆ. ಕುಡತಿನಿ ಶಾಸನದ ಪ್ರಕಾರ ಕುಮಾರಸ್ವಾಮಿ ದೇವರ ಜಾತ್ರೆ ನಿಮಿತ್ತ ದೇವಾಲಯಕ್ಕೆ ಸುಣ್ಣ ಬಳಿಯಲು ಆರೋಗಿ ಗೋಮನು ೨೦ ಮತ್ತರು ಭೂಮಿಯನ್ನು ದಾನ ನೀಡಿದ್ದಾನೆ.[213] ಚೈತ್ರಪವಿತ್ರಕ್ಕೆಂದು ದಾನ ನೀಡಿದುದನ್ನು ಅನೇಕ ಶಾಸನಗಳು ಉಲ್ಲೇಖಿಸುತ್ತವೆ.[214] ಚೈತ್ರ ಪವಿತ್ರಗಳು ವಿಶೇಷ ಪೂಜೆ ಪುನಸ್ಕಾರಗಳು ನಡೆಯುವ ದಿನಗಳಾಗಿದ್ದವು. ಗುರುಪರ್ವ[215] ನೂಲಪರ್ವ[216], ದೀಪಾವಳಿ ಪರ್ವ,[217] ಶಿವರಾತ್ರಿ ಪರ್ವ[218] ಗಳಂದು ದಾನ ನೀಡಲಾಗಿದೆ. ಸುಳಿದೇವನಹಳ್ಳಿಯ ಒಂದು ಶಾಸನವು ಪ್ರತಿಮಂಗಳವಾರ ಚಾಮುಂಡೇಶ್ವರಿಗೆ ಊರಿನವರು ಒಂದು ಆಡನ್ನು ದಾನ ನೀಡಿರುವುದನ್ನು ಉಲ್ಲೇಖಿಸುತ್ತದೆ.[219]

ಜೈನಬಸದಿಗಳಲ್ಲಿ ಅನೇಕ ರೀತಿಯ ಉತ್ಸವ ಮಹೋತ್ಸವಗಳು ನಡೆಯುತ್ತಿದ್ದು, "ವರ್ಷಂಪ್ರತಿ ಅಕ್ಷಯ ತದಿಗೆಯಲ್ಲಿ ನಡೆಯುವ ಮಹೋತ್ಸವ ಪ್ರಭಾವನೆ ಮೂರು ಅಷ್ಟಾಹ್ನಿಕ ಪರ್ವ್ವಗಳಿಗೆ । ಶ್ರಾವಣ ಪೌರ್ನ್ನಮಿ ವುತ್ಸವಕ್ಕೆ ಬಾದ್ರಪದ ಶುಧ್ಧ ಚತುರ್ದ್ಧಶಿ ಅನಂತನ

ನೋಪಿ ಕಲಶ ಪ್ರಭಾವನೆ । ಮಹಾಆರಾಧನೆ ಮುಂತಾದಕ್ಕೆ ಕಾರ್ತಿಕ ಮಾಸದಲ್ಲಿ ಕೃತಿಕೋತ್ಸವಕ್ಕೆ। ಮಾಘ ಚತುದ್ಧಶಿಯಲು ಜಿನರಾತ್ರಿ ಮಹೋತ್ಸವಕ್ಕೆ" ಎಂದು ಭೂದಾನ ಬಿಟ್ಟ ವಿವರವನ್ನು ಹೊಳಲಕೆರೆಯ ಒಂದು ಶಾಸನ ತಿಳಿಸುತ್ತದೆ.[220] ಹೀಗೆ ಶುಭದಿನಗಳು, ಜಾತ್ರೆ, ಉತ್ಸವಗಳು ದಾನಕ್ಕೆ ಪ್ರೇರಣೆಯಾಗಿರುವುದನ್ನು ತಿಳಿಯಬಹುದು.

ಅನೇಕ ಶಾಸನಗಳ ಪ್ರಕಾರ ಚಕ್ರವರ್ತಿಗಳು, ಅವರ ರಾಣಿಯರು, ಮಹಾಮಂಡಳೇಶ್ವರರು, ಸಾಮಂತರು, ಬೇರೆ ಬೇರೆ ಸ್ಥಳಗಳಿಗೆ ಭೇಟಿ ನೀಡಿದಾಗ, ರಾಜಧಾನಿ, ಉಪರಾಜಧಾನಿಗಳಲ್ಲಿ ತಂಗಿದ್ದಾಗ ದಾನ ಬಿಟ್ಟಿದ್ದಾರೆ. ಪ್ರೀತಿ ಗೌರವಾದರಗಳಿಗೆ ಪಾತ್ರರಾದವರು ಮಡಿದಾಗ, ಹಾಗೆಯೇ ಪ್ರೀತಿಗೆ ಪಾತ್ರರಾದವರ ವಿವಾಹಕ್ಕೆ ಯಾರಾದರೂ ಅಧಿಕಾರ ವಹಿಸಿಕೊಂಡಾಗ, ಮನ್ನೆಯ ವೃತ್ತಿ ಲಭಿಸಿದಾಗಲೂ ಹೀಗೆ ಅನನ್ಯ ಸಂದರ್ಭಗಳಲ್ಲಿ ದಾನಗಳನ್ನು ಕೊಡಲಾಗಿದೆ. ಇಂತಹ ಸಂದರ್ಭದಲ್ಲಿ ಬೇರೆಯವರ ಬಿನ್ನಹದ ಮೇರೆಗೆ ಇಲ್ಲವೆ ಸ್ವಯಂ ಪ್ರೇರಿತರಾಗಿ ದಾನ ನೀಡಿದ್ದಾರೆ. ಬಾಗಡಗೆ ನಾಡನ್ನಾಳುತ್ತಿದ್ದ ಸಿಂಧವಂಶದ ನಾಗಾದಿತ್ಯನು ಇಮ್ಮಡಿ ತೈಲಪವ ಸಾಮಂತನಾಗಿದ್ದು, ಈತನು ಪತ್ತಿಯ ಮತ್ತೂರಿನ ದಂಡಿನಲ್ಲಿದ್ದಾಗ ಸಿಂಧೇಶ್ವರ ದೇವರಿಗೆ ಸಿಂಪರಾಸಿ ಭಟ್ಟಾರರ ಕಾಲನ್ನು ತೊಳೆದು ಸಾವಿರ ಮತ್ತರು ಭೂಮಿಯನ್ನು ದಾನ ನೀಡಿದ್ದಾನೆ.[211] ಸೇನಾಪತಿಯೊಬ್ಬನು ಕರೀಂನಗರದಲ್ಲಿ ಈ ಹಿಂದೆ ಮಲ್ಲಿಕಾರ್ಜುನ ದೇವಾಲಯವನ್ನು ಮಾಡಿಸಿದ್ದು ಪುನಃ ಅಲ್ಲಿಗೆ ಕ್ರಿ.ಶ. ೯೯೨ರಲ್ಲಿ ಭೇಟಿ ನೀಡಿದಾಗ ಆ ದೇವಾಲಯಕ್ಕೆ ಗದ್ದೆ ಮತ್ತು ಹೂದೋಟವನ್ನು ದಾನ ಬಿಡುತ್ತಾನೆ.[222] ಚಕ್ರವರ್ತಿ ಇಮ್ಮಡಿ ತೈಲಪನು ಉತ್ತರದ ದಿಗ್ವಿಜಯದಲ್ಲಿ ಪರಮಾರ ದೊರೆ ಉಪ್ಪಳನನ್ನು ಸೋಲಿಸಿದ್ದರಿಂದ ಆ ಸಂದರ್ಭದಲ್ಲಿ ದಮ್ಮಿಕುಂಟೆಯ ಪ್ರಧಾನನಾಗಿದ್ದ, ನಾಗಯಗಾವುಂಡನು ತಾನು ಕಟ್ಟಿಸಿದ ದೇವಾಲಯಕ್ಕೆ ಭೂಮಿದಾನ ಮಾಡುತ್ತಾನೆ.[223] ಕರಡಿಕಲ್ಲಿನ ಜೋಗಶಿವಾಚಾರ್ಯ ಎಂಬುವವನು ನವಿಲೆಯಲ್ಲಿ ರಾಜಗುರು ಭಟ್ಟಾರಕರು ಐಕ್ಯರಾದುದಕ್ಕೆ ಅವರ ಪಾದುಕೆಗಳನ್ನು ಪೂಜಿಸುವುದಕ್ಕಾಗಿಯೇ ೧೦ ಮತ್ತರು ಭೂಮಿಯನ್ನು ಮತ್ತು ಹೊನ್ನ ಗದ್ಯಾಣವನ್ನು ದಾನ ನೀಡಿದ್ದಾನೆ.[224]

ಚಕ್ರವರ್ತಿ ಇಮ್ಮಡಿ ಜಯಸಿಂಹನ ರಾಣಿ ಮಹಾದೇವಿಯು ಪುವ್ವರವಳ್ಳಿಯ ಬೀಡಿನಲ್ಲಿದ್ದಾಗ ತಂತ್ರಪಾಳ ಮಲ್ಲಯ್ಯನು ಬಲ್ಲಟಗಿಯಲ್ಲಿ ಸ್ಥಾಪಿಸಿದ್ದ ತ್ರೈಪುರುಷ ದೇವಾಲಯಕ್ಕೆ ಭೂಮಿದಾನ ನೀಡಿದ್ದಾಳೆ.[225] ಅದೇ ರೀತಿ ಪೊಟ್ಟಲಕೆರೆಯ ನೆಲೆವೀಡಿನಲ್ಲಿದ್ದಾಗ ಅಲ್ಲಿನ ದೇವಾಲಯವೊಂದಕ್ಕೆ ರಂಗಭೋಗಕ್ಕೆಂದು ಭೂಮಿದಾನ ನೀಡಲಾಗಿದೆ.[226] ತ್ರೈಲೋಕ್ಯಮಲ್ಲ ದೇವನು ಹೂವಿನ ಪಡಂಗಿಲೆಯ ನೆಲೆವೀಡಿನಲ್ಲಿದ್ದಾಗ ಅವನ ಅನುಮತಿಯ ಮೇರೆಗೆ ದಂಡನಾಯಕ ತಿಕಣ್ಣನು ನೊಳೆಂಬೇಶ್ವರ ಮತ್ತು ಲೆಂಕೇಶ್ವರ ದೇವಾಲಯಗಳಿಗೆ ಶಿವಪುರ ಗ್ರಾಮವನ್ನು ದತ್ತಿ ಬಿಟ್ಟಿದ್ದಾನೆ.[227] ಮಹಾಮಂಡಳೇಶ್ವರ ಹೊಯ್ಸಳಬಲ್ಲಾಳನು ಸೊಸೆಯೂರನ್ನು ಗೆದ್ದು ರಾಜಧಾನಿ ದೋರಸಮುದ್ರಕ್ಕೆ ಹಿಂದಿರುಗುವಾಗ, ಮಾರ್ಗಮಧ್ಯದಲ್ಲಿ ದರ್ಬೆ ಅಗ್ರಹಾರದ

ಶಿವಸ್ಥಾನವನ್ನು ಕಂಡು ಕೋಟೇಶ್ವರ ದೇವಕಾರ್ಯಕ್ಕೆಂದು ಕೆಲವು ಸುಂಕಗಳನ್ನು ದಾನ ಮಾಡುತ್ತಾನೆ.[228] ಮಹಾಸಾಮಂತ ಬಂಕಯ್ಯನು ಶಾನೆಗೆರೆಗೆ ಭೇಟಿ ನೀಡಿದಾಗ ಅಲ್ಲಿನ ಈಶ್ವರದೇವರ (ಬಂಕೇಶ್ವರ?) ಅಂಗಭೋಗ, ನಿವೇದ್ಯ, ನಂದಾದೀವಿಗೆ, ಚೈತ್ರ ಪವಿತ್ರ, ಖಂಡ ಸ್ಫುಟಿತ ಜೀರ್ಣೋದ್ಧಾರ, ಪಂಡಿತರ ಆಹಾರದಾನಕ್ಕೆಂದು ಗದ್ದೆ, ಎಲೆತೋಟ, ಗಾಣಗಳನ್ನು ದಾನ ನೀಡುತ್ತಾನೆ.[229] ತ್ರಿಭುವನ ಮಲ್ಲದೇವನ ರಾಣಿ ಪಟ್ಟಮಹಾದೇವಿಯು ಆಸಂದಿ ೫೦೦ನ್ನು ಸುಖಸಂಕಥಾ ವಿನೋದದಿಂದ ಆಳುತ್ತಿದ್ದಾಗ ಅವಳ ಮಹಾಸಾಮಂತ ಎರಕಗಾವುಂಡನು ಹಾರುವನಹಳ್ಳಿಯಲ್ಲಿ ಎರಕೇಶ್ವರ ದೇವರ ಸೇವೆಗೆ, ಮಠದ ತಪೋಧನರ ಆಹಾರಕ್ಕೆ, ಅತಿಥಿ ಅಭ್ಯಾಗತ ವಿದ್ಯಾರ್ಥಿಗಳಿಗೆಂದು ಭೂಮಿ, ನಂದವನ, ೪ ಗಾಣ, ೨ ಗದ್ಯಾಣ, ೪ ಮನೆಗಳನ್ನು ದಾನ ನೀಡುತ್ತಾನೆ.[230] ಹೀಗೆ ನೂರಾರು ಸಂಖ್ಯೆಯ ಶಾಸನಗಳು ನೆಲೆವೀಡಿನಲ್ಲಿದ್ದಾಗ, ಭೇಟಿ ನೀಡಿದಾಗ ದಾನಕೊಟ್ಟ ವಿಷಯವನ್ನು ತಿಳಿಸುತ್ತವೆ.

ಯಜ್ಞಗಳನ್ನು ಮಾಡಿದಾಗಲೂ ದಾನ ನೀಡಲಾಗಿದೆ. ದಾನ ಯಜ್ಞದ ಒಂದು ಅವಿಭಾಜ್ಯ ಕಾರ್ಯವಾಗಿತ್ತು. ಇಮ್ಮಡಿ ತೈಲಪನು ಅಧಿಕಾರಕ್ಕೆ ಬಂದ ಒಂದನೇ ವರ್ಷದ ಅವಧಿಯಲ್ಲಿಯೇ ಬ್ರಹ್ಮಾಂಡಕೃತ ಯಜ್ಞವನ್ನು ಮಾಡುತ್ತಾನೆ. ಈ ಸಂದರ್ಭದಲ್ಲಿ ಯಜ್ಞವನ್ನು ಯಥೋಕ್ತಿಯಿಂದ ಪರಿಪೂರ್ಣ ಮಾಡಿದ ಬ್ರಾಹ್ಮಣರಿಗೆ ಮೊಂದೆಯ ನೂರು (ಮೊದೆಯನೂರು) ಗ್ರಾಮವನ್ನು ಸರ್ವನಮಸ್ಯವಾಗಿ ದಾನ ನೀಡುತ್ತಾನೆ.[231] ಹಾಗೆ ಕ್ರಿ.ಶ. ೧೧೯೭ರ ಕವಲೂರು ಶಾಸನವು ಸೋಮಯಾಗ, ವಾಜಪೇಯ ಯಾಗಗಳನ್ನು ಮಾಡಿ ದಾನ ನೀಡಿದ ವಿವರ ನೀಡುತ್ತದೆ.[232] ಯುದ್ಧ ಮತ್ತು ಕಾಳಗದಲ್ಲಿ ಹೋರಾಡಿ ವೀರನೊಬ್ಬನು ಮರಣ ಹೊಂದಿದಾಗ ದಾನ ನೀಡಲಾಗಿದೆ. ಇದೂ ಸಹ ವಿಶೇಷ ಸಂದರ್ಭವೆನಿಸುತ್ತದೆ. ಅನಿರೀಕ್ಷಿತವಾಗಿ ಘಟಿಸಿದ ಸಾವು ನೋವುಗಳಿಗೆ ಜನರು ಅಂತಃಕರಣ ಪೂರ್ವಕವಾಗಿ ದಾನ ನೀಡುವುದರ ಮೂಲಕವಾಗಿ ಮರಣಿಸಿದ ವೀರನ ಕುಟುಂಬಕ್ಕೆ ಆಸರೆ ಒದಗಿಸಿದ್ದಾರೆ. ಇಂಥ ಅನೇಕ ಸಂದರ್ಭಗಳು ದಾನಕ್ಕೆ ಪ್ರೇರಣೆಯಾಗಿವೆ. ಬೆಣಕಲ್ಲು ಸೀಮೆಯ ಕಾಳಗದಲ್ಲಿ ತಳಾರನಾಯಕ ಎರೆಯಮ್ಮನೆಂಬುವವನು ಮರಣ ಹೊಂದಿದಾಗ ಅವನ ಕುಟುಂಬಕ್ಕೆ ಹಲಗೇರಿ ಗ್ರಾಮದ ಊರೊಡೆಯ ಮತ್ತು ಅಲ್ಲಿನ ಮಹಾಜನರು ಭೂದಾನ ನೀಡಿದ್ದಾರೆ.[233] ತುರುಗಾಳಗದಲ್ಲಿ ಸತ್ತ ಬಲನಾಯಕನಿಗೆ ಐಯ್ಯಾಹೊಳೆ ಐನೂರ್ವ್ವರು ೧೨ ಮತ್ತರು ಭೂಮಿಯನ್ನು ದಾನವಾಗಿ ಕೊಟ್ಟಿದ್ದಾರೆ.[234] ಕೆಂಕೆರೆಯ ಮಹಾಜನರ ಗೋವುಗಳನ್ನು ಅಪಹರಿಸುತ್ತಿದ್ದ ಕಳ್ಳರೊಂದಿಗೆ ಹೋರಾಡಿ ಮಡಿದ ಜಕಗೌಡನ ತಮ್ಮ ಮರಿಯ ಎಂಬುವವನಿಗೆ 'ಕೊಡೆ ಕುದುರೆ ತಂಬಟ ಸಹಿತ ವೀರಕೊಡಗಿ ಕಂಭ ३೦ನ್ನು' ನೀಡುತ್ತಾರೆ.[235]

ಇದಲ್ಲದೆ ಇನ್ನೂ ಹಲವಾರು ಕಾರಣಗಳಿಗಾಗಿ ದಾನ ನೀಡಿರುವುದೂ ಉಂಟು. ಕೆಲವರು 'ನಿಜೋನ್ನತಿಯ ಕೀರ್ತಿಯಾಸೆ'ಗೆ[236] ದಾನಕೊಟ್ಟರೆ; ಇನ್ನು ಕೆಲವರು 'ಧರ್ಮದ ಪರೋಪಕಾರ ಹೆಮ್ಮೆ'ಗಾಗಿ[237] ದಾನ ನೀಡಿದ್ದಾರೆ. 'ನಿಜಾನ್ವಯ ಸಮೃದ್ಧಿ ಕಾರಣ'ವೆಂದು[238]

ಹೇಳಿ ದಾನ ನೀಡಿದವರು ಕೆಲವರಿದ್ದರೆ; 'ಕ್ಷತ್ರಿಯರಿಗೆ ಭೂಮಿದಾನ ಭೂಮಿಪಾಲನೆಗೆ ಮಿಗುವ ಧರ್ಮ'[239] ಮತ್ತೊಂದಿಲ್ಲ ಎಂದು ಭಾವಿಸಿ ದಾನ ಗೈದ ಕ್ಷತ್ರಿಯರು ಹಲವರಿದ್ದಾರೆ. ಹೀಗೆ ಅನೇಕ ವಿಶೇಷ ಸಂದರ್ಭಗಳು ದಾನಕ್ಕೆ ಪ್ರೇರಣೆಯಾಗಿವೆ.

ಇದುವರೆಗೆ ನಾವು ದಾನಕ್ಕೆ ಪ್ರೇರಕವಾದ ಅಂಶಗಳನ್ನು ಚರ್ಚಿಸಿದ್ದೇವೆ. ಮುಂದಿನ ಭಾಗದಲ್ಲಿ ದಾನಗಳನ್ನು ಯಾವ ಉದ್ದೇಶಗಳಿಗಾಗಿ ನೀಡಲಾಗಿದೆ ಮತ್ತು ಅತಿ ಹೆಚ್ಚಿನ ಪ್ರಮಾಣದಲ್ಲಿ ನೀಡಲಾಗಿರುವ ಪ್ರಮುಖ ದಾನಗಳ ಕುರಿತು ವಿವರಿಸಲಾಗಿದೆ.

## ೪.೪ ದಾನದ ಉದ್ದೇಶಗಳು

'ದಾನ' ಎಂಬುದು 'ಕೊಡುಗೆ' ಅಥವಾ 'ಕಾಣಿಕೆ' ಎಂದು ಪರಿಗಣಿಸಲ್ಪಟ್ಟಿದೆಯಾದರೂ ಕೊಡುಗೆ ಅಥವಾ ಕಾಣಿಕೆಯನ್ನು ಕೊಡುವಾಗ ಇಂಥದ್ದಕ್ಕೇ ವಿನಿಯೋಗವಾಗಲಿ ಎಂದು ಹೇಳಿಕೊಂಡಿರುವುದು ರೂಢಿಯಲ್ಲಿಲ್ಲ. ಇಂದಿಗೂ ಸಹ ಅನೇಕರು ಕೊಡುಗೆಯಾಗಿ ಅಥವಾ ಕಾಣಿಕೆಯಾಗಿ ಅನೇಕ ವಸ್ತುಗಳನ್ನು ಕೊಡುವುದನ್ನು ನಾವು ನೋಡುತ್ತೇವೆ. ಮನೆಗೆ ಬಂದ ಅತಿಥಿಗೋ, ಮದುವೆ ಸಂಭ್ರಮದಲ್ಲಿರುವ ವ್ಯಕ್ತಿಗೋ, ರಾಜ್ಯ, ರಾಷ್ಟ್ರಕ್ಕೆ ಸ್ನೇಹ ಪೂರ್ವಕವಾಗಿ ಭೇಟಿಕೊಟ್ಟ ಅತಿಥಿಗೂ ಕಾಣಿಕೆಗಳನ್ನು ಸಲ್ಲಿಸುತ್ತೇವೆ. ಇಲ್ಲಿ ಎಲ್ಲೂ ನಿಬಂಧನೆಯಾಗಲಿ ಅಥವಾ ಇಂಥದ್ದೇ ಕಾರ್ಯಕ್ಕೆ ಅದನ್ನು ಉಪಯೋಗಿಸಬೇಕೆಂಬ ಸಲಹೆಯಾಗಲಿ ಇರುವುದಿಲ್ಲ. ಕಾಣಿಕೆ, ಉಡುಗೊರೆ, ಕೊಡುಗೆ ಎಂಬ ಪದಗಳು ಪ್ರೀತಿ, ಗೌರವಾರ್ಥವಾಗಿ ನೀಡಿದ್ದನ್ನು ಸೂಚಿಸುವುದಕ್ಕಾಗಿ ಇಂದು ಬಳಕೆಯಾಗುತ್ತಿವೆ. ಪ್ರಾಚೀನ ಕಾಲದಿಂದಲೂ ಅಧೀನ ಅರಸರು ಚಕ್ರವರ್ತಿಗಳಿಗೆ ಪ್ರತಿವರ್ಷ ಕಪ್ಪ ಕಾಣಿಕೆಗಳನ್ನು ನೀಡುತ್ತಿದ್ದರು. ಚಕ್ರವರ್ತಿಯ ಪಟ್ಟಬಂಧೋತ್ಸವ, ದಿಗ್ವಿಜಯ, ಯಾಗ, ವಿವಾಹಕಾರ್ಯಗಳಂತಹ ವಿಶೇಷ ಸಂದರ್ಭಗಳಲ್ಲಿ ಅವರಿಗೆ ಬೆಲೆಬಾಳುವ ಉಡುಗೊರೆಗಳನ್ನು ಕೊಡುತ್ತಿದ್ದರು. ಈ ಉಡುಗೊರೆಗಳನ್ನು 'ದಾನ'ವೆಂದು ಇದುವರೆಗೂ ಪರಿಗಣಿಸಿಲ್ಲ. ಕಾರಣವೆಂದರೆ ಅರಸ, ಚಕ್ರವರ್ತಿಗಳಿಗೆ ನೀಡುವ ಇಂಥ ಉಡುಗೊರೆ, ಕಾಣಿಕೆಗಳಿಗೆ ಭಯ, ಗೌರವ, ರಕ್ಷಣೆ, ರಾಜಕೀಯ ಹಿತಾಸಕ್ತಿಗಳನ್ನು ಹೊರತುಪಡಿಸಿ ಅನ್ಯ ಉದ್ದೇಶಗಳು ಇರಲಿಲ್ಲ. ಇಲ್ಲಿ ರಾಜಕೀಯ ಪ್ರೇರಿತ ಸ್ಪಷ್ಟ ಪ್ರತಿಫಲಾಪೇಕ್ಷೆ ಇದೆ. ಉಡುಗೊರೆ ಕಾಣಿಕೆಗಳನ್ನು ಚಕ್ರವರ್ತಿ ಇಲ್ಲವೆ ಅರಸರಿಗೆ ಅಧೀನ ಅಧಿಕಾರಿಗಳು, ಮಂಡಳೇಶ್ವರರು ನೀಡಿದಾಗ ಸಹಜವಾಗಿ ಅವರು ಚಕ್ರವರ್ತಿಗೆ ನಿಷ್ಠೆಯನ್ನು ತೋರಿಸಿದಂತಾಗುತ್ತಿತ್ತು. ಅವರನ್ನು ಅತಿಕ್ರಮಿಸದೆ ಕಾಪಾಡುವ ಹೊಣೆ ಚಕ್ರವರ್ತಿಗೆ ಸಲ್ಲುತ್ತಿತ್ತು. ಅರಸನಿಗೆ ಕೊಡುವ ಇಂಥ ಉಡುಗೊರೆಗಳಲ್ಲಿ ಕೊಡುವವನ ಔದಾರ್ಯತೆಗೆ ಸ್ಥಾನವಿರಲಿಲ್ಲ ಬದಲಾಗಿ ವಿಧೇಯತೆಗೆ ಪ್ರಾಶಸ್ತ್ಯವಿತ್ತು.

ಭಗವದ್ಗೀತೆಯು 'ಯಾವುದೇ ಕಾರ್ಯವನ್ನಾದರೂ ಫಲಾಪೇಕ್ಷೆಯಿಲ್ಲದೆ ಮಾಡಬೇಕು' ಎಂದು ಹೇಳುತ್ತದೆ. ಪ್ರಾಚೀನ ಭಾರತೀಯ ಪರಂಪರೆಯೂ ಸಹ ಇದನ್ನೇ ಒತ್ತಿ ಹೇಳುತ್ತದೆ.

ಆದರೆ ಒಂದು ಕೌತುಕದ ವಿಚಾರವೆಂದರೆ ಎಷ್ಟೇ ವಿಧದಲ್ಲಿ ಈ ವಿಚಾರವನ್ನು ಹೇಳಲಾಗಿದ್ದರೂ ಇದುವರೆಗೂ ಮಾನವ ಮಾಡಿದ ಒಂದೇ ಒಂದು ಕಾರ್ಯವೂ ಫಲಾಪೇಕ್ಷೆಯಿಂದ ಮುಕ್ತವಾಗಿಲ್ಲವೆನಿಸುತ್ತದೆ. ತನ್ನ ಸ್ವಂತ ಅಭಿವೃದ್ಧಿ, ಪರರಏಳಿಗೆ, ಅಧಿಕಾರ ಪ್ರಾಪ್ತಿಯ ಹಂಬಲ, ಚಿರಸ್ಥಾಯಿಯಾಗಿ ಉಳಿಯಬೇಕೆಂಬ ಬಯಕೆ, ಜನರನ್ನು ತಿದ್ದುವ ಇಚ್ಛೆ, ಜೀವನ ಸಾರ್ಥಕಗೊಳಿಸುವ ಭಾವನೆ, ಹೀಗೆ ಯಾವುದೋ ಒಂದು ಗುರಿ–ಉದ್ದೇಶಕ್ಕಾಗಿಯೇ ಎಲ್ಲ ಕಾರ್ಯಗಳು ಘಟಿಸಿವೆ. ಬುದ್ಧ, ಮಹಾವೀರ, ಯೇಸು, ಮಹಮ್ಮದ್ ಪೈಗಂಬರ, ಶಂಕರಾಚಾರ್ಯ, ರಾಮಾನುಜಾಚಾರ್ಯ, ಮಧ್ವಾಚಾರ್ಯ, ಬಸವಣ್ಣ, ಕಬೀರ, ಗುರುನಾನಕ ಮುಂತಾದವರೂ ವಿಶ್ವಮಾನವರೆನಿಸಿದರೂ ಇವರಲ್ಲಿ ತಮ್ಮದೆಯಾದ ಒಂದೊಂದು ಗುರಿಯಿತ್ತು; ಅದು ಮಾನವ ಕಲ್ಯಾಣ. ಉದ್ದೇಶ ರಹಿತವಾದ ಯಾವೊಂದು ಕಾರ್ಯವೂ ಪರಿಪೂರ್ಣ–ವಾಗಲಾರದು ಎಂಬುದನ್ನು ಇಲ್ಲಿ ಗಮನಿಸಬೇಕು. 'ಗುರಿ ರಹಿತವಾದ ಜೀವನ ಚುಕ್ಕಾಣಿಯಿಲ್ಲದ ಹಡಗಿನಂತೆ' ಎಂಬ ಪ್ರಸಿದ್ಧವಾಗಿದೆ.

ದಾನವು ಫಲಾಪೇಕ್ಷೆ ರಹಿತವಾಗಿ ಮತ್ತು ನಿಸ್ವಾರ್ಥ ಮನಸ್ಸಿನಿಂದ ಕೊಡುವುದನ್ನು ಅಪೇಕ್ಷಿಸುತ್ತದೆ. ಆದರೆ ಯಾವುದೇ ದಾನಗಳು ಉದ್ದೇಶರಹಿತವಾಗಿ ನೀಡಲ್ಪಟ್ಟಿಲ್ಲ. ಅಂತೆಯೇ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಹಲವಾರು ದಾನಗಳನ್ನು ನೀಡಿದ್ದರೂ ಪ್ರತಿಯೊಂದಕ್ಕೂ ಒಂದಿಲ್ಲೊಂದು ಕಾರಣವಿದೆ. ಪ್ರತಿಯೊಂದು ಕಾರಣದ ಹಿಂದೆಯೂ ಒಂದೊಂದು ಉದ್ದೇಶವಿದೆ. ದೇವರ ಸೇವೆ, ಅಂಗಭೋಗ, ರಂಗಭೋಗ, ದೇವಾಲಯ ನಿರ್ಮಾಣ, ಜೀರ್ಣೋದ್ಧಾರ, ವಿದ್ಯಾಭ್ಯಾಸ, ಸಾಮಾಜಿಕ ಕಾರ್ಯ, ಬ್ರಾಹ್ಮಣರಿಗೆ, ಶ್ರಮಿಕವರ್ಗಕ್ಕೆ, ಆಹಾರಕ್ಕೆ ವಸತಿಗೆ ಹೀಗೆ ಅನೇಕ ಉದ್ದೇಶಗಳಿಗಾಗಿ ದಾನ ಬಿಡಲಾಗಿದೆ.ಇವೆಲ್ಲವುಗಳ ಅಂತಿಮ ಉದ್ದೇಶ ಪುಣ್ಯ ಸಂಪಾದನೆ ಅಥವಾ ಮೋಕ್ಷಾಪೇಕ್ಷೆಯೇ ಆಗಿದೆ. ಈ ಹಿನ್ನೆಲೆಯಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ದಾನಗಳ ಪ್ರಮುಖ ಉದ್ದೇಶಗಳನ್ನು ಇಲ್ಲಿ ಚರ್ಚಿಸಲಾಗಿದೆ.

'ದಾನದ ಉದ್ದೇಶಗಳು' ಎಂಬ ಶೀರ್ಷಿಕೆಯು ಯಾರಿಗೆ ಮತ್ತು ಯಾವುದಕ್ಕೆ ದಾನ ನೀಡಿದರು ಎಂಬುದಕ್ಕೆ ಸಂಬಂಧಿಸಿದೆ. ದಾನವನ್ನು ನೀಡುವವರು ಮತ್ತು ಪಡೆಯುವವರು ಇರ್ವರಿಗೂ ಅರ್ಹತೆಗಳಿರಬೇಕು. ದಾನಿಯು ಅಯೋಗ್ಯನಾಗಿದ್ದು, ನ್ಯಾಯಯುತ ಹಾದಿಯಲ್ಲಿ ಸಂಪಾದಿಸದೇ ಇದ್ದು ಅವನ ಧನವನ್ನು ದಾನವಾಗಿ ಸ್ವೀಕರಿಸುವಂತಿಲ್ಲ. 'ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಪರೋಪಕಾರಕ್ಕಲ್ಲ' ಎಂಬ ಮಾತನ್ನು ಇಲ್ಲಿ ನೆನೆಯಬಹುದು. ಹಾಗೆಯೇ ದಾನವನ್ನು ಯಾರಿಗೆ ಮತ್ತು ಯಾವುದಕ್ಕೆ ನೀಡಬೇಕೆಂಬುದರ ಕುರಿತೂ ಅನೇಕ ಪ್ರಾಜ್ಞರು ಸೂಚಿಸಿದ್ದಾರೆ. ಕಲ್ಯಾಣ ಚಾಲುಕ್ಯರ ಸಮಕಾಲೀನ ಕವಿಯಾಗಿದ್ದ ಸೋಮದೇವಸೂರಿ 'ನೀತಿವಾಕ್ಯಾಮೃತ'ದಲ್ಲಿ ಅಪಾತ್ರರಿಗಾಗಿ ಧನವ್ಯಯ ಮಾಡುವುದು ಬೂದಿಯಲ್ಲಿ ಹೋಮಮಾಡಿದಂತೆ' ಎಂದಿದ್ದಾನೆ.[239] 'ರತ್ನಕರಂಡಕ ಶ್ರಾವಕಾಚಾರದಲ್ಲಿ 'ಒಳ್ಳೆಯ ಗುಣಗಳಿಂದ ಕೂಡಿದವರು, ಮನೆಯಿಲ್ಲದವರು ತಪೋಧನರು ದಾನಪಡೆಯಲು ಯೋಗ್ಯರು' ಎಂದು

ಹೇಳಲಾಗಿದೆ.[239.2] 'ಧರ್ಮಾಮೃತ' ಕೃತಿಯ ಕರ್ತೃ ನಯಸೇನನು ಹೇಳುವಂತೆ 'ಒಂದೇ ಬಾವಿಯ ನೀರನ್ನು ಹಾವಿಗೂ ಹಸುವಿಗೂ ಎರೆದಾಗ ಹಾವು ವಿಷವನ್ನೇ ಉಗುಳುತ್ತದೆ. ಪಾತ್ರಾಪಾತ್ರ ದಾನದ ಫಲವೂ ಹಾಗೆಯೇ. ಸೌಳು ಭೂಮಿಯನ್ನು ಉತ್ತಿಬಿತ್ತಿ ನೀರೆರೆದು, ಕಸ ಕಳೆದು ಬೇಲಿಯನಿಕ್ಕಿ ಎಷ್ಟು ಪ್ರಯತ್ನಿಸಿದರೂ ಕಪ್ಪು ಭೂಮಿಯಂತೆ ಅದು ಬೆಳೆಕೊಡಲಾರದು. ಹಾಗೆಯೇ ಅಪಾತ್ರನಿಗೆಷ್ಟು ದಾನ ಮಾಡಿದರೂ ಸುಪಾತ್ರದಾನದ ಫಲ ಉಂಟಾಗದು'.[239.3] ಆದ್ದರಿಂದ ದಾನವನ್ನು ಕೊಡುವಾಗ ಅದು ಒಳ್ಳೆಯವರಿಗೆ ಹಾಗೂ ಒಳ್ಳೆಯ ಕೆಲಸಕ್ಕೆ ಸಲ್ಲುವಂತೆ ನೋಡಿಕೊಳ್ಳ-ಬೇಕಾಗುತ್ತಿತ್ತು. ಈ ಹಿನ್ನೆಲೆಯಲ್ಲಿ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ದಾನದತ್ತಿಗಳನ್ನು ಯಾರಿಗೆ ಮತ್ತು ಯಾವ ಕಾರ್ಯಕ್ಕೆಂದು ನೀಡಲಾಗಿದೆ ಎಂಬುದನ್ನೂ ವಿಶ್ಲೇಷಿಸಲಾಗಿದೆ.

### ೪.೪.೧ ದೇವರ ಸೇವೆ – ಅಂಗಭೋಗ ಮತ್ತು ರಂಗಭೋಗ :

ಭಾರತೀಯರು ಭಗವಂತನನ್ನು ಜೀವಂತ ವ್ಯಕ್ತಿ ಎಂಬಂತೆ ಭಾವಿಸುತ್ತಾರೆ. ವೈಭವದಲ್ಲಿ ಬಾಳುವ ವ್ಯಕ್ತಿಯ ಎಲ್ಲ ಭೋಗಗಳನ್ನು ಭಗವಂತನಿಗೂ ಅರ್ಪಿಸುವುದು ರೂಢಿಯಲ್ಲಿರುವ ಪದ್ಧತಿ. ಪ್ರಾಚೀನ ಕಾಲದಲ್ಲಿ ಪ್ರತಿನಿತ್ಯ ಹಲವು ಬಾರಿ ಪೂಜೆ – ಪುರಸ್ಕಾರಗಳು ನಡೆಯುತ್ತಿದ್ದುದು ಸಾಮಾನ್ಯ ವಿಷಯವಾಗಿತ್ತು. ದೇವರಿಗೆ ಸಲ್ಲಿಸುವ ಸೇವೆಯಲ್ಲಿ ಎರಡು ರೀತಿಯ ಸೇವೆಗಳು ಮುಖ್ಯವಾಗಿದ್ದವು. ಒಂದು ಅಂಗಭೋಗ ಮತ್ತು ಇನ್ನೊಂದು ರಂಗಭೋಗ. ಜೀವಂತ ವ್ಯಕ್ತಿಯು ಬದುಕಿನಲ್ಲಿ ಅನುಭವಿಸಲು ಸಾಧ್ಯವಾಗುವ ಎಲ್ಲ ಭೋಗಗಳಲ್ಲೂ ದೇವರಿಗೆ ಉಪಚಾರದ ಮೂಲಕ ಅರ್ಪಿಸುವುದು ನಿತ್ಯ ಪೂಜೆಯಾಗಿತ್ತು. ಇದನ್ನು 'ಭೋಗ' ಎಂದು ಭಾವಿಸಲಾಗುತ್ತಿತ್ತು. ಭೋಗ ಎಂದರೆ ದೇವರ ವಿಗ್ರಹಕ್ಕೆ ಸಂದ 'ಭೌತಿಕ ಸೇವೆ' ಎಂದರ್ಥ.

**ಅಂಗಭೋಗ :**

ಅಂಗಭೋಗ ಎಂದರೆ ದೇವರ ವಿಗ್ರಹಕ್ಕೆ ಅಥವಾ ವಿಗ್ರಹದ ದೇಹಕ್ಕೆ ಸಲ್ಲುವ ಭೋಗ. ಅಂದರೆ, ದೇವರ ವಿಗ್ರಹಕ್ಕೆ ಸಲ್ಲಿಸುವ ಸ್ನಾನ, ಗಂಧಲೇಪನ, ಧೂಪ, ದೀಪ, ಅಕ್ಷತೆ, ಪುಷ್ಪ, ಧ್ಯಾನ, ಆವಾಹನ, ಆಸನ, ಆಚಮನ, ವಸ್ತ್ರ, ಯಜ್ಞಸೂತ್ರ, ಭೂಷಣ, ದ್ರವ್ಯಾರ್ಪಣ, ತಾಂಬೂಲ, ಪ್ರದಕ್ಷಣ, ನಮಸ್ಕಾರ, ಸ್ತೋತ್ರ, ಪುರಾಣಾದಿಪಠಣ, ಛತ್ರಚಾಮರ, ವ್ಯಜನ, ಶೈಯಾ, ಆತ್ಮಾರೋಹಣ ಮುಂತಾದವುಗಳೆಲ್ಲ ಅಂಗಭೋಗದಲ್ಲಿ ಸೇರಿವೆ. ಅಂಗಭೋಗವು ದೇವರ ಪ್ರತಿಮಾರೂಪವಾದ ವಿಗ್ರಹಕ್ಕೆ ನೇರವಾಗಿ ಸಲ್ಲುವ ಪೂಜೆ. ಇದರಲ್ಲಿ ಮುಖ್ಯವಾಗಿ ಸ್ನಾನ, ವಸ್ತ್ರ, ಯಜ್ಞೋಪವೀತ, ಭೂಷಣ, ಗಂಧ ಅಕ್ಷತೆ, ದೀಪ, ಧೂಪ, ನೈವೇದ್ಯ ನಿರಾಜನ ಇತ್ಯಾದಿಗಳು ಅವಶ್ಯವಾಗಿರುತ್ತವೆ. ಕೆಲವು ವೇಳೆ ದೇವರ ಅಂಗಭೋಗಕ್ಕೆ ಅರ್ಪಿಸುವ ಉಪಚಾರಗಳು ತ್ರಿವಿಧೋಪಚಾರ, ಅಷ್ಟೋಪಚಾರ, ದಶೋಪಚಾರ, ಷೋಡಶೋಪಚಾರ, ದ್ವಾಂತ್ರಿಂಶತ್ಯುಪಚಾರ, ಅಷ್ಟೋತ್ತರ ಶತೋಪಚಾರ ಎಂದು ಸಂಖ್ಯಾ ಪ್ರಮಾಣಕ್ಕನುಗುಣವಾಗಿ

ನಡೆಯುತ್ತಿದ್ದವು. ಈ ಉಪಚಾರಗಳು ಆ ದೇವಾಲಯಗಳ ಉತ್ಪತ್ತಿ, ಸಂಪತ್ತು ಇತ್ಯಾದಿಗಳನ್ನು ಅವಲಂಬಿಸಿತ್ತು.

ತ್ರಿವಿಧೋಪಚಾರ, ಪಂಚೋಪಚಾರ ಅಷ್ಟೋಪಚಾರ, ದಶೋಪಚಾರಗಳು ಮಾತ್ರ ಸಾಮಾನ್ಯ ದೇವಾಲಯಗಳಲ್ಲೂ ನಡೆಯುತ್ತಿದ್ದವು.ಷೋಡಶೋಪಚಾರ, ಚತುರ್ವಿಂಶತ್ಯುಪಚಾರಗಳು ಶ್ರೀಮಂತ ದೇವಾಲಯುಗಳಲ್ಲಿ ನಡೆಯುತ್ತಿದ್ದರೆ; ದ್ವಾತ್ರಿಂಶತ್ಯುಪಚಾರ ಅಷ್ಟೋತ್ತರ ಶತೋಪಚಾರದಂತಹ ಅತಿ ಹೆಚ್ಚಿನ ಸಂಖ್ಯೆಯ ಉಪಚಾರಗಳು ಅತ್ಯಂತ ಶ್ರೀಮಂತ ಅಥವಾ ಪ್ರಭುವರ್ಗಕ್ಕೆ ಸೇರಿದ್ದ ದೇವಾಲಯಗಳಲ್ಲಿ ನಡೆಯುತ್ತಿದ್ದವು.ಇವುಗಳನ್ನು ಸಾಮಾನ್ಯ ವ್ಯಕ್ತಿಗಳ ಆಡಳಿತಕ್ಕೆ ಒಳಪಟ್ಟ, ಅಧಿಕಾರೊ–ಶ್ರೀಮಂತ ಆಡಳಿತಕ್ಕೆ ಒಳಪಟ್ಟ ಶ್ರೀಮಂತ ಪ್ರಭುವರ್ಗದ ಆಡಳಿತಕ್ಕೆ ಒಳಪಟ್ಟ ದೇವಾಲಯಗಳೆಂದು ವರ್ಗಿಕರಿಸಬಹುದಾಗಿ ಡಾ. ಎಚ್. ಎಸ್. ಗೋಪಾಲರಾವ್ ಅಭಿಪ್ರಾಯಪಡುತ್ತಾರೆ.[240]

ದೇವರ ಅಂಗಭೋಗಕ್ಕೆ ಸಂಬಂಧಿಸಿದಂತೆ ಸ್ನಾನಗನ್ದ ಧೂಪದೀಪ ನಿವೇದ್ಯ[241] 'ಪೂಜೆ ಪುನಸ್ಕಾರ'[242], ಅಂಗಭೋಗ ಸಂಧ್ಯಾಪೂಜೆ ನಂದಾದೇವಿಗೆ ನಿವೇದ್ಯ[243] 'ದೇವರ ನಿತ್ಯ ನೈಮಿತ್ತಿಕ ದಿವ್ಯಾಂಗಬೋಗ ತ್ರಿಕಾಲ ನಿವೇದ್ಯ'.[244] ದೂಪ ದೀಪ ನಿವೇದ್ಯ[245] 'ಅಂಗಭೋಗ ತ್ರಿಕಾಲ ನೀವೇದ್ಯ ನಂದಾದೀವಿಗೆ'[246] ಮುಂತಾದವುಗಳಿಗೆ ನೀಡಿದ ದಾನದ ವಿವರಗಳನ್ನು ತಿಳಿಸುವ ಶಾಸನಗಳಿಂದ ಅಂಗಭೋಗ ಸೇವೆಯಲ್ಲಿ ಏನೇನು ಒಳಗೊಂಡಿತ್ತು ಎಂಬುದು ತಿಳಿದುಬರುತ್ತದೆ. ಅಂಗಭೋಗ ಸೇವೆಯು ದಿನಕ್ಕೆ ಒಂದು ಬಾರಿ ಮಾತ್ರ ಸಲ್ಲುತ್ತಿರಲಿಲ್ಲ. ದೇವರಿಗೆ ಧೂಪ–ದೀಪ, ನೈವೇದ್ಯ, ಸ್ತುತಿ, ಇತ್ಯಾದಿಗಳ ಮೂಲಕ ಹಲವು ಬಾರಿ ನಡೆಯುತ್ತಿತ್ತು. ಮುಂಜಾನೆ, ಮಧ್ಯಾಹ್ನ ಮತ್ತು ಸಾಯಂಕಾಲ ಸಾಮಾನ್ಯವಾಗಿ ಪೂಜೆಗಳು ನಡೆಯುತ್ತಿದ್ದವು. ಇಂಥಹ ಅಂಗಭೊಗ ಸೇವೆಯನ್ನು ಪೂರೈಸುವುದು ಸುಲಭದ ಮಾತಾಗಿರಲಿಲ್ಲ. ದೇವಾಲಯಗಳ ಮುಖ್ಯ ಕಾರ್ಯವೇ ದೇವತಾ ಪೂಜೆಯಾಗಿದ್ದರಿಂದ ಸಾಕಷ್ಟು ಸೌಲಭ್ಯಗಳನ್ನು ಮೋದಲೇ ಮಾಡಿಕೊಳ್ಳಬೇಕಿತ್ತು. ಪೂಜಾಸಾಮಗ್ರಿಗಳು, ನೈವೇದ್ಯ, ದೀಪ, ಧೂಪಾದಿಗಳಿಗೆ ದೇವರ ಅಲಂಕಾರದ ಒಡವೆಗಳು, ಹೂ–ಮಾಲೆಗಳು ಮುಂತಾದವುಗಳಿಗೆ ಅಪಾರ ಖರ್ಚು ತಗುಲುತ್ತಿತ್ತು. ಕೇವಲ ದೇವಾಲಯದಿಂದಲೇ ಇದನ್ನೆಲ್ಲ ಭರಿಸುವುದು ಕೆಲವೊಮ್ಮೆ ಸಾಧ್ಯವಾಗುತ್ತಿರಲಿಲ್ಲ. ಈ ಕಾರಣಕ್ಕಾಗಿಯೇ ದೇವರ ಅಂಗಭೋಗಕ್ಕೆಂದು ಅರಸರಾದಿಯಾಗಿ ಸಾಮಾನ್ಯನವರೆಗೂ ವ್ಯಕ್ತಿಗಳು ವಸ್ತು, ಭೂಮಿ, ಗಾಣ, ತೋಟ, ತೆರಿಗೆ ನಿವೇಶನಗಳನ್ನ ದಾನ ಮಾಡಿದ್ದಾರೆ. ಅಂಗಭೋಗದ ಉದ್ದೇಶಕ್ಕೆಂದು ನೀಡಿದ ದಾನದತ್ತಿಗಳನ್ನು ಈ ಮುಂದೆ ಚರ್ಚಿಸಲಾಗಿದೆ.

**ರಂಗಭೋಗ :**

ದೇವಾಲಯಗಳ ಪೂಜಾವಿಧಿಯಲ್ಲಿ ಬಹುವಾಗಿ ಗಮನ ಸೆಳೆಯುವುದು 'ರಂಗಭೋಗ'. ಗರ್ಭಗುಡಿಯ ಮುಂದಿನ ರಂಗದ ಮೇಲೆ ಅಂದರೆ ದೇವತಾ ಮೂರ್ತಿಯ ಮುಂದೆ

ನೃತ್ಯಗಾರ್ತಿಯರು, ಕಲಾವಿದರಿಂದ ನಡೆಯುವ ಗೀತ, ನೃತ್ಯ, ವಾದ್ಯಗಳೇ ರಂಗ ಭೋಗಗಳು. ರಂಗಭೋಗಗಳಲ್ಲಿ ಪುರಾಣ ಪಠನ, ಹಾಡುಗಾರಿಕೆ, ವಾದ್ಯ, ಸಂಗೀತ ಮತ್ತು ನೃತ್ಯಸೇವೆಗಳು ರಂಗಭೋಗದಲ್ಲಿ ಸೇರುತ್ತವೆ. ದೇವರ ಎದುರಿಗೆ ನವರಂಗದಲ್ಲಿ ಅರ್ಪಿತವಾಗುವ ಸೇವೆಗಳೆಲ್ಲ ರಂಗಭೋಗಗಳೇ.

ಪೂಜಿಸಲಿರುವ ದೇವರನ್ನು ಧ್ಯಾನ-ಪ್ರಾರ್ಥನೆಗಳ ಮೂಲಕ ಆವಾಹಿಸಿ, ಕುಳಿತುಕೊಳ್ಳಲು ಆಸನ ನೀಡಿ, ಕೈಕಾಲುಗಳನ್ನು ತೊಳೆದು ಆತ್ಮ ಶುದ್ಧಿಗೋಸ್ಕರ ದೇವರ ಹೆಸರನ್ನು ಸ್ಮರಿಸುತ್ತಾ ಮೂರು ಬಾರಿ ಆಚಮನ ಮಾಡಿ, ವಿಗ್ರಹ ರೂಪದಲ್ಲಿರುವ ದೇವನಿಗೆ ಸ್ನಾನ ಮಾಡಿಸಿ, ವಸ್ತ್ರಧಾರಣೆ ಮಾಡಿಸಿ, ಯಜ್ಞೋಪವೀತ ಹಾಕಿ, ಗಂಧ ಲೇಪಿಸಿ ಭೂಷಣಗಳನ್ನು ಹಾಕಿ ಸುವರ್ಣ ಮೂಲೆ, ಪುಷ್ಪಮಾಲೆ ಇಲ್ಲವೆ ಅಕ್ಷತೆಯಿಂದ ಅಲಂಕಾರ ಮಾಡಿ, ಧೂಪದಿಂದ ಸುಗಂಧವನ್ನು ಹರಡಿ, ದೀಪದಿಂದ ಬೆಳಕುಗೊಳಿಸಿ, ಆಹಾರ ನಿವೇದನೆ ಮಾಡುವುದು; ನೀರಾಜನ ಬೆಳಗಿಸಿ ದೇವರನ್ನು ಕಣ್ತುಂಬ ನೋಡಿ, ಫಲ ಸಮರ್ಪಿಸಿ ತಾಂಬೂಲ ನೀಡಿ ಪ್ರದಕ್ಷಿಣೆ ಮಾಡಿ, ನಮಸ್ಕಾರ, ಸ್ತುತಿ, ಪುರಾಣಪಠನ ಮಾಡುತ್ತಾ ಛತ್ರಸೇವೆ, ಚಾಮರ ಸೇವೆಗಳನ್ನು ಮಾಡುವುದು; ದೇವರು ಶಯ್ಯೆಯಲ್ಲಿ ವಿಶ್ರಾಂತಿ ಪಡೆಯುತ್ತಿದ್ದಾಗ ಸಂಗೀತ, ವಾದ್ಯ, ನೃತ್ಯ ಇತ್ಯಾದಿ ಸೇವೆಗಳಿಂದ ತೃಪ್ತಿಪಡಿಸಿ, ಆತ್ಮಾರೋಪಣೆ ಮಾಡಿಕೊಳ್ಳುವುದು ಇವು ನಿತ್ಯಸೇವಾ ವಿಧಿಯ ಕ್ರಮ. ಇದರಲ್ಲಿ ಅಂಗಭೋಗ, ರಂಗಭೋಗಗಳೆರಡೂ ಸೇರುತ್ತವೆ. ದೇವರ ಅರ್ಚನಾವಿಧಿಯು ಮಂತ್ರಸಹಿತ ತಂತ್ರಾತ್ಮಕವಾದುದು. ಇದರಲ್ಲಿ ವೇದ ಮತ್ತು ಆಗಮಗಳು – ಎರಡರ ಪಾಲೂ ಇದೆ.

ದೇವರ ಪೂಜೆಯ ಸಂದರ್ಭದಲ್ಲಿ ಪಂಚಮಹಾಶಬ್ದಗಳ ಭಾಜನೆಯನ್ನು ಸುತ್ತೂರಿನ ಒಂದು ಶಾಸನವು ಉಲ್ಲೇಖಿಸುತ್ತದೆ.[247] ಪಂಚಮಹಾಶಬ್ದಗಳೆಂದರೆ, ಕೊಂಬು, ತಮಟೆ(ಹಲಿಗೆ), ಶಂಖ(ದವಳ), ಭೇರಿ(ಬಾಜಾ) ಮತ್ತು ಜಯಘಂಟೆ(ಜಾಗಟೆ) ಈ ಪಂಚ ಮಹಾವಾದ್ಯಗಳಿಂದ ಉಂಟಾದ ಶಬ್ದವನ್ನು ಪಂಚಮಹಾಶಬ್ದವೆಂದು ಕರೆಯುವರು. ಇವು ಸಹ ರಂಗಭೋಗದಲ್ಲಿ ಒಳಗೊಳ್ಳುತ್ತದೆ. ಪ್ರತಿದಿನ ದೇವಾಲಯಗಳಲ್ಲಿ ನಿಯಮಿತವಾಗಿ ತ್ರಿಕಾಲ ಪೂಜೆ ನಡೆಯುತ್ತಿತ್ತು[248] ಆಗೆಲ್ಲ ಗೀತ, ನೃತ್ಯ, ವಾದ್ಯಗಳು ಮೊಳಗುತ್ತಿದ್ದವು. ರಂಗಭೋಗವು ರಂಗದ ಮೇಲೆ ಪ್ರದರ್ಶನದ ಮೂಲಕ ನಡೆಯುವ ಪೂಜೆಯಾಗಿದ್ದರಿಂದ ನೃತ್ಯರೂಪಕಗಳಿಗೂ ಅವಕಾಶವಿದ್ದಿರಬಹುದು. ಅಂತಹ ರಂಗಪ್ರದರ್ಶನದಲ್ಲಿ ಪಾತ್ರಗಳು ವಾದ್ಯದವರು ಅತ್ಯವಶ್ಯಕ. ಇಂಥ ಸಂದರ್ಭದಲ್ಲಿ ರಂಗಭೋಗ ಸಲ್ಲಿಸಲು ವಿದ್ಯಾವಂತರು ಬೇಕಾಗಿರುತ್ತಿತ್ತು. ಎಂಬುದನ್ನು ಪಾತ್ರ ಪಾಗುಡದ ವಿದ್ಯಾವಂತರ ಮಾಲಗಾರು[249] ಎಂಬ ಶಾಸನೋಲ್ಲೇಖವು ತಿಳಿಸುತ್ತದೆ. ಇಷ್ಟೆಲ್ಲ ಸಂಕೀರ್ಣ ವ್ಯವಸ್ಥೆಗಳು ರಂಗಭೋಗದಲ್ಲಿ ಸಮಾವೇಶಗೊಳ್ಳುತ್ತವೆ.

ಪ್ರತಿದಿನ ನಡೆಯುವ ಪೂಜಾವೇಳೆಯಲ್ಲಿ ಬಂದ ಭಕ್ತರಿಗೆ ಒದಗಿಸುವ ಅಕ್ಷತೆ, ನೈವೇದ್ಯಗಳು; ಭಕ್ತರಿಗೆ ಅತಿಥಿ ಅಭ್ಯಾಗತರಿಗೆ ಉಣಬಡಿಸುವ ಪ್ರಸಾದ; ಗರ್ಭಗುಡಿ ಹಾಗೂ

ಅದರ ಮುಂಭಾಗದಲ್ಲಿ ದೇವರ ಎದುರಿಗೆ ಸದಾ ಉರಿಯುವ ನಂದಾದೀವಿಗೆ ಇವುಗಳಿಗೆಲ್ಲ ಪ್ರತಿನಿತ್ಯ ಸಾಕಷ್ಟು ಖರ್ಚು ತಗಲುತ್ತಿತ್ತು. ಈ ಎಲ್ಲ ಸೇವಾಕಾರ್ಯಗಳನ್ನು ಪೂರೈಸುವುದು ಸಾಕಷ್ಟು ಆದಾಯವಿರುವ ದೇವಾಲಯಗಳಿಗೆ ಮಾತ್ರ ಸಾಧ್ಯವಾಗುತ್ತಿತ್ತು. ಸಾಧ್ಯವಾಗದ ದೇವಾಲಯಗಳಿಗೆ ಹಣ, ವಸ್ತು, ಭೂಮಿ, ಗಾಣ, ತೋಟ, ಅಂಗಡಿ, ನಿವೇಶನ ಮುಂತಾದವುಗಳ ರೂಪದಲ್ಲಿ ದಾನದ ಮೂಲಕ ಹರಿದು ಬರುತ್ತಿತ್ತು. ದೇವಾಲಯಗಳಲ್ಲಿ ನಡೆಯುವ ಅಂಗಭೋಗ-ರಂಗಭೋಗ ಸೇವೆಗಳ ನಿರ್ವಹಣೆಗೆಂದೇ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ದಾನ ನೀಡಲಾಗಿದೆ. 'ಅಂಗಭೋಗ ಸಂಧ್ಯಾಪೂಜೆ ನಂದಾದೀವಿಗೆ ನಿವೇದ್ಯ'[250] 'ದೇವರ ನಿತ್ಯ ನೈಮಿತ್ತಿಕ ದಿವ್ಯಾಂಗಭೋಗ ತ್ರಿಕಾಲ ನೀವೇದ್ಯ'[251], 'ದೂಪ ದೀಪ ನಿವೇದ್ಯಕ್ಕು ಅಂಗಭೋಗಕ್ಕಂ'[252], ಅಂಗಭೋಗ ತ್ರಿಕಾಲ ನೀವೇದ್ಯ ನಂದಾದೀವಿಗೆ'[253] 'ದೇವತಾ ಪೂಜೆಗಂ ರಂಗಭೋಗಕ್ಕಂ'[254] ರಂಗಭೋಗದ ವಿದ್ಯಾವನ್ತರಿಗೆ'[255], 'ದೇವರಂಗ ಭೋಗಕ್ಕಂ ನೃತ್ಯಗೀತವಾದ್ಯಕ್ಕಂ'[256] 'ದೇವರ ಅಂಗಭೋಗ ರಂಗಭೋಗ',[257] 'ರಂಗಪೂಜೆ'[258] 'ದೇವಪೂಜೆಗಂ ರಂಗಭೋಗಕ್ಕಂ ಜಕಾದಿ ದೇವ ಪರಿಚಾರಕ ಜೀವನಕ್ಕಂ'[259] ಎಂಬ ಹಲವಾರು ವಿಧದ ಉಲ್ಲೇಖಗಳೊಂದಿಗೆ ದೇವರ ಅಂಗಭೋಗ ಮತ್ತು ರಂಗಭೋಗ ಸೇವೆಗಳ ನಿರ್ವಹಣೆಯ ಉದ್ದೇಶಕ್ಕೆಂದು ದಾನ ನೀಡಿರುವುದನ್ನ ಶಾಸನಗಳು ಉಲ್ಲೇಖಿಸುತ್ತವೆ.

ಬಹಳಷ್ಟು ಶಾಸನಗಳಲ್ಲಿ ಅಂಗಭೋಗ ಮತ್ತು ರಂಗಭೋಗಕ್ಕೆಂದು ನೀಡಿದ ದಾನಗಳಲ್ಲಿ 'ದೇವರ ಸೇವೆಗೆ'[260] ಎಂದು ಹೇಳಲಾಗಿದೆ. ಅಲ್ಲದೆ ಬಹಳಷ್ಟು ದಾನಶಾಸನಗಳಲ್ಲಿ ಅಂಗಭೋಗದ ಜೊತೆಗೆ ರಂಗಭೋಗಕ್ಕೂ ರಂಗಭೋಗದ ಜೊತೆಗೆ ಅಂಗಭೋಗಕ್ಕು ದಾನ ನೀಡಲಾಗಿದೆ. ಇವು ಎರಡಕ್ಕೂ ಜೊತೆ ಜೊತೆಯಾಗಿಯೇ ನೀಡಿದ ದಾನಗಳೇ ಹೆಚ್ಚು. ಇನ್ನೂ ಹಲವು ಸಂದರ್ಭಗಳಲ್ಲಿ ಕೇವಲ ಅಂಗಭೋಗ ಮತ್ತು ರಂಗಭೋಗಕ್ಕೆಂದಷ್ಟೇ ದಾನ ನೀಡದೇ 'ಅಂಗಭೋಗ-ರಂಗಭೋಗ, ಖಂಡಸ್ಫುಟಿತ ಜೀರ್ಣೋದ್ಧಾರ, ವಿದ್ಯಾದಾನ, ಅನ್ನದಾನಕ್ಕೆಂದು ಬೇರೆ ಬೇರೆ ಉದ್ದೇಶಗಳ ಜೊತೆಗೂ ದಾನ ನೀಡಲಾಗಿದೆ. ಅಂಗಭೋಗ ಮತ್ತು ರಂಗಭೋಗಗಳಿಗಾಗಿ ನೀಡಿದ ಕೆಲವು ದಾನಗಳ ಉದಾಹರಣೆಗಳನ್ನು ಈ ಕೆಳಗೆ ಹೇಳಲಾಗಿದೆ.

ರೈಕೆಯ ದ್ವೈದಿಚಟ್ಟೋಪಾಧ್ಯಾಯ ಸೋಮಯಾಜಿ ಎಂಬ ಬ್ರಾಹ್ಮಣೋತ್ತಮನು ತ್ರೈಪುರುಷದೇವರ ಅಂಗಭೋಗ-ರಂಗಭೋಗಕ್ಕೆ ಮತ್ತು ಇತರ ವ್ಯವಸ್ಥೆಗಳಿಗೆಂದು ೩ ಗದ್ಯಾಣಗಳನ್ನು, ಮೂರು ಮತ್ತರು ಭೂಮಿಯನ್ನು ದಾನ ಮಾಡಿದ್ದಾನೆ.[260] ಇರಿವಬೆಡಂಗ ಸತ್ಯಾಶ್ರಯನು ಗೋನೂರು ಕಲಿದೇವರ ಸೇವೆಗೆ ಕೆಲವೂರ ದಾರಿಯ ದಕ್ಷಿಣಕ್ಕೆ ೪ ಮತ್ತರು, ೫೦೦ ಕಮ್ಮ ಭೂಮಿಯನ್ನು ದತ್ತಿ ಬಿಟ್ಟಿದ್ದಾನೆ.[261] ಐದನೆಯ ವಿಕ್ರಮಾದಿತ್ಯನ ಆಳ್ವಿಕೆಯಲ್ಲಿ ಕೌಶಿಕಗೋತ್ರದ ಮಾಚಿಣಾರ್ಯನು ಬಲ್ಲಕುಂದೆ ತೀರ್ಥದಲ್ಲಿ ಜೈನದೇವಾಲಯವನ್ನು ಕಟ್ಟಿಸಿ ಅದರ ಪೂಜಾರ್ಥವಾಗಿ ಐದು ನಿವರ್ತನ ಕರಿಭೂಮಿಯನ್ನು ದಾನ ಬಿಡುತ್ತಾನೆ.[262] ಒಂದನೆಯ ಜಗದೇಕಮಲ್ಲನ ಮಹಾಸಾಮಂತ ದೇವನರಸನು ರೂಗಿಯ ನಗರೇಶ್ವರ ದೇವರ ಸೇವೆಗೆ

೬೦ ಮತ್ತರು ಭೂಮಿ ಮೂರು ತೋಟ, ಒಂದು ಗಾಣ, ೩ ಅಂಗಡಿಗಳನ್ನು ಸರ್ವನೇತ್ಯಾತ್ಮನಾಗಿ ದಾನ ಬಿಡುತ್ತಾನೆ.[263] ಅಂತೆಯೇ ಮಹಾಸಾಮಂತ ನೊಳಂಬ ಪಲ್ಲವ ಪೆರ್ಮಾಡಿ ಉದಯಾದಿತ್ಯನು ಬಾಳ್ಗುಳಿಯ ಕಲಿದೇವರ ಅಂಗಭೋಗಕ್ಕೆ,[264] ಚಕ್ರವರ್ತಿ ಒಂದನೆಯ ಜಗದೇಕಮಲ್ಲನು ಪಿರಿಯ ಮೊಸಂಗಿಯ ನಾಡಪೃಯ ದೇವರಿಗೆ[265] ಭೂದಾನ ಬಿಟ್ಟಿದ್ದಾರೆ. ಒಂದನೆಯ ಜಗದೇಕಮಲ್ಲನ ರಾಣಿ ಪದ್ಮಲದೇವಿಯು ಕರಡಿಕಲ್ಲು ೩೦೦ರ ಬಳಿಯ ಗೋವನ್ತಿಗೆಯ ಸ್ವಯಂಭೂ ಕಲಿದೇವ ಸ್ವಾಮಿಯ ಸೇವೆಗೆ ಒಟ್ಟು ೫೫ ಮತ್ತರುಭೂಮಿ ನೈವೇದ್ಯಕ್ಕೆಂದು ೧೦ ವೀಸಗಳನ್ನು ದಾನಬಿಟ್ಟಿದ್ದಾಳೆ.[266]

ಇಮ್ಮಡಿ ಜಯಸಿಂಹದೇವನ ಮಗಳು ಸಹಜವೆಡಂಗಿ ಸೋಮಲದೇವಿಯು ಪುಲಿಪೊದರ ಬೆಸವೋಜನು ಕಟ್ಟಿದ ಬಸದಿಯ ಭೋಗಕ್ಕೆ ೫೦ ಮತ್ತರು ಭೂಮಿ ಮತ್ತು ಒಂದು ಹೂವಿನ ತೋಟವನ್ನು ನೀಡಿದ್ದಾಳೆ.[267] ಇಮ್ಮಡಿ ಜಯಸಿಂಹದೇವನು ಪಿರಿಯ ಮೊಸಂಗಿಯ ಜಿನಾಲಯದ ಭೋಗಕ್ಕಾಗಿ ನೂರು ಮತ್ತರು ಕರಿಯನೆಲ, ೨ ಮತ್ತರು ಗದ್ದೆ, ಒಂದು ಹೂವಿನ ತೋಟ, ನಂದಾದೀವಿಗೆಗೆ ಒಂದು ಗಾಣವನ್ನು ದತ್ತಿಯಾಗಿ ನೀಡಿದ್ದಾನೆ.[268] ಎಡದೊರೆ ೨೦೦೦ದ ಪೆರ್ಗ್ಗಡೆ ದೂರಸಿಂಘನ ತಮ್ಮನೊಬ್ಬನು ಅಗ್ರಹಾರ ತಡಕಲ್ಲಿನ ದೇವಾಲಯವೊಂದಕ್ಕೆ ನಂದಾದೀವಿಗೆಗೆಂದು ಉಪಿನ ಕಾವಲಿ ಸುಂಕವನ್ನು ದಾನ ಬಿಟ್ಟಿದ್ದಾನೆ.[269] ಜಯಸಿಂಹನ ಪೆಗ್ಗಡೆ ಚಾವುಂಡಯ್ಯ ಎಂಬಾತನು ಅರಕೇರಿಯ ಸಿದ್ದೇಶ್ವರ ದೇವರ ನೈವೇದ್ಯಕ್ಕೆ ೪೫೦ ಕಮ್ಮ ಗದ್ದೆಯನ್ನು ಕ್ರಯವಾಗಿಕೊಂಡು ದಾನ ಬಿಟ್ಟಿದ್ದಾನೆ.[270] ಮಹಾಮಂಡಳೇಶ್ವರ ಜಗದೇಕಮಲ್ಲ ನೊಳಂಬ ಪಲ್ಲವನ ಮನೆವೆರ್ಗ್ಗಡೆ ಕೇತಯ ನಾಯಕನು ನೆಲ್ಕುದುರೆಯ ಕಲಿದೇವರ ಸೇವೆಗೆ ೧೫ ಮತ್ತರು ಕರಿನೆಲ ಮತ್ತು ಒಂದು ಮತ್ತರು ಹೂದೋಟವನ್ನು, ನಂದಾದೀವಿಗೆಗೆ ಒಂದು ಗಾಣವನ್ನು ದತ್ತಿ ಬಿಟ್ಟಿದ್ದಾನೆ.[271] ಮಹಾಸಾಮಂತ ಜಗದೇಕಮಲ್ಲ ಉದಯಾದಿತ್ಯದೇವನು ತಲವಗಿಯ ಭೋಗೇಶ್ವರ ದೇವರ ಪೂಜೆಗೆ, ಶ್ರೀಖಂಡಕ್ಕೆಂದು ೫೦೦ ಎಲೆ ಬಳ್ಳಿಯ ಒಂದು ಮತ್ತರು ತೋಟವನ್ನು, ನೈವೇದ್ಯಕ್ಕೆ ಕಮ್ಮ ೪೦೦ ಮತ್ತರು, ೩ ಮತ್ತರು ಗದ್ದೆ, ರಂಗಭೋಗದ ಪರಿಕಾರರಿಗೆ ಗದ್ದೆ ಮತ್ತರು ಒಂದು, ಹಾಡುವವರಿಗೆ ಗದ್ದೆ ಮತ್ತರು ಒಂದು, ದೇವರ ಪೂಜಾರಿಗೆ ಗದ್ದೆ ಮತ್ತರು ೨೦೦ ಭೂಮಿ ದಾನ ನೀಡಿದ್ದಾನೆ.[272] ಬಾಗಳಿಯ ಪಾತ್ರದ ಸಿರಿಯವೆ ಎಂಬಾಕೆಯು ಅಲ್ಲಿನ ಕಲಿದೇವರ ನಂದಾದೀವಿಗೆಗೆ ಪ್ರತಿವರ್ಷ ಎರಡು ಪಣಗಳನ್ನೂ ದಾನ ನೀಡಿದ್ದಾಳೆ.[273] ಇಮ್ಮಡಿ ಜಯಸಿಂಹನ ರಾಣಿ ಸೋಮಲದೇವಿಯು ನಿಪ್ಪಾಣಿಯಲ್ಲಿ ಸರಸ್ವತಿ ದೇವಿಯ ಮೂರ್ತಿ ಪ್ರತಿಷ್ಠಾಪಿಸಿಅದರ ಅಂಗಭೋಗ ರಂಗಭೋಗಕ್ಕೆಂದು ದಾನಬಿಟ್ಟಿದ್ದಾಳೆ. ದೇವರ ಸೇವೆಗೆ ೩೦೦ ಮತ್ತರು ತೋಟ, ನೈವೇದ್ಯಕ್ಕೆ ೭೬ ಮತ್ತರು ಭೂಮಿ, ೫೦ ಗದ್ಯಾಣ ಪೊನ್ನ ಪಣಗಳನ್ನು ದಾನ ನೀಡಲಾಗಿದೆ.[274]

ದಂಡನಾಯಕ ತಿಕಣ್ಣನು ಮೋರಿಗೇರಿಯಲ್ಲಿ ನೊಳಂಬೇಶ್ವರ ಹಾಗೂ ಲೆಂಕೇಶ್ವರ ದೇವಾಲಯಗಳನ್ನು ಕಟ್ಟಿಸಿ ಆ ದೇವರ ಅಂಗಭೋಗ, ರಂಗಭೋಗ, ಪಾದಮೂಲ ಪರಿವಾರ,

ವಿದ್ಯಾದಾನಕ್ಕೆಂದು ಅರಸರಿಗೆವೆಂದು ಹೆಸರಿಟ್ಟ ಗ್ರಾಮದಾನ ಮಾಡಿದ್ದಾನೆ. ಗ್ರಾಮದ ಭೂಮಿಯನ್ನೆಲ್ಲ ದೇವಾಲಯದ ವ್ಯವಸ್ಥೆಗೆ ಹಂಚಿಕೆ ಮಾಡಿದ್ದಾನೆ.[275] ಮಹಾಸಾಮಂತ ಬನವಾಸಿ ಪುರವರೇಶ್ವರ ಘಟ್ಟಿಯರಸನು ಮೋರಿಗೇರಿಯ ಗೋವಿಂದೇಶ್ವರ ದೇವರಿಗೆ ೧೨ ಮತ್ತರು ಭೂಮಿ, ರಂಗಭೋಗದ ಸೂಳೆಯರ (ಪಾತ್ರದವರು) ವ್ಯವಸ್ಥಾಪಕ ಸೂಳೆವಾಳಂಗೆ ೧೨ ಮತ್ತರು, ಇಬ್ಬರು ಸೂಳೆಯರಿಗೆ ೧೦ ಮತ್ತರು, ಪರೆಕಾರನಿಗೆ ೨೪ ಮತ್ತರು ಭೂಮಿಯನ್ನು ದಾನ ಬಿಟ್ಟಿದ್ದಾನೆ.[276] ದಂಡನಾಯಕ ನಾಗವರ್ಮ ಎಂಬಾತನು ತಡಬೇಲದಲ್ಲಿ ತನ್ನ ಪರಿವಾರದವರ ಹೆಸರಿನಲ್ಲಿ ಹಲವು ದೇವಾಲಯಗಳನ್ನು ನಿರ್ಮಿಸಿ ಆ ದೇವರುಗಳ ಸೇವೆಗೆ ಭೂಮಿ ಹಾಗೂ ತಡಖೇಲ ಗ್ರಾಮದಿಂದ ಬರುವ ತೆರಿಗೆಯನ್ನು ದತ್ತಿ ಬಿಡುತ್ತಾನೆ.[277] ತ್ರೈಲೋಕ್ಯಮಲ್ಲನ ಕಾಲದಲ್ಲಿ ಕೊಲ್ಲಾಪೂರದ ಮೌರಸಿಂಗನು ಶೀರೂರದ ಸಿದ್ದೇಶ್ವರ ದೇವರ ಸೇವೆಗೆ ಧೂಪ, ದೀಪ, ಗಂಧ, ನೈವೇದ್ಯ, ನೃತ್ಯೋಪಹಾರಗಳಿಗೆ ೫೩ ನಿವರ್ತನ ಭೂಮಿದಾನ ಮಾಡುತ್ತಾನೆ.[278] ಹಾಗೆ ಮಹಾಸಾಮಂತ ಕಾಕತೀಯ ಪೊಳಲರಸನು ಖಂಡಿಸಣಗರದ ಮಧುಕೇಶ್ವರ ದೇವರ ಸೇವೆಗೆ ೧೨ ನಿವೇಶನಗಳು, ೨೦ ಮತ್ತರು ಕರಿನೆಲ, ಒಂದು ಗಾಣ, ಒಂದು ಮತ್ತರು ನೀರ್ನೆಲ, ೨ ಮತ್ತರು ಕಿಸುಕಾಡು ಭೂಮಿಯನ್ನು ದಾನಮಾಡುತ್ತಾನೆ.[279]

ಹೀಗೆ ದೇವರ ಸೇವೆಗೆಂದು, ಅಂಗಭೋಗ, ರಂಗಭೋಗಕ್ಕೆಂದು ಅರಸರಾದಿಯಾಗಿ ಸಾಮಾನ್ಯ ವ್ಯಕ್ತಿಯವರೆಗೂ ದಾನ ನೀಡಿದ್ದಾರೆ. ಒಟ್ಟು ದಾನಗಳಲ್ಲಿ ಶೇಕಡಾ ೮೦ ರಿಂದ ೯೦ ರಷ್ಟು ದಾನಗಳನ್ನು ದೇವರ ಅಂಗಭೋಗ – ರಂಗಭೋಗ ಉದ್ದೇಶಗಳಿಗೆ ನೀಡಲಾಗಿದೆ. ಬೇರೆ ಬೇರೆ ಉದ್ದೇಶಗಳಿಗೆಂದು ದಾನ ಬಿಡುವಾಗಲೂ ದೇವರ ಸೇವೆಗೆ ಹೆಚ್ಚಿನ ದಾನಬಿಟ್ಟಿರುವುದು ಅಧ್ಯಯನದಿಂದ ತಿಳಿದು ಬರುತ್ತದೆ. ದೇವಾಲಯಗಳಲ್ಲಿ ದೇವರ ಪೂಜೆಯೇ ಪ್ರಮುಖವಾಗಿದ್ದರಿಂದ ಸಹಜವಾಗಿಯೇ ಇದನ್ನು ಸಮರ್ಪಕವಾಗಿ ನಿರ್ವಹಿಸುವುದು ಮುಖ್ಯವೆಂದು ಪರಿಗಣಿಸಿ ದಾನ ನೀಡಲಾಗಿದೆ. ಅಂಗಭೋಗ ಮತ್ತು ರಂಗಭೋಗ ಉದ್ದೇಶಕ್ಕೆಂದು ನೀಡಲಾದ ದಾನಗಳನ್ನು ಪಟ್ಟಿಮಾಡುತ್ತ ಹೊಂದರೆ ಸಾವಿರಕ್ಕೂ ಹೆಚ್ಚಿನ ದಾನಶಾಸನಗಳನ್ನು ಹೆಸರಿಸಬೇಕಾಗುತ್ತದೆ.

### ೪.೪.೨ ದೇವಾಲಯ ನಿರ್ಮಾಣ :

ದೇವಾಲಯಗಳ ನಿರ್ಮಾಣಕ್ಕೆ ಹಲವು ಕಾರಣಗಳಿವೆ. ಧರ್ಮ, ಪರೋಕ್ಷವಿನಯ, ಗಳಿಸಿದ ಸಂಪತ್ತಿನ ವಿನಿಯೋಗ ಹಾಗೂ ವಿಶೇಷ ಸಂದರ್ಭಗಳು ಆ ಕಾರಣಗಳಲ್ಲಿ ಪ್ರಮುಖವಾದವುಗಳು. ದೇವಾಲಯಗಳು ನಿರ್ಮಾಣವಾದ ಮೇಲೆ ನಿರಂತರವಾಗಿ ದಾನ–ದತ್ತಿಗಳು ಹರಿದು ಬರುತ್ತಿದ್ದುದು ಒಂದು ವಿಷಯವಾದರೆ, ದೇವಾಲಯ ನಿರ್ಮಿಸುವುದಕ್ಕಾಗಿಯೇ ದಾನಗಳನ್ನು ನೀಡಿರುವುದು. ಇನ್ನೊಂದು ವಿಶೇಷ ದೇವಾಲಯಗಳನ್ನು ನಿರ್ಮಿಸುವ ಉದ್ದೇಶದಿಂದಲೇ ದಾನ–ದತ್ತಿಗಳನ್ನು ಸಮರ್ಪಿಸಿದ ಉದಾಹರಣೆಗಳನ್ನು ಕಾಣಬಹುದು.

"ಜೀವನದಲ್ಲಿ ಒಂದಾದರೂ ಗುಡಿಯನ್ನು ಕಟ್ಟಿಸಬೇಕು. ಇಲ್ಲವೇ ಕಟ್ಟಿಸಿದ ಗುಡಿಗಳಿಗೆ ದಾನವನ್ನಾದರೂ ಕೊಡಬೇಕು" ಎಂಬುದು ಅಂದಿನ ಜನರ ಧಾರ್ಮಿಕ ಭಾವನೆಯಾಗಿತ್ತು ಮತ್ತು ಒಂದು ಪವಿತ್ರವಾದ ಹಾಗೂ ಮಹತ್ವದ ಕರ್ತವ್ಯವೂ ಆಗಿತ್ತು. ಈವರೆಗೆ ಉಲ್ಲೇಖಿಸಲಾದ ಹಾಗೂ ನಮಗೆ ಲಭ್ಯವಿರುವ ಶಾಸನಗಳಿಂದ ತಿಳಿದು ಬರುವಂತೆ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಸುಮಾರು ೫೦೦ಕ್ಕೂ ಹೆಚ್ಚು ದೇವಾಲಯಗಳು ನಿರ್ಮಾಣವಾಗಿವೆ. ಈವರಗೆ ಪ್ರಕಟವಾಗದಿರುವ ಮತ್ತು ಶಾಸನತಜ್ಞರ ಗಮನಕ್ಕೂ ಬಾರದಿರುವ ಇನ್ನೂ ಅನೇಕ ಶಾಸನಗಳಿರುವುದು ಅಸಂಭವವಲ್ಲ. ಅವುಗಳಲ್ಲಿ ದೇವಾಲಯಗಳ ನಿರ್ಮಾಣಕ್ಕೆ ಸಂಬಂಧಿಸಿದ ಕೆಲವು ಉಲ್ಲೇಖಗಳಾದರೂ ದೊರೆಯಬಹುದು. "ಕಲ್ಯಾಣ ಚಾಲುಕ್ಯರ ಆಳ್ವಿಕೆಯ ಸುಮಾರು ೨೫೦ ವರ್ಷಗಳ ಕಾಲದಲ್ಲಿ ಕನಿಷ್ಠ ೬೦೦ ದೇವಾಲಯಗಳು ನಿರ್ಮಾಣವಾಗಿವೆ ಎಂದು ಭಾವಿಸಿದರೆ ಉತ್ಪ್ರೇಕ್ಷೆಯಾಗಲಾರದು" ಎಂದು ಡಾ. ಎಚ್. ಎಸ್. ಗೋಪಾಲರಾವ್ ಅಭಿಪ್ರಾಯ ಪಡುತ್ತಾರೆ.[280] ಇದನ್ನು ಲಕ್ಷಿಸಿದಾಗ ಕಲ್ಯಾಣ ಚಾಲುಕ್ಯರ ಕಾಲದ ಜನರ ಧಾರ್ಮಿಕ ಮತ್ತು ಸಾಂಸ್ಕೃತಿಕ ಬದುಕಿನ ಮೌಲ್ಯಗಳ ಅರಿಕೆಯಾಗುತ್ತದೆ.

ಇಷ್ಟೊಂದು ಸಂಖ್ಯೆಯಲ್ಲಿ ಕಲ್ಯಾಣ ಚಾಲುಕ್ಯರ ಅವಧಿಯಲ್ಲಿ ದೇವಾಲಯಗಳು ನಿರ್ಮಾಣಮಾಡುವೆಂದರೆ, ಅವು ಕೇವಲ ಅರಸರು, ಮಾಂಡಳಿಕರು, ಉನ್ನತ ಅಧಿಕಾರಿಗಳು ಇಲ್ಲವೆ ಶ್ರೀಮಂತರಿಂದಾಗಲಿ ರಚನೆಯಾದವುಗಳಲ್ಲ ಸಾಮಾನ್ಯ ಜನರೂ ಸಹ ದೇವಾಲಯಗಳ ನಿರ್ಮಾಣಕಾರ್ಯದಲ್ಲಿ ತಮ್ಮದೇ ಆದ ಕೊಡುಗೆಗಳನ್ನು ಸಲ್ಲಿಸಿದ್ದಾರೆ. ಸೇವೆ ಸಲ್ಲಿಸುವುದರ ಮೂಲಕ, ಶ್ರಮದಾನ ಮಾಡುವುದರ ಮೂಲಕ, ದಾನ-ದತ್ತಿಗಳನ್ನು ನೀಡುವುದರ ಮೂಲಕ ಇಂಥ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ರಾಜರ ಔದಾರ್ಯತೆ, ಭಕ್ತಿ ಭಾವನೆಗಳಿಂದ ರಚಿತವಾದ ದೇವಾಲಯಗಳ ಸಂಖ್ಯೆಗಿಂತ ಸಾಮಾನ್ಯ ಜನರ ದಾನ-ದತ್ತಿ, ಧಾರ್ಮಿಕ ಭಾವನೆಗಳಿಂದ ರಚನೆಯಾದ ದೇವಾಲಯಗಳ ಸಂಖ್ಯೆಯೇ ಹೆಚ್ಚು. ಅರಸರೇ ಆಗಲಿ ಅಥವಾ ಯಾವುದೇ ವ್ಯಕ್ತಿಗಳೇ ಆಗಲಿ ತಾವೇ ದೇವಾಲಯಗಳನ್ನು ಕಟ್ಟಿಸುವುದು ಅಥವಾ ಬೇರೆಯವರು ಕಟ್ಟಿಸುವ ದೇವಾಲಯಕ್ಕೆ ದಾನ ನೀಡುವುದು ಹೀಗೆ ಎರಡು ಬಗೆಯ ಅಂಶಗಳನ್ನು ದೇವಾಲಯ ನಿರ್ಮಾಣದಲ್ಲಿ ಕಾಣುತ್ತೇವೆ.

ಇಮ್ಮಡಿ ತೈಲಪನ ಕಾಲದಲ್ಲಿ ಕೈಕೆಯ ದ್ವೇದಿ ಚಟ್ಟೋಪಾಧ್ಯಾಯ ಸೋಮಯಾಜಿ ಎಂಬ ಬ್ರಾಹ್ಮಣೋತ್ತಮನು ಮೊದೆಯನೂರಿನಲ್ಲಿ ತ್ರೈಪುರುಷ ದೇವಾಲಯವನ್ನು ಕಟ್ಟಿಸಿ ಅದಕ್ಕೆ ಸಾಕಷ್ಟು ದಾನಗಳನ್ನು ನೀಡಿದ್ದಾನೆ.[281] ಮಹಾಮಂಡಳೇಶ್ವರ ಶಾಂತಿವರ್ಮರಸನು ಸವದತ್ತಿಯಲ್ಲಿ ಬಾಹುಬಲಿ ಜಿನಾಲಯವನ್ನು ಕಟ್ಟಿಸಿದನೆಂಬುದನ್ನು ಸವದತ್ತಿ ಶಾಸನ ತಿಳಿಸುತ್ತದೆ.[282] ಆಂದ್ರಪ್ರದೇಶದ ಜಿಮ್ಮಿಕುಂಟೆಯಲ್ಲಿ ಇಮ್ಮಡಿ ತೈಲಪನ ಪ್ರಧಾನ ಗಾವುಂಡ ನಾಗಯ ಗಾವುಂಡನು ತನ್ನದೊರೆ ತೈಲಪನ ಹೆಸರಿನಲ್ಲಿ ತೈಲೇಶ್ವರ ದೇವಾಲಯವನ್ನು ಕಟ್ಟಿಸಿದ್ದಾನೆ.[283] ಇರಿವಬೆಡಂಗನ ಆಳ್ವಿಕೆಯಲ್ಲಿ ಅವನ ದಾದಿ ದೇವಕಬ್ಬೆ ಚೊಪ್ಪದ್ಯಾಂಡಿಯಲ್ಲಿ ದೇವಕೇಶ್ವರ ದೇವಾಯ[284] ಅವನ

ಸಾಹಣಿ ಪೆರ್ಗ್ಗಡೆಯು ಭೋಗೇಶ್ವರ ದೇವಾಲಯವನ್ನು ನಿರ್ಮಿಸಿದ್ದಾರೆ.[285] ಐದನೆಯ ವಿಕ್ರಮಾದಿತ್ಯನ ಕಾಲದಲ್ಲಿ ಮಹಾಮಂಡಳೇಶ್ವರ ಗೊಳಂಬಾಧಿರಾಜನ ನಿಯೋಗಿ ಮಾಚಿಣಾರ್ಯನು ಬಲ್ಲಕುಂದೆ ತೀರ್ಥದಲ್ಲಿ ಜಿನದೇವಾಲಯವನ್ನು ಕಟ್ಟಿಸಿದ್ದಾನೆ.[286]

ಇಮ್ಮಡಿ ಜಯಸಿಂಹನ ಅಧಿಕಾರಿ ರಾಜರಾಜನು ಮೊರಂಬದ ರಾಜ ಜಿನಾಲಯವನ್ನು,[287] ಒಂದನೆಯ ಜಗದೇಕಮಲ್ಲನ ಕಾಲದಲ್ಲಿ ಹೆಗ್ಗಡೆ ಕಕ್ಕಪಯ್ಯನು ಎಡದೊರೆ ೨೦೦೦ದ ಒಳ್ಳನಿಟ್ಟಿಗೆಯಲ್ಲಿ ವಿಷ್ಣುದೇವಾಲಯವನ್ನು ಕಟ್ಟಿಸಿದ್ದಾರೆ.[288] ಆರನೆಯ ವಿಕ್ರಮಾದಿತ್ಯನ ರಾಣಿಯರಲ್ಲಿ ಒಬ್ಬಳಾದ ಮಾಳಲದೇವಿಯ ಶಿವಾಲಯ, ಆದಿತ್ಯಾಲಯ, ವಿಷ್ಣುಗೃಹ ನಿರ್ಮಿಸಿದಳೆಂದು ಶಾಸನವೊಂದು ತಿಳಿಸುತ್ತದೆ.[289] ಇನ್ನೊಬ್ಬ ರಾಣಿ ಜಾಕಲದೇವಿಯು ಇಂಗಳಗಿಯಲ್ಲಿ ಬಸದಿಯೊಂದನ್ನು ಮಾಡಿಸಿದ್ದಾಳೆ.[290] ಆರನೆಯ ವಿಕ್ರಮಾದಿತ್ಯ ಮತ್ತು ಚಂದಲದೇವಿಯರ ಮಗ ನಾಲ್ಕನೆ ತೈಲಪನು ತನ್ನ ದಾದಿಯಾದ ಬಾಗಿಯಬ್ಬೆಯ ಬಿನ್ನಹದಂತೆ ಅಗಸ್ತ್ಯೇಶ್ವರ ಮತ್ತು ಚಂದಲೇಶ್ವರ ದೇವಾಲಯಗಳನ್ನು ಮಾಡಿಸಿ ಅವುಗಳಿಗೆ ದಾನಗಳನ್ನು ಬಿಟ್ಟಿದ್ದಾನೆ.[291] ಗೋವೆಯ ಕದಂಬ ಜಯಕೇಶಿಯ ಹೆಂಡತಿ ಹಾಗೂ ಆರನೆ ವಿಕ್ರಮಾದಿತ್ಯನ ಮಗಳು ಮೈಳಲದೇವಿಯು ಕೇಶವ ದೇವರ ಪ್ರತಿಷ್ಠೆ ಮಾಡಿಸಿ ಅದಕ್ಕೆ ದಾನ ನೀಡಿದ್ದಾಳೆ.[292] ಹಾಗೆಯೇ ಕಲ್ಯಾಣ ಚಾಲುಕ್ಯರ ಸಾಮಂತರಾಗಿದ್ದ ಹೊಯ್ಸಳರು ಹಲವಾರು ದೇವಾಲಯಗಳನ್ನು ನಿರ್ಮಿಸಿದ್ದಾರೆ.

ಇವೆಲ್ಲ ಅಧಿಕಾರ, ಹಣ ಶ್ರೀಮಂತಿಕೆಯಿರುವವರು ದೇವಾಲಯ ಮಾಡಿಸಿದ ಉದಾಹರಣೆಗಳಾದರೆ ಇದಾವುದೂ ಇಲ್ಲದ ಸಾಮಾನ್ಯರು ಕಟ್ಟಿಸಿದ ದೇವಾಲಯಗಳಿಗೂ ಕೊರತೆಯಿಲ್ಲ. ಲಿಂಗಸಿವಜೀಯ ಎಂಬಾತನು ಭಿಕ್ಷಾವೃತ್ತಿಯಿಂದ ಕಲ್ಲದೇಗುಲವುಂ ಮೂಲ ಶಾಸನ ಗಮನಿಸಿ ದೇಗುಲಗಳಮಂ ಸಮಯಿಸಿ ಕೊಣ್ಡಂಗಳುಮಂ ಕಟ್ಟಿಸಿ, ಇಟ್ಟಿಗೆಯ ದೇಗುಲಮ ಕಳೆದು' ದೇವಾಲಯಕ್ಕೆ ಕಳಸ ನಿರ್ಮಾಣ ಮಾಡಿಸಿದ್ದಾನೆ.[293] ಒಬ್ಬಗಾವುಣ್ಡ ಎಂಬುವವನು ಉಪವಾಸ ವ್ರತಮಾಡಿ ದೇಗುಲವನ್ನು ಮಾಡಿಸಿದ್ದಾನೆ.[294] ಅಂತೆಯೇ ಕುಂಬಾರ ಬಮ್ಮಣನು ತಲೆಯನ್ನು ತೊಳೆಯದ ಮತ್ತು ಅನ್ನವನ್ನು ಉಣ್ಣದ ವೀರವ್ರತವನ್ನು ಕೈಗೊಂಡು ಕುಂಭೇಶ್ವರ ದೇವರನ್ನು ಪ್ರತಿಷ್ಠಾಪನೆ ಮಾಡಿ ದೇವರ ಸೇವೆಗೆ ಭೂಮಿದಾನ ಮಾಡಿದ್ದಾನೆ.[295]

ಮೇಲಿನ ನಿದರ್ಶನಗಳು ಸ್ವತಃ ದಾನರೂಪದಲ್ಲಿ ಹಣ, ಭೂಮಿಗಳನ್ನು ವ್ಯಯಿಸಿ ದೇವಾಲಯಗಳನ್ನು ನಿರ್ಮಿಸಿದುದಕ್ಕೆ ಸಾಕ್ಷಿಯಾದರೆ ಇತರರು ಕಟ್ಟಿಸುವ ದೇವಾಲಯಗಳಿಗೆ ದಾನ-ದತ್ತಿಗಳನ್ನು ನೀಡಿದ ಬಗೆಗೂ ಹಲವು ಶಾಸನಗಳಲ್ಲಿ ಉಲ್ಲೇಖಗಳಿವೆ. ಈ ನಿಟ್ಟಿನಲ್ಲಿ ಅಂದಿನ ಜನರ ಸಹಕಾರ ಭಾವನೆಯೂ ವ್ಯಕ್ತವಾಗುತ್ತದೆ. ಸಿಂದಿಗೆಯ ಪ್ರಭು ದಂಡನಾಯಕ ಸುರಿಗೆಯ ಸೋವರಸನು ಶ್ರೀಮೂಲಸ್ಥಾನದ ದೇವರನ್ನು ಪ್ರತಿಷ್ಠಾಪಿಸಿದಾಗ ಆ ದೇವರಿಗೆ ತ್ರಿಭುವನ ಮಲ್ಲನ ಪ್ರೀತಿಯ ಮಗ ಜಯಕರ್ಣದೇವ ಮತ್ತು ಮಹಾಮಂಡಳೇಶ್ವರ ಸಿಂಗರಸರು

ಒಟ್ಟಾಗಿ ಸೇರಿ ಹಲವು ದಾನಗಳನ್ನು ನೀಡಿದ್ದಾರೆ.[296] ಕುಂದಗೋಳದ ಪ್ರಮುಖ ಮಹಾಜನರು, ಗೊರವ ಇತ್ಯಾದಿಗಳು ಸೇರಿ ದೇವಾಲಯ ಮಾಡಿಸಿದ್ದಾರೆ.[297] ಮಾದಿರಾಜ, ಜಿನದೇವ ಮತ್ತು ದಂಡನಾಯಕ ತೈಲಪಯ್ಯ ಮೂವರೂ ಸೇರಿ ದೇಸವಾಣಿಯಲ್ಲಿ ದೇವಾಲಯ ನಿರ್ಮಿಸಿದ್ದಾರೆ.[298] ಹಡವಳ ಕಾವಣ್ಣ, ಕಂಚ, ಕಾಳೆಯ ನಾಯಕ, ಚಿಕ್ಕಟೆಯ ಮತ್ತು ಹೆಗ್ಗಡೆ ಮುಂಜಯ್ಯ ಇವರೆಲ್ಲ ಸೇರಿ ತೆಂಗಿನಕಟ್ಟದಲ್ಲಿ ಹೊಯ್ಸಳೇಶ್ವರ ದೇವಾಲಯವನ್ನು ಮಾಡಿಸಿದ್ದಾರೆ.[299] ತಳುತೊರೆಯ ಮಾರಗವುಡ, ಚಂದಗವುಡ, ಸೇನಬೋವ ಮಸಣಗವುಡ, ಕಾಚಗವುಡ ಇವರು ಏಕಸ್ಥರಾಗಿ ದೇವತಾಸ್ಥಾನವೊಂದನ್ನು ಮಾಡಿಸಿದ್ದಾರೆ.[301] ಹಾಗೆಯೇ ಅಂದಿನ ವ್ಯಾಪಾರಿ ವರ್ಗದವರು ನಾಡಿನ ಆರ್ಥಿಕ ಬೆಳವಣಿಗೆಗೆ, ಅದರ ಸುಸ್ಥಿತಿಗೆ ಕಾರಣರಾಗುತ್ತಿದ್ದಂತೆ ಧಾರ್ಮಿಕ ಕಾರ್ಯಗಳಲ್ಲೂ ಸೇವೆಸಲ್ಲಿಸಲು ವೈಯಕ್ತಿಕಕ್ಕಿಂತಲೂ ಸಾಮೂಹಿಕವಾಗಿ ತೊಡಗಿಕೊಳ್ಳುತ್ತಿದ್ದುದು ತಿಳಿದುಬರುತ್ತದೆ. ಒಬ್ಬ ವ್ಯಾಪಾರಿಯು ದಾನದತ್ತಿ ನೀಡಿ ದೇವಾಲಯ ನಿರ್ಮಾಣ ಮಾಡಿದರೆ, ಉಳಿದವರು ಅದರ ನಿರ್ವಹಣೆಗೆ ದಾನ ಮಾಡುವುದು; ದೇವಾಲಯ ನಿರ್ಮಾಣದ ಸಂದರ್ಭದಲ್ಲಿ ಧನದಾನ ಮಾಡುವುದು ಕಂಡುಬರುತ್ತದೆ.[302]

### ೪.೪.೩ ದೇವಾಲಯಗಳ ಜೀರ್ಣೋದ್ಧಾರ :

ದಾನದ ಉದ್ದೇಶಗಳಲ್ಲಿ ದೇವಾಲಯಗಳ ಜೀರ್ಣೋದ್ಧಾರವೂ ಒಂದು ದೇವಾಲಯದಲ್ಲಿ ಜೀರ್ಣವಾದ ಭಾಗವನ್ನು ಕೆಡವಿ ನವೀಕರಿಸುವುದನ್ನು ಜೀರ್ಣೋದ್ಧಾರ ಎನ್ನುವರು. ಇದನ್ನು ದುರಸ್ತಿಕಾರ್ಯ ಎಂತಲೂ ಕರೆಯುವರು. ಕಟ್ಟಿಸಿದ ದೇವಾಲಯಗಳು ಕಾಲಕ್ರಮೇಣ ಹಳೆಯದಾದಂತೆ ಅದರ ಭಾಗಗಳು ಕಳಚುತ್ತ ಬರುತ್ತವೆ. ಕೆಲವು ಸಾರಿ ದೇವಾಲಯದ ಭಾಗಗಳು ಮಳೆ, ಗಾಳಿ, ಬಿಸಿಲುಗಳಿಗೆ ಸಿಲುಕಿ ಬಿದ್ದು ಹೋಗುವುದು ಸಾಮಾನ್ಯ. ಅಂಥ ಸಂದರ್ಭದಲ್ಲಿ ಜೀರ್ಣವಾದ ದೇವಾಲಯದ ಭಾಗಳನ್ನು ದುರಸ್ತಿಮಾಡಲು ಅಥವಾ ನವೀಕರಿಸಲು ದಾನ ನೀಡಲಾಗಿದೆ. ದೇವಾಲಯವನ್ನು ಹೊಸದಾಗಿ ನಿರ್ಮಿಸಿದ ಸಂದರ್ಭದಲ್ಲಿಯೇ ಮುಂದೆ ಸಂಭವಿಸಬಹುದಾದ ಇಂಥ ಕಾರ್ಯಗಳಿಗೆ ದೇವಾಲಯ ಕಟ್ಟಿಸಿದವರು ವ್ಯವಸ್ಥೆ ಮಾಡುತ್ತಿದ್ದ ಉಲ್ಲೇಖಗಳೂ ಶಾಸನಗಳಲ್ಲಿ ದೊರೆಯುತ್ತವೆ. ಬಹಳಷ್ಟು ದಿನಗಳಾದಾಗ ಧಾರ್ಮಿಕ ವ್ಯವಸ್ಥೆಯ ಕೇಂದ್ರಗಳಾಗಿದ್ದ ದೇವಾಲಯಗಳು ಬಿದ್ದು ನಾಶವಾಗದಂತೆ ಕಾಲಕಾಲಕ್ಕೆ ಅವುಗಳನ್ನು ಜೀರ್ಣೋದ್ಧಾರ ಮಾಡುವ ಕಾರ್ಯ ನಡೆಯುತ್ತಿತ್ತು. ಈ ಕಾರಣಕ್ಕಾಗಿಯೇ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ದಾನ–ದತ್ತಿಗಳನ್ನು ಬಿಡಲಾಗಿದೆ.

ಅಧ್ಯಯನಕ್ಕೆ ಆಯ್ದುಕೊಂಡ ಹದಿನೈದು ನೂರು ದಾನಶಾಸನಗಳ ಪೈಕಿ ಸುಮಾರು ಮುನ್ನೂರಕ್ಕೂ ಹೆಚ್ಚು ಶಾಸನಗಳಲ್ಲಿ ಜೀರ್ಣೋದ್ಧಾರಕ್ಕೆಂದು ದಾನ ಬಿಟ್ಟ ಉಲ್ಲೇಖಗಳಿವೆ. ಕೇವಲ ದೇವಾಲಯಗಳ ಜೀರ್ಣೋದ್ಧಾರಕ್ಕೆಂದು ದಾನ ನೀಡಿದ ಉಲ್ಲೇಖಗಳು ಕಡಿಮೆ. ಆದರೆ ದೇವರ ಅಂಗಭೋಗ, ರಂಗಭೋಗ, ಆಹಾರ ದಾನಕ್ಕೆ, ನಂದಾದೀವಿಗೆ, ವಿದ್ಯಾದಾನಕ್ಕೆಂದು

ದಾನ ನೀಡುವ ಸಂದರ್ಭಗಳಲ್ಲಿ ಜೀರ್ಣೋದ್ಧಾರಕ್ಕೂ ದಾನ ನೀಡಲಾಗಿದೆ. ರೈಕೆಯ ದ್ವೇದಿ ಚಟ್ಟೋಪಾಧ್ಯಾಯ ಸೋಮಯಾಜಿ ಪಂಡಿತರು ತ್ರೈಪುರುಷ ದೇವಾಲಯವನ್ನು ಕಟ್ಟಿಸಿ ಅದರ ಜೀರ್ಣೋದ್ಧಾರಕ್ಕೆ ಮತ್ತಿತರ ಕಾರ್ಯಗಳಿಗೆಂದು ಮೂರು ಗದ್ಯಾಣಗಳನ್ನು ಹಾಗೂ ಮೂರು ಮತ್ತರು ಭೂಮಿಯನ್ನು ದಾನ ನೀಡಿದ್ದಾರೆ.[303] ಭುವನಗಿರಿಯ ದಂಡನಾಯಕನಾಗಿದ್ದ ಬೀರಮರೆಡ್ಡಿ ಮತ್ತು ಬೆಕ್ಕಲ್ಲಿನ ಇಬ್ಬರು ಕರಣರು ಬೆಕ್ಕಲ್ಲಿನ ಬಿಟುಕುಳತಿಳಕ ಜಿನಾಲಯಕ್ಕೆ ದೇವರ ಪ್ರತಿಷ್ಠೆಯ ಕಾಲಕ್ಕೆ ಅದರ ಜೀರ್ಣೋದ್ಧಾರ, ಋಷಿಯರ ಆಹಾರದಾನಕ್ಕೆಂದು ಇಪ್ಪತ್ತು ಮತ್ತರು ತಮ್ಮ ಮಾವಿನ ತೋಟವನ್ನು ದತ್ತಿ ಬಿಟ್ಟಿದ್ದಾರೆ.[304] ರೂವಿಗೆಯನ್ನು ಒಳಗೊಂಡು ೧೮ ಆಗ್ರಹಾರಗಳನ್ನು ಆಳುತ್ತಿದ್ದ ಇಮ್ಮಡಿ ಜಯಸಿಂಹನ ಮಗ ದಾಸರಸನ ಬಿನ್ನಹದ ಮೇರೆಗೆ ಮಹಾಮಂಡಳೇಶ್ವರ ಬಲ್ಲವರಸನು ರೂಗಿಯ ಭಗರೇಶ್ವರ ದೇವಾಲಯದ ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ ಭೂಮಿದಾನ ಬಿಟ್ಟಿದ್ದಾನೆ.[305]

ಮಹಾಮಂಡಳೇಶ್ವರ ಚಿದ್ದನಚೋಳ ಮಹಾರಾಜನು ಆಲಂಪುರದ ಬ್ರಹ್ಮೇಶ್ವರ ದೇವರ ಅಂಗಭೋಗ, ರಂಗಭೋಗ, ಪಂಚೋಪಚಾರ ಪೂಜೆ, ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆಂದು ಪರಮೇಶ್ವರ ದತ್ತಿಯಾಗಿ 'ಎವಗೇರಿ' ಎಂಬ ಗ್ರಾಮವನ್ನು ದತ್ತಿಯಾಗಿ ನೀಡಿದ್ದಾನೆ.[306] ಚಾಲುಕ್ಯದೊರೆ ಭುವನೈಕಮಲ್ಲದೇವ ಮಹಾಮಾತ್ಯ ವಡ್ಡರಾವುಳ ದಂಡನಾಯಕ ನಾರಣಮಯ್ಯ ಎಂಬುವವನು ಆಲಂಪುರದ ಅದೇ ದೇವಾಲಯಕ್ಕೆ ನಾಲ್ಕು ನಾಡಿನ ವಡ್ಡರಾವುಳ (ಮಾರಾಟ ವಸ್ತುಗಳ ಮೇಲಿನ ಸುಂಕ)ವನ್ನು ಪರಮೇಶ್ವರ ದತ್ತಿಯಾಗಿ ನೀಡಿದ್ದಾನೆ.[307] ತ್ರಿಭುವನಮಲ್ಲದೇವನ ಆಂಕಕಾರನಾದ ಮಲ್ಲರಾಜನು ಇದೇ ದೇವಾಲಯಕ್ಕೆ ದೇವರಂಗಭೋಗ, ಖಂಡಸ್ಫುಟಿತ ಜೀರ್ಣೋದ್ಧಾರ, ಸುಧಾಕರ್ಮಾದ್ಯುಪಭೋಗ, ಪಂಚಾಚಾರ ಪೂಜೆಗೆಂದು 'ಅಂಗನವಾಡಿ' ಎಂಬ ಗ್ರಾಮವನ್ನು ದೇವಾಲಯದ ಮಹಾಸ್ಥಾನಾಧಿಪತಿ ಸೋಮೇಶ್ವರರಾಸಿ ಭಟ್ಟಾರಕರ ಕಾಲನ್ನ ತೊಳೆದು ಕೊಟ್ಟಿದ್ದಾನೆ.[308] ಅದೇ ರೀತಿಯಾಗಿ ಈ ಮಲ್ಲರಸನು ಕ್ರಿ.ಶ. ೧೦೮೦, ೧೧೧೦ರಲ್ಲಿ ಆಲಂಪುರದ ಬ್ರಹ್ಮೇಶ್ವರ ದೇವಾಲಯದ ಜೀರ್ಣೋದ್ಧಾರಕ್ಕಾಗಿ ಗ್ರಾಮದಾನ,[309] ಸುಂಕದಾನ[310]ಗಳನ್ನು ಮಾಡಿದ್ದಾನೆ. ಕೊಟಕರ ಪಾಳಕ ಸೋಮಯ್ಯ ಎಂಬುವವನು ಸಿಂಪಿಗೆರೇರಿಯಲ್ಲಿನ ದೇವರಿಗೆ ಜೀರ್ಣೋದ್ಧಾರಕ್ಕೆಂದು ನಿವೇಶನಗಳನ್ನು ದಾನ ನೀಡಿದ್ದಾನೆ.[311]

ಹೀಗೆ ದೇವಾಲಯಗಳ ಜೀರ್ಣೋದ್ಧಾರ ಕಾರ್ಯಗಳ ಉದ್ದೇಶಕ್ಕೆಂದು ಹಲವಾರು ದಾನಗಳನ್ನು ನೀಡಲಾಗಿದೆ.

**೪.೪.೪ ವಿದ್ಯಾಭ್ಯಾಸ ಅಥವಾ ವಿದ್ಯಾದಾನಕ್ಕೆ :**

ವಿದ್ಯೆಯೆನ್ನುವುದು ಆತ್ಮಜ್ಞಾನ ಪಡೆಯಲು ಒಂದು ಮಾರ್ಗ. ಅದು ಯಾರೂ ಅಪಹರಿಸಲಾಗದ ಸಂಪತ್ತು. ಆದಾಗ್ಯೂ ಕೂಡ ಲೌಕಿಕ ಜೀವನದ ಸಂಪೂರ್ಣತೆಗೆ ವಿದ್ಯೆ ಅತೀ ಅವಶ್ಯ. ಓದು, ಬರಹ ಕಲಿತರೆ ಮಾತ್ರ ವಿದ್ಯೆಯಲ್ಲ; ಕಲಿತ ಓದು, ಬರಹದಿಂದ

ಆತ್ಮೋನ್ನತಿಯನ್ನು ಸಾಧಿಸುವುದೇ ವಿದ್ಯೆ. ಅದನ್ನೇ 'ಪರಾವಿದ್ಯೆ' ಎಂದೂ ಕರೆಯುತ್ತಾರೆ. ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ವಿದ್ಯೆಯ ವಿಷಯದಲ್ಲಿ ಉದಾತ್ತ ಭಾವನೆಗಳಿವೆ. ಭಾರತದಲ್ಲಿ ವೇದಗಳ ಕಾಲದಿಂದಲೂ ವಿದ್ಯಾದಾನಕ್ಕೆ ಪ್ರಾಶಸ್ತ್ಯ ನೀಡಿರುವುದು ತಿಳಿದು ಬರುತ್ತದೆ. ಕರ್ನಾಟಕದಲ್ಲಿ ಕದಂಬರು, ಬದಾಮಿ ಚಾಲುಕ್ಯರು, ಗಂಗರು, ರಾಷ್ಟ್ರಕೂಟರು ಮುಂತಾದವರೆಲ್ಲ ವಿದ್ಯಾದಾನಕ್ಕೆ ಸೂಕ್ತ ವ್ಯವಸ್ಥೆಗಳನ್ನು ಮಾಡುತ್ತ ಬಂದಿದ್ದಾರೆ. ಆಧುನಿಕ ಯುಗದಲ್ಲಿ ಶಿಕ್ಷಣ ಒದಗಿಸುವುದು ಸರ್ಕಾರಗಳ ಪ್ರಮುಖ ಕರ್ತವ್ಯಗಳಲ್ಲಿ ಒಂದುಇತ್ತೀಚೆಗೆ ಭಾರತದ ಸಂವಿಧಾನಕ್ಕೆ ತಿದ್ದುಪಡಿ ಮಾಡುವುದರ ಮೂಲಕ ಶಿಕ್ಷಣಪಡೆಯುವುದನ್ನು ಮೂಲಭೂತ ಹಕ್ಕನ್ನಾಗಿಯೂ ಶಿಕ್ಷಣವನ್ನು ಮಕ್ಕಳಿಗೆ ಕೊಡಿಸುವುದು ಪಾಲಕರ ಕರ್ತವ್ಯವೆಂದೂ ಅಳವಡಿಸಲಾಗಿದೆ. ಆದರೆ, ಪ್ರಾಚೀನ ಕಾಲದಲ್ಲಿ ಶಿಕ್ಷಣ ರಾಷ್ಟ್ರೀಯ ಧ್ಯೇಯಗಳಲ್ಲಿ ಸೇರಿರಲಿಲ್ಲ. ಏಕೆಂದರೆ, ಶಿಕ್ಷಣ ಎಲ್ಲರಿಗೂ ಸಿಗುತ್ತಿರಲಿಲ್ಲ. ಆದರೂ ಗುರುಕುಲ ಪದ್ಧತಿಯ ಮೂಲಕ, ಘಟಿಕಾಸ್ಥಾನ, ಬ್ರಹ್ಮಪುರಿ, ಅಗ್ರಹಾರಗಳಲ್ಲಿ ವಿದ್ಯಾಭ್ಯಾಸ ವ್ಯಾಪಕವಾಗಿ ನಡೆಯುತ್ತಿತ್ತು. ರಾಜ್ಯದ ವೆಚ್ಚದಲ್ಲಿ ನಿರ್ದಿಷ್ಟವಾಗಿ ವಿದ್ಯಾಭ್ಯಾಸಕ್ಕೆ ಸ್ಥಾನವಿರಲಿಲ್ಲ. ಹೀಗಾಗಿ ವಿದ್ಯಾಭ್ಯಾಸ ಅಂದಿನ ಜನತೆ ಹಾಗೂ ಪ್ರಭುವರ್ಗದ ಕೃಪಾಕಟಾಕ್ಷದ ಮೇಲೆ ಅವಲಂಬಿತವಾಗಿತ್ತು. ಹಾಗೆಂದು ಜನತೆಯಾಗಲಿ, ಪ್ರಭುವರ್ಗವಾಗಲಿ ವಿದ್ಯಾಭ್ಯಾಸ ಅಥವಾ ಶಿಕ್ಷಣವನ್ನು ಕಡೆಗಣಿಸಿರಲಿಲ್ಲ. ಅಪಾರ ಪ್ರಮಾಣದ ದಾನ ದತ್ತಿಗಳನ್ನು ನೀಡುವುದರ ಮೂಲಕ ಶಿಕ್ಷಣ ಕೇಂದ್ರಗಳನ್ನು, ಉಪಾಧ್ಯಾಯರನ್ನು ಹಾಗೂ ವಿದ್ಯಾರ್ಥಿಗಳನ್ನು ಪೋಷಿಸುತ್ತ ಬಂದಿರುವುದನ್ನು ಕಾಣಬಹುದು.[312]

ಕಲ್ಯಾಣ ಚಾಲುಕ್ಯರ ಅವಧಿಯಲ್ಲಿ ಈ ಹಿಂದೆ ಆಳ್ವಿಕೆ ಮಾಡಿದ ಅರಸರಿಗಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾದಾನಕ್ಕೆ ಪ್ರಾಶಸ್ತ್ಯ ನೀಡಿರುವುದು ತನ್ಮೂಲಕ ವಿದ್ಯಾದಾನಕ್ಕೆ ದಾನ-ದತ್ತಿಗಳನ್ನು ನೀಡಿರುವುದು ಕಂಡು ಬರುತ್ತದೆ. ಹೊಸೂರು,[313] ನಗರ್ತಿ,[314] ಮುಳಗುಂದ,[315] ಕುಕನೂರು[316] ಹೆಗ್ಗೂರು,[317] ಮೋರಿಂಗೇರಿಮ,[318] ಕೋಗಳಿ,[319] ಶಿವಪುರ,[320] ಆಲಂಪುರ,[321] ಗೋಟ್ರ್ಗಾ[322] ಹೀಗೆ ಇನ್ನೂ ಅನೇಕ ಶಾಸನಗಳು ವಿದ್ಯಾದಾನಕ್ಕಾಗಿಯೇ ನೀಡಿದ ದಾನ-ದತ್ತಿಗಳನ್ನು ದಾಖಲಿಸುತ್ತವೆ. ಇದರಿಂದ ವಿದ್ಯಾಭ್ಯಾಸದ ಉದ್ದೇಶಕ್ಕಾಗಿ ದಾನಗಳನ್ನು ನೀಡಿರುವುದು ತಿಳಿದುಬರುತ್ತದೆ. (ಮುಂದಿನ ಅಧ್ಯಾಯದಲ್ಲಿ ವಿದ್ಯಾಭ್ಯಾಸ ಮತ್ತು ದಾನ ಎಂಬ ಶಿರ್ಷಿಕೆಯಡಿ ವಿದ್ಯಾದಾನಕ್ಕೆ ನೀಡಿದ ದಾನಗಳನ್ನು ವಿವರವಾಗಿ ಚರ್ಚಿಸಲಾಗಿದೆ)

**೪.೪.೫ ಅನ್ನದಾನಕ್ಕೆ :**

ಪ್ರಾಚೀನ ಕಾಲದಲ್ಲಿ ಅತಿಥಿ ಅಭ್ಯಾಗತರು, ತಪೋಧನರು, ವಿದ್ಯಾರ್ಥಿಗಳು, ಊಳಿಗದವರಿಗೆ ಅನ್ನದಾನ ಮಾಡುವುದು ಪವಿತ್ರ ಕಾರ್ಯವೆಂದೇ ಭಾವಿಸಲಾಗುತ್ತಿತ್ತು. ಬದುಕಿನ ಸಾರ್ಥಕತೆಗೆ ತಾನು ಸಂಪಾದಿಸಿದ್ದನ್ನು, ಸಮಾಜಕ್ಕೆ ನೀಡುವುದರ ಮೂಲಕ ಸಂತೃಪ್ತಿ ಸಾಧಿಸಬಹುದೆಂಬುದನ್ನು ಹಲವಾರು ದಾರ್ಶನಿಕರು ಹೇಳಿದ್ದಾರೆ. ಅನೇಕ ಪುರಾಣಗಳೂ ಸಹ ಅನ್ನದಾನದ ಮಹತ್ವವನ್ನು

ಬಹುವಾಗಿ ಹೇಳಿವೆ. ತಿಲಧೇನು, ಘೃತಧೇನು, ಜಲಧೇನು, ರಸಧೇನುಗಳೆಂಬ ವಿಧಗಳನ್ನು ಅನ್ನದಾನ ಒಳಗೊಂಡಿದೆ.[323] ಇವು ಆಹಾರ; ತುಪ್ಪ; ನೀರು; ಹಣ್ಣುಗಳ ಸಾರ, ಸತ್ತ್ವ, ತಿರುಳು, ಹಾಲು ಮುಂತಾದ ದ್ರವ ಪದಾರ್ಥಗಳನ್ನು ಕ್ರಮವಾಗಿ ಪ್ರತಿನಿಧಿಸುತ್ತವೆ.

ಕಲ್ಯಾಣದ ಚಾಲುಕ್ಯರ ಪೂರ್ವ ಕಾಲದಿಂದಲೂ ಅನ್ನದಾನಕ್ಕೆ ದಾನದತ್ತಿಗಳನ್ನು ನೀಡಿರುವುದು ಕಂಡುಬರುತ್ತದೆ. ಕಲ್ಯಾಣ ಚಾಲುಕ್ಯರ ಹದಿನೈದು ನೂರು ಶಾಸನಗಳ ಪೈಕಿ ೨೫೦ಕ್ಕೂ ಹೆಚ್ಚು ಶಾಸನಗಳಲ್ಲಿ ಅನ್ನದಾನಕ್ಕೆಂದು ದಾನ ನೀಡಿದ ವಿವರಗಳಿವೆ. ಅಂದಿನ ಕಾಲದಲ್ಲಿ ದೇವಾಲಯಗಳಲ್ಲಿ ದಾನಶಾಲೆಗಳು ಇರುತ್ತಿದ್ದವು. ದಾನಶಾಲೆಗಳಲ್ಲಿ ಬಹುತೇಕವಾಗಿ ನಡೆಯುತ್ತಿದ್ದುದು ಆಹಾರದಾನವೇ. ದೇವಸ್ಥಾನಕ್ಕೆ ಹೊಂದಿಕೊಂಡಂತೆ ಮಠ, ಶಾಲೆಗಳು ಇರುತ್ತಿದ್ದವು. ಅಲ್ಲಿಯ ತಪೋಧನರು, ವಿದ್ಯಾರ್ಥಿಗಳು, ದೇವರ ಸೇವೆಗೆ ಬರುವ ಭಕ್ತರು, ಯಾತ್ರಾರ್ಥಿಗಳಾಗಿ ಬರುವ ದೇಸಿಗ ಪ್ರವಾಸಿಗರು ಇವರೆಲ್ಲರಿಗೂ ಊಟ ವಸತಿಗಳ ವ್ಯವಸ್ಥೆಯಾಗಬೇಕಾಗಿತ್ತು. ಊರಿನ ಪ್ರಮುಖ ಸಾಮಾಜಿಕ ಕೇಂದ್ರವಾದ ದೇವಾಲಯಗಳೇ ಅಂತಹ ಆಹಾರದಾನದ ವ್ಯವಸ್ಥೆ ಮಾಡಬೇಕಿತ್ತು. ದಾನಿಗಳಿಂದ ಪಡೆದದ್ದನ್ನು ದೇವಾಲಯಗಳು ಭಕ್ತರಿಗೆ ವಿನಿಯೋಗಿಸುತ್ತಿದ್ದವು. ಹೀಗಾಗಿ ದೇವಾಲಯಗಳಲ್ಲಿ ಎರಡು ವರ್ಗದ ಜನರಿಗೆ ಆಹಾರದ ವ್ಯವಸ್ಥೆ ಆಗಲೇಬೇಕಾಗಿತ್ತು. ೧. ದೇವಾಲಯಗಳಲ್ಲೆ ಇರುವ ಪೂಜಾ ವರ್ಗದವರು, ಊಳಿಗದವರು, ತಪೋಧನರು ಮತ್ತು ವಿದ್ಯಾರ್ಥಿಗಳು, ೨. ದೇವಾಲಯಕ್ಕೆ ಬಂದು ಹೋಗುವ ಪ್ರವಾಸಿಗರು ಮತ್ತು ಭಕ್ತರು. 'ದಾನಶಾಲೆಯ ಮನೆ'[324] 'ಕಲ್ಲದಾನಶಾಲೆ'[325] ಎಂಬ ಉಲ್ಲೇಖಗಳಿಂದ ದಾನಶಾಲೆಗಳು ಪ್ರತ್ಯೇಕವಾಗಿದ್ದವು ಎಂದು ತಿಳಿಯಬಹುದಾಗಿದೆ.

ಕ್ರಿ.ಶ. ೧೦೯೨ರ ಶಾಸನವೊಂದು 'ದಾನದೊಳನ್ನಮೆ ಸಾರಂ ದೀನಾನಾಥರ್ಗೆ ತುಷ್ಟಿದಾನಂ' ಎನ್ನುತ್ತದೆ.[326] ಕ್ರಿ.ಶ. ೧೧೫೮ರ ಶಾಸನವೊಂದು ಅನ್ನದಾನದ ಕುರಿತು ಹೀಗೆ ಹೇಳಿವೆ

"ಅನ್ನಾತ್ಪರತರಂ ಲೋಕೇನ ಭೂತೋ ನ ಭವಿಷ್ಯತಿ
ಅನ್ನಮೂಲಂ ಭವೇತ್ಸರ್ವಂ ಸರ್ವಮನ್ನೇ ಪ್ರತಿಷ್ಠಿತಂ
ಅನ್ನದಃ ಪ್ರಾಣದಃ ಪ್ರೋಕ್ತ[:] ಪ್ರಾಣದಶ್ಚಾಪಿ ಸರ್ವದಃ
ತಸ್ಮಾದನ್ನ ಪ್ರದಾನೇನ ಸರ್ವದಾನಫಲಂ ಲಭೇತ್"[327]

ಅಂದರೆ ಭೂತಭವಿಷ್ಯಗಳಲ್ಲಿ ಅನ್ನವೇ ಸರ್ವಕ್ಕೂ ಮೂಲ ಅನ್ನದಿಂದಲೇ ಸರ್ವ ಪ್ರತಿಷ್ಠೆ ಅನ್ನದಾನದಿಂದಲೇ ಸರ್ವದಾನ ಫಲಗಳು ಲಭಿಸುತ್ತವೆ. ಇದರಿಂದ ಅಂದಿನ ಜನರಲ್ಲಿದ್ದ ಅನ್ನದಾನದ ಭಾವನೆ ವ್ಯಕ್ತವಾಗುತ್ತದೆ. 'ದಾನಂಗಳೊಳಗೆ ವಿದ್ಯಾದಾನಮೂಮಾಹಾರ ದಾನಮುಂ ಮೇಲೆಂದು' ಜ್ಞಾನಶಕ್ತಿ ಪಂಡಿತರು ಭೂಮಿದಾನವನ್ನು ಮಾಡಿದ್ದಾರೆ.[328] ನಾಕರನು 'ಬಡಪಟ್ಟರ್ಗೆ ತಪಸ್ವಿಗಳಿಗೆ ತಿರಿವರ್ಗ್ಗಾಹಾರ ದಾನಂಗಳಂ ನಡುವಂತಾಗಿ' ನಾಗೇಶ್ವರ ದೇವರನ್ನು ಪತಿಷ್ಠೆ ಮಾಡಿದ ದಿನವೇ ಅನ್ನದಾನಕ್ಕೆ ಹಲವು ವ್ಯವಸ್ಥೆಗಳನ್ನು ಮಾಡಿದ್ದಾನೆ.[330] ದೇಸಿಗ ಪ್ರವಾಸಿಗರಾಹಾರ ಸತ್ರಕ್ಕೆ ದೇವಸಲುಂ ಬ್ರಾಹ್ಮಣರುಣ್ಬಂತಾಗಿ' ದಾನ ನೀಡಿರುವುದೇ ಅಲ್ಲದೆ ಸತ್ರಕ್ಕೆ ಒಂದು

ಮನೆಯನ್ನು ನೀಡಿದುದನ್ನು ಒಂದು ಶಾಸನವು ದಾಖಲಿಸಿದೆ.[331] 'ಸ್ವಾಮಿಯಾತ್ರೆಗೆ ಬಂದ ಕಪ್ಪಡಿಗಳ ಸತ್ರಕ್ಕೆ'[332] 'ಅತಿಥಿ ಆಭ್ಯಾಗತರ ಆಹಾರದಾನಕ್ಕಂ',[333] 'ದೇವರ ಗ್ರಾಸನವಾಗಿ ಪ್ರವಾಸಿಗ ಬ್ರಾಹ್ಮಣರಯ್ವರ ಗ್ರಾಸಕ್ಕಂ......ದೇವರ ಗ್ರಾಸನಯಿಪ್ಪತ್ತು ಮನುಷ್ಯ ಪ್ರವಾಸಿಗ ಬ್ರಾಹ್ಮಣರ ಯೋಜನಕ್ಕಂ',[334] 'ಅಭ್ಯಾಗತ ತಪೋಧನರಾಹಾರ ದಾನಕ್ಕೆ',[335] 'ಬಂದು ಹೋದ ರಿಷಿಯರಾಹಾರ ದಾನಕ್ಕಂ',[336] ಪೂಜಕಾದಿ ದೇವ ಪರಿಚಾರಕ ಜೀವನಕ್ಕಂ ಬ್ರಾಹ್ಮಣ ಪರಿಬ್ರಾಜಕ ದೇಶಾಂತರಾಶ್ರತಾಹಾರ ದಾನಕ್ಕೆ',[337] ಹೀಗೆ ದೇವಸ್ಥಾನಕ್ಕೆ ಬರುತ್ತಿದ್ದ ಅತಿಥಿ, ಅಭ್ಯಾಗತ, ತಪೋಧನ, ಪ್ರವಾಸಿಗರು, ವಿದ್ಯಾರ್ಥಿಗಳ ಆಹಾರದಾನಕ್ಕೆಂದು ಭೂಮಿ, ಹಣ, ನಿವೇಶನಗಳನ್ನು ದಾನ ನೀಡಿದ ವಿವರಗಳನ್ನು ಅನೇಕ ಶಾಸನಗಳು ಉಲ್ಲೇಖಿಸುತ್ತವೆ.

ಕೆಲವು ದಾನಶಾಸನಗಳು ಕೇವಲ ಅನ್ನದಾನಕ್ಕೆ ನೀಡಿದ ದಾನಗಳನ್ನಷ್ಟೇ ಹೇಳುವುದಿಲ್ಲ ಅದರ ಜೊತೆಗೆ ಎಷ್ಟು ಜನಕ್ಕೆ ಅದು ಸಲ್ಲಬೇಕು ಮತ್ತು ಎಷ್ಟು ಪ್ರಮಾಣದ ಆಹಾರ ನೀಡಬೇಕೆಂಬುದನ್ನು ಹೇಳುತ್ತವೆ. ಚಟ್ನಹಳ್ಳಿ ಶಾಸನದ[338] ಪ್ರಕಾರ ಮಹಾಮಂಡಳೇಶ್ವರ ವೀರಪಾಂಡ್ಯ ದೇವನು ಪುಲ್ಯಳ್ಳೂರ ಶಿವಬ್ರಾಹ್ಮಣನುಮಯ್ಯ ಕೊಂಡಭಟ್ಟರಿಗೆ ಸತ್ರಕ್ಕೆಂದು ೧೫ ಗದ್ದೆ ನೀರಾವರಿ ಭೂಮಿಯನ್ನು ದಾನಬಿಡುತ್ತಾನೆ. ಸತ್ರದಲ್ಲಿ ಊಟ ಮಾಡುವ ವೇದಪಾರಂಗತರಾದ ೧೬ಜನ ಮಾನಸ ಬ್ರಾಹ್ಮಣರಿಗೆ ಪ್ರತಿನಿತ್ಯ.

| | | |
|---|---|---|
| ಅಕ್ಕಿ | – | ೫ ಮಾ |
| ಹೆಸರು | – | ೧ ಮಾ |
| ತುಪ್ಪ ಸೊಳಸಿಗೆ | – | ೨ |
| ಮೊಸರು | – | ೧ ಬ |
| ಮಜ್ಜಿಗೆ | – | ೧ ಬ |
| ಅಡಕೆ | – | ೨ |
| ಎಲೆ | – | ೪ |

(ಇಲ್ಲಿ 'ಮಾ' ಎಂದರೆ "ಮಾನ'ವೆಂದು 'ಬ'ಎಂದರೆ ಬಟ್ಟಲು ಎಂದು ಅರ್ಥೈಸಬಹುದು)

ಹೀಗೆ ಪ್ರತಿನಿತ್ಯ ಹದಿನಾರು ಬ್ರಾಹ್ಮಣರಿಗೆ ಪಡಿಯು ಸಲ್ಲಬೇಕೆಂದು ಹೇಳಲಾಗಿದೆ. ಇದರಿಂದ ಅಂದಿನ ಜನ ಅನ್ನದಾನಕ್ಕೆ ದತ್ತಿ ನೀಡುವಾಗ ಯಾವುದಕ್ಕೆ ಎಷ್ಟೆಷ್ಟು ಸಲ್ಲಬೇಕು ಮತ್ತು ನೀಡಿದ ದಾನವನ್ನು ಹೇಗೆ ಬಳಸಿಕೊಳ್ಳಬೇಕೆಂಬುದನ್ನು ನಿರ್ಧರಿಸಿ ದಾನ ನೀಡುತ್ತಿದ್ದರೆಂಬುದು ತಿಳಿದು ಬರುತ್ತದೆ. ಹೀಗೆ ಅನ್ನದಾನ ನೀಡಲೆಂಬ ಉದ್ದೇಶಕ್ಕಾಗಿಯೂ ದಾನ ದತ್ತಿಗಳನ್ನು ನೀಡುತ್ತಿದ್ದರೆಂಬುದನ್ನು ಮೇಲಿನ ವಿವರದಿಂದ ಅರಿಯಬಹುದು.

೪.೪.೬ ವ್ಯಕ್ತಿಗಳಿಗೆ ದಾನ – ಬ್ರಾಹ್ಮಣರು, ಪಂಡಿತರು, ಅಧ್ಯಾಪಕರು, ದೇವಾಲಯದ ಪರಿವಾರದವರು ಮುಂತಾದವರಿಗೆ :

ಕಲ್ಯಾಣ ಚಾಲುಕ್ಯರ ಅವಧಿಯಲ್ಲಿ ಹಲವು ವ್ಯಕ್ತಿಗಳಿಗೂ ದಾನ–ದತ್ತಿಗಳನ್ನು ನೀಡಲಾಗಿದೆ. ಸಾಮಾನ್ಯವಾಗಿ ಬ್ರಾಹ್ಮಣರಿಗಂತೂ ದಾನ–ದತ್ತಿಗಳನ್ನು ಸ್ವೀಕರಿಸುವುದೂ ಒಂದು ಕರ್ತವ್ಯವಾಗಿತ್ತು. ಈಗಾಗಲೇ ಈ ವಿಷಯದ ಬಗೆಗೆ ಚರ್ಚಿಸಲಾಗಿದೆ. ಅಧ್ಯಯನ, ಅಧ್ಯಾಪನಗಳ ಜೊತೆಗೆ ದಾನವನ್ನು ಧಾರಣಮಾಡುವುದು ಬ್ರಾಹ್ಮಣರ ಕರ್ತವ್ಯವಾಗಿತ್ತು. ಅಂತೆಯೇ ಉಳಿದ ವರ್ಣದವರಿಗೆ ಸಮಾಜ ಉಪಯೋಗಿ ಕಾರ್ಯಗಳಿಗೆ ಉಚಿತ ಕಾಣಿಕೆ ಸಲ್ಲಿಸುವುದು ಪ್ರಮುಖ ಕರ್ತವ್ಯವಾಗಿತ್ತು ಹೀಗಾಗಿ ದೇವಾಲಯಗಳ ಜೊತೆ ಜೊತೆಗೆ ಬ್ರಾಹ್ಮಣರಿಗೆ, ಪಂಡಿತರಿಗೆ ದಾನಗಳನ್ನು ನೀಡಲಾಗಿದೆ. ವಿದ್ಯಾದಾನ ಮಾಡುತ್ತಿದ್ದ ಆಚಾರ್ಯರಿಗೆ, ಅಧ್ಯಾಪಕರ; ದೇವಾಲಯದಲ್ಲಿ ದೇವರ ಸೇವೆ ಮಾಡುತ್ತಿದ್ದ ಪೂಜಾರಿಗಳಿಗೆ, ದೇವಾಲಯದ ಜೀರ್ಣೋದ್ಧಾರ, ಶಿಲ್ಪಕಾರ್ಯಗಳನ್ನು ಮಾಡುತ್ತಿದ್ದ ಶಿಲ್ಪಿಗಳಿಗೂ ಶಾಸನಗಳನ್ನು ಖಂಡರಿಸುವ ಖಂಡರಣಕಾರರಿಗೂ ರಂಗಭೋಗದ ಸೇವೆ ಸಲಲ್ಲಿಸುತ್ತಿದ್ದ ಪಾತ್ರದವರು, ಹಾಡುಗಾರರು, ಸಂಗೀತಗಾರರು, ಕಲಾಕಾರರಿಗೂ ದಾನಗಳನ್ನು ನೀಡಲಾಗಿದೆ. ವಿವಿಧ ರೀತಿಯ ಕೆಲಸಗಳನ್ನು ನಿರ್ವಹಿಸಿದ ಅಕ್ಕಸಾಲಿಗ, ಕಂಚಗಾರ, ಕಮ್ಮಾರ, ಕಲ್ಲುಕಟಿಗ, ತಳವಾರ, ಬಡಗಿ, ಕ್ಷೌರಿಕ, ಜೇಡರು ಮುಂತಾದ ಕುಶಲಕರ್ಮಿಗಳಿಗೂ ದಾನ–ದತ್ತಿಗಳನ್ನು ನೀಡಲಾಗಿದೆ.

**ಬ್ರಾಹ್ಮಣರಿಗೆ ದಾನ :**

ವ್ಯಕ್ತಿಗಳಿಗೆ ನೀಡಿದ ದಾನಗಳಲ್ಲಿ ಬಹುಸಂಖ್ಯೆಯ ದಾನಗಳು ಬ್ರಾಹ್ಮಣರಿಗೇ ನೀಡಲ್ಪಟ್ಟಿವೆ. ವಿದ್ವಾಂಸರಾದ ಬ್ರಾಹ್ಮಣರಿಗೆ ಬ್ರಹ್ಮದೇಯ ದಾನಗಳನ್ನು ನೀಡಿ ಅವರ ಹರಕೆಯನ್ನು ಪಡೆಯುವುದರಿಂದ ತಮ್ಮನ್ನು ರಕ್ಷಿಸಿಕೊಳ್ಳಬಹುದು. ಅವರ ಹರಕೆ ತಮ್ಮನ್ನು ಕಾಪಾಡುತ್ತದೆ ಎಂದು ಜನ ನಂಬಿದ್ದರು. ಆದ್ದರಿಂದ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಅನೇಕ ಅಗ್ರಹಾರಗಳನ್ನು ನಿರ್ಮಿಸಿದ್ದಲ್ಲದೆ, ವ್ಯಕ್ತಿಗತವಾಗಿ ಕೂಡ ಬೇಕಾದಷ್ಟು ದಾನಗಳನ್ನು ನೀಡಿದರು. ಸಾಮಾನ್ಯವಾಗಿ ದೇವಾಲಯಗಳ ಸ್ಥಾನಪತಿ ಮುಖ್ಯ ಆಚಾರ್ಯರಾಗಿದ್ದುದು ಬ್ರಾಹ್ಮಣರೇ ದೇವಲಯಗಳಿಗೆ ಸಲ್ಲಿಸಿದ ದಾನಗಳನ್ನು ಸ್ಥಾನಪತಿಗಳ ಇಲ್ಲವೇ ದೇವಾಲಯ ಪ್ರಮುಖ ಆಚಾರ್ಯರ ಪಾದವನ್ನು ತೊಳೆದು ಅವರ ಕೈಯ್ಯಲ್ಲಿಯೇ ಕೊಡುತ್ತಿದ್ದುದು ವಾಡಿಕೆ. ಅದರ ಜೊತೆಗೆ ಬ್ರಾಹ್ಮಣರ ಜೀವಿತಕ್ಕೆಂದು ದಾನಗಳನ್ನು ವೈಯಕ್ತಿಕವಾಗಿ ನೀಡಲಾಗುತ್ತಿತ್ತು. ಅಂಥ ಕೆಲವು ನಿದರ್ಶನಗಳನ್ನು ಇಲ್ಲಿ ನೋಡಬಹುದು.

ಇಮ್ಮಡಿ ತೈಲಪನ ಒಂದನೇ ವರ್ಷದ ಆಳ್ವಿಕೆಯ ಅವಧಿಯಲ್ಲಿ ಬ್ರಹ್ಮಾಂಡ ಕ್ರತು ಯಜ್ಞವನ್ನು ಮಾಡುತ್ತಾನೆ. ಯಜ್ಞವನ್ನು 'ಯಥೋಕ್ತಿಯಂ ಪರಿಪೂರ್ಣಂ' ಮಾಡಿದ ಕೈಕೆಯ ದ್ವೇದಿ ಚಟ್ಟೋಪಾಧ್ಯಾಯ ಸೋಮಯಾಜಿ ಬ್ರಾಹ್ಮಣೋತ್ತಮನಿಗೆ ಇಮ್ಮಡಿ ತೈಲಪನು

ಮೊಂದೆಯನೂ (ಮೊದೆಯನೂರು)ನ್ನು ಸರ್ವನಮಸ್ಯವಾಗಿ ದಾನ ನೀಡಿದ್ದಾನೆ[339]. ಕರಡಿಕಲ್ಲಿನಲ್ಲಿ ಪರಾಯಣ ಸಂಪನ್ನರಾಗಿದ್ದ ಜೋಗ ಸಿವಾಚಾರ್ಯರಿಗೆ ಜೆಡೆಯ ಸಂಕರದೇವರ ಪೂಜಾನಿಮಿತ್ಯ ಇಪ್ಪತ್ತು ಮತ್ತರು ಕರಿಯನೆಲವನ್ನು ಕೊಂಡು ದಾನ ಬಿಟ್ಟಿದ್ದಾರೆ[340].

ಒಂದನೆಯ ಜಗದೇಕ ಮಲ್ಲನ ದಂಡನಾಯಕನೊಬ್ಬ ಅಗ್ರಹಾರ ಬೈಳಿ ನೆಗೆಂಯಾರಿನ ೧೨ ಬ್ರಾಹ್ಮಣರಿಗೆ ಭೂಮಿದಾನ ಮಾಡಿದ್ದಾನೆ.[341] ಇಮ್ಮಡಿ ಜಯಸಿಂಹನ ರಾಣಿ ಸೋಮಲದೇವಿಯ ವತಗಿರಿಯ ನೆಲೆವೀಡಿನಲ್ಲಿದ್ದಾಗ ದಿಗ್ಗೆಯ ಮಧುಸೂದನ ಬಟ್ಟರಿಗೆ ೧೦೦ ಮತ್ತರು ಭೂಮಿ, ೧೦ ಕೈಯ್ಯಳತೆಯ ನಿವೇಶನವನ್ನು ದಾನ ಬಿಟ್ಟಿದ್ದಾಳೆ.[342]

ಇರಿವ ಬೆಡಂಗನ ಅಂಗರಕ್ಷಕ ತಂತ್ರಪಾಲ ಅರಸಪ್ಪಯ್ಯ ಎಂಬುವವನು ವಾಜಿಕುಲದ ಕೇಸನಮಯ್ಯ ಎಂಬ ಬ್ರಾಹ್ಮಣನಿಗೆ ೪೦ ಮತ್ತರು ಭೂಮಿಯನ್ನು ದತ್ತಿಯಾಗಿ ನೀಡಿದ್ದಾನೆ.[343] ಇಮ್ಮಡಿ ಜಗದೇಕಮಲ್ಲನು ಪೊಟ್ಟಳಕೆರೆಯ ಬೀಡಿನಿಲ್ಲಿದ್ದಾಗ ಸಗರನಾಡ ಬಳಿಯ ದೋರನ ಹಳ್ಳಿಯ ೧೦೦೦ ಮತ್ತರು ಭೂಮಿಯನ್ನು ಅಲ್ಲಿನ ಧ್ಯಾನ ಧಾರಣ ಅನುಷ್ಠಾನ ಪರಾಯಣ ಸಮಾಧಿ ಸಂಪನ್ನರಾದ ಶ್ರೀ ಮನ್ನೀಲ ಭಟ್ಟಾರಕರಿಗೆ ಧಾರಾಪೂರ್ವಕವಾಗಿ ದಾನ ನೀಡಿದ್ದಾನೆ.[344] ಪೊತ್ತು ಪಾಳನ್ನು ಆಳುತ್ತಿದ್ದ ಮಣಿರನಾಯಕ ಎಂಬುವವನು ಪುಷ್ಪಗಿರಿಯ ನಾಗೇಶ್ವರ ದೇವರ ಪ್ರತಿಪಾಲಕನಾಗಿದ್ದ ವಿಠಲಜೀಯ ಎಂಬುವವನಿನಗೆ ೯ ಮತ್ತರು ಹೊಲವನ್ನು ದಾನ ಮಾಡಿದ್ದಾನೆ.[345] ಕಲ್ಯಾಣದ ಪಾರಾವಾರಗರಾದ ಸಕಳ ಪ್ರಕಾಶಕ ಭಟ್ಟಾರಕರು ಚಕ್ರವರ್ತಿ ತ್ರಿಭುವನಮಲ್ಲನಿಗೆ ಶ್ರೇಯಸ್ಸಾಗಲಿ ಎಂದು ದೈವಜ್ಞರಾದ ಆದಿತ್ಯ ಭಟ್ಟೋಪಾಧ್ಯಾಯ ವಿದ್ದಣ ಭಟ್ಟರಿಗೆ ತ್ರೈಲೋಕ್ಯಮಲ್ಲ ಕೇಶವಪುರದ ಜ್ಯೋತಿ ವೃತ್ತಿಯನ್ನು[346] ಜ್ಯೋತಿಶ್ಯಾಸ್ತ್ರ ಪರೀಕ್ಷಾ ಪೂರ್ವಕವಾಗಿ ೧ ಮತ್ತರು ಗದ್ದೆಯನ್ನು ದಾನ ಮಾಡಿದ್ದಾರೆ[347]. ಇಮ್ಮುಡಿ ಜಗದೇಕ ಮಲ್ಲನು ಇನ್ನೂ ಕುಮಾರ ವೃತ್ತಿಯಲ್ಲಿದ್ದಾಗ ತ್ರಿಭುವನ ಮಲ್ಲನ ಆಳ್ವಿಕೆಯಲ್ಲಿ ನೆಖೊಂಡದ ರಾಮೇಶ್ವರ ದೇವರಿಗೆ ಹಾಗೂ ಅಲ್ಲಿನ ಬ್ರಾಹ್ಮಣರ ಆಹಾರಕ್ಕೆಂದು ಕಂದೂರು ೨೦೦ರ ಬಳಿಯ ಬೂದೂಪೂರ ಗ್ರಾಮವನ್ನು ದತ್ತಿಯಾಗಿ ನೀಡಿದ್ದಾನೆ[348]. ಕಾಂಚಿಪುರವರೇಶ್ವರ ಮಹಾಮಂಡಳೇಶ್ವರ ಉದಯಾದಿತ್ಯನು ಬ್ರಾಹ್ಮಣ ಸೆಣಂಗಿಯರಾದ ಕ್ರಿಷ್ಣಯ್ಯ ಮತ್ತು ತುಪ್ಪದ ದೇವಯ್ಯರಿಗೆ ಸಲ್ವಡಿ ೧೨ರ ಕಂಪಣ ಒರ್ವಾಯವನ್ನು ದಾನವಾಗಿ ನೀಡಿದ್ದಾನೆ.[349]

ಚಕ್ರವರ್ತಿ ತ್ರೈಲೋಕ್ಯಮಲ್ಲನ ಕಾಲದಲ್ಲಿ ಸೇನಾಪತಿ ನಾಗವರ್ಮನೆಂಬುವವನು ಸಕ್ಕರಗೆ-೮೦ ರೊಳಗಣ ತಡಕಲ್ಲ ಪ್ರಭುತ್ವವನ್ನು ಪಡೆದಾಗ ಅಲ್ಲಿ ಅನೇಕ ದೇವಾಲಯಗಳನ್ನು ಕಟ್ಟಿಸಿ ಅಲ್ಲಿನ ೫೨ ಜನ ಬ್ರಾಹ್ಮಣರಿಗೆ ಒಬ್ಬೊಬ್ಬರಿಗೆ ೧೦ ಮತ್ತರು ಭೂಮಿ, ಒಂದೊಂದು ಮನೆಗಳನ್ನು ದಾನ ನೀಡಿದ್ದಾನೆ. ಒಟ್ಟು ೫೨ ಜನ ಬ್ರಾಹ್ಮಣರಿಗೆ ೫೨೦ ಮತ್ತರು ಭೂಮಿ, ೫೨ ಮನೆಗಳನ್ನು ದಾನ ನೀಡಿದ್ದಾನೆ.[350]

ಮಹಾ ಪ್ರಧಾನ, ಪ್ರಚಂಡ ದಂಡನಾಯಕ ಕನ್ನಪಯ್ಯನು ಯುವರಾಜ ತ್ರಿಭುನವಲ್ಲದೇವನ ಕೈಯ್ಯಿಂದ ಅಗ್ರಹಾರ 'ದೀರ್ಘ್ವಿಗೆ'ಯನ್ನು ಪರಮೇಶ್ವರ ದತ್ತಿಯಾಗಿ ಪಡೆದು ಚತುರ್ವೇದ ಪಾರಾಯಣರು, ಶಾಸ್ತ್ರ ವಿಶಾರದರು ಆಗಿದ್ದ ೨೦೨ ದ್ವಿಜೋತ್ತಮರಿಗೆ "ಸರ್ವನಮಶ್ಯ ಅಚಂದ್ರಾರ್ಕವಾಗಿ ದತ್ತಿ ಕೊಟ್ಟನು.[351] ತ್ರಿಭುವನ ಮಲ್ಲನ ಪಟ್ಟಬಂಧವಾದ ನಿಮಿತ್ತ ಶ್ರೀ ಮನ್ಮಹೇಶ್ವರ ರಾಶಿ ಪಣ್ಡಿತರಿಗೆ ಮಾಣಿಕೇಶ್ವರದ ಕೋಲಿನಿಂದ ಅಳೆದ ೨೦೦ ಮತ್ತರು ಭೂಮಿ, ಆಯ್ಯುಂಬಾಡದ ನಾಲ್ವತ್ತಯ್ದು ಗೇಣ ಘಳೆಯೋಳು ಅಳೆದ ಒಂದು ಮತ್ತರು ತೋಟವನ್ನು ದಾನ ನೀಡಿದ್ದಾನೆ.[352] ಹೀಗೆ ಅಂಕಲಗಿ,[353] ಸೇಡಂ,[354] ಲಕ್ಷ್ಮೇಶ್ವರ,[355] ಗಬ್ಬೂರು,[356] ನಾಗಾಯಿ,[357] ಅರಸಿಬೀದಿ,[358] ಹೂವಿನ ಹಡಗಲಿ, [359] ಹೊಳಗುಂದಿ,[360]ಯ ಶಾಸನಗಳು ಅನೇಕ ವಿಧಗಳಲ್ಲಿ ಬ್ರಾಹ್ಮಣರಿಗೆ ಬ್ರಾಹ್ಮಣ ಪಂಡಿತರಿಗೆ ದಾನ ನೀಡಿದ ಉಲ್ಲೇಖಗಳನ್ನು ಹೊಂದಿವೆ.

ವ್ಯಕ್ತಿಗಳಿಗೆ ನೀಡಿದ ದಾನಗಳಲ್ಲಿ ಬಹುಪಾಲು ಸಂಖ್ಯೆಯ ದಾನಗಳು ಬ್ರಾಹ್ಮಣರಿಗೆ ಸಲ್ಲಿವೆ. ದಾನ ನೀಡಿದ ಪ್ರಮಾಣದಲ್ಲಿಯೂ ಸಹ ಬ್ರಾಹ್ಮಣರಿಗೆ ನೀಡಿದ ದಾನಗಳದ್ದೇ ಮೇಲುಗೈ. ಕುಶಲಕರ್ಮಿಗಳಿಗೆ ಅಥವಾ ಇನ್ನಾವುದೇ ರೀತಿಯ ವ್ಯಕ್ತಿಗಳಿಗೆ ಐದು, ಹತ್ತು, ಇಪ್ಪತ್ತು, ಮತ್ತರು ಭೂಮಿಯನ್ನು ದಾನವಾಗಿ ಕೊಟ್ಟಿದ್ದರೆ, ಬ್ರಾಹ್ಮಣೋತ್ತಮ ಪಂಡಿತರಿಗೆ ಹಾಗೂ ಆಚಾರ್ಯರಿಗೆ ಇಡಿಯಾಗಿ ಗ್ರಾಮದಾನವನ್ನು ಕೊಟ್ಟ ಉಲ್ಲೇಖಗಳು ಇಲ್ಲಿಯ ಶಾಸನಗಳಲ್ಲಿವೆ.

ಕೆಲವು ಸಂದರ್ಭಗಳಲ್ಲಿ ದೇವಾಲಯಗಳಿಗೆ ಹಾಗೂ ಅಧಿಕಾರಿಗಳಿಗೆ ಗ್ರಾಮದಾನವನ್ನು ಮಾಡಿದ್ದನ್ನು ಬಿಟ್ಟರೆ ಬ್ರಾಹ್ಮಣರಿಗೆ ಗ್ರಾಮದಾನ ಮಾಡಿದ್ದು ಸಾಮಾನ್ಯವಾಗಿ ಕಂಡು ಬರುತ್ತದೆ.

**ಅಧ್ಯಾಪಕರಿಗೆ ದಾನ :**

ಪ್ರಾಚಿನ ಕಾಲದಲ್ಲಿ ವಿದ್ಯಾದಾನವು ಒಂದು ಪವಿತ್ರ ಕಾರ್ಯವಾಗಿತ್ತು. ಘಟಿಕಾಸ್ಥಾನಗಳು, ಬ್ರಹ್ಮಪುರಿಗಳು, ಅಗ್ರಹಾರಗಳಲ್ಲಿ ವಿದ್ಯಾದಾನ ನಿರಂತರವಾಗಿ ನಡೆಯುತ್ತಿತ್ತು. ವಿದ್ಯಾದಾನವನ್ನು ನೀಡಲು ಹಲವು ವ್ಯವಸ್ಥೆಗಳು ಅವಶ್ಯಕತೆಯಿತ್ತು ಅವುಗಳಲ್ಲಿ ಬಹುಮುಖ್ಯವಾದದ್ದು ಎಂದರೆ ವಿದ್ಯಾದಾನವನ್ನು ಮಾಡುವ ಅಧ್ಯಾಪಕರು ಅಥವಾ ವಿದ್ಯಾಗುರುಗಳು. ಕರ್ನಾಟಕದಲ್ಲಿ ಅನೇಕ ಮಹಾನ್ ವಿದ್ವಾಂಸರು ವಿದ್ಯಾದಾನಕ್ಕೆ ಬದ್ದರಾಗಿದ್ದರು. ವಿದ್ಯಾಕೇಂದ್ರಗಳಲ್ಲಿ ವೈವಿಧ್ಯಮಯವಾದ ವಿಷಯಗಳನ್ನು ಬೋಧಿಸಲಾಗುತ್ತಿತ್ತು. ಈ ವಿಷಯಗಳನ್ನು ಬೋಧಿಸುತ್ತಿದ್ದ ಗುರುಗಳು ಅಪಾರ ವಿದ್ವತ್ತನ್ನು, ಘನತೆಯನ್ನು ಹೊಂದಿದ್ದರು. ಕಲ್ಯಾಣ ಚಾಲುಕ್ಯರ ಅವಧಿಯಲ್ಲಿ ವಿದ್ಯಾದಾನ ನೀಡುತ್ತಿದ್ದ ಅನೇಕ ಶಿಕ್ಷಣ ಕೇಂದ್ರಗಳಿದ್ದು; ಅಲ್ಲಿ ಯಾವ ಯಾವ ವಿಷಯಗಳನ್ನು ಬೋಧಿಸಲಾಗುತ್ತಿತ್ತು ? ಮತ್ತು ಅಲ್ಲಿದ್ದ ಅಧ್ಯಾಪಕರು ಎಂಥವರಾಗಿದ್ದರು ? ಎಂಬುದರ ಮೇಲೆ ಶಾಸನವೊಂದು ಬೆಳಕು ಚೆಲ್ಲುತ್ತದೆ.[361] ಆ ಕುರಿತ ಉಲ್ಲೇಖ ಹೀಗಿದೆ.

"ಯಮ ನಿಯಮ ಗುಣೋಪೇತರ್, ಬ್ರಹ್ಮೇಂದ್ರ ಚಂದ್ರಯಮಾಗ್ನಿ ಪ್ರತಿಷ್ಠಿತ ಪಂಚಮಹಾಲಿಂಗ ಸನ್ನಿಹಿತ ಪುಣ್ಯ ತೀರ್ಥೋದಕವಾಗಹನ ಪವಿತ್ರೀಕೃತ ಗಾತ್ರರ್, ಧರಾಮರ ಸತ್ಪಾತ್ರರ್, ಮಯೂರಯಾರವರ್ಮ ನೃಪಸ್ಯಾಷ್ಟಾದಶಾಶ್ವಮೇಧಾಧ್ವರ ದಕ್ಷಿಣೋಪಲಬ್ಧ ಚತುಶ್ಚತ್ವಾರಿಂಶದುತ್ತರ ಶತಗ್ರಾಮಾಧಿಷ್ಠಾಯಕರ್, ಸಂದಿಗ್ಧ ವಿಮಲಧರ್ಮ ನಿರ್ಣಾಯಕರ್, ಅನೇಕ ಯಜ್ಞಾವಭೃಥ ಪುಣ್ಯಾಂಬು ನಿಯತಾಭಿಷಿಕ್ತಾರ್ದ್ರ ಮೂರ್ಧಜರ್, ಮಹಾವೀರ ವೇದಿ ಧ್ವಜರ್, ಬ್ರಹ್ಮರಾಜಸಭಾ ಪೂಜಾಗ್ರ ಗ್ರಾಹಿಗಳ್, ಆಶ್ರಿತ ಜನ ಮನೋರಂಜಿತ ಫಲದಾಯಿಗಳು, ವೇದ ವೇದಾಂಗೋಪಾಂಗ, ಮೀಮಾಂಸಾದಿಶಾಸ್ತ್ರ, ಷಟ್ತರ್ಕಸ್ಮೃತಿ, ಪುರಾಣ, ಕಾವ್ಯ, ನಾಟಕ ವಿಷಯ ಸರೋಜಿನಿ ಭಾಸ್ಕರರ್, ಬುಧಹೃದಯ ಕುಮುದವನ ಮುಕುಳ ನಿಕರ ವಿಕಸಿತ ಸುಧಾಕರರ್, ದಂಭ ದರ್ಪ ಕ್ರೋಧ ಲೋಭ ಮದ ಮಾತ್ಸರ್ಯ ದುರ್ವಿಷಯ ದುರಿತಗುಣದೂರರ್".

ಎಂದು ಮುಂತಾಗಿ ತಾಳಗುಂದ ಅಗ್ರಹಾರದ ವಿದ್ವಾಂಸರ ಹಿರಿಮೆಯನ್ನು ವರ್ಣಿಸುವ ಈ ಶಾಸನ ತ್ರಿಭುವನ ಮಲ್ಲದೇವ ಆರನೆಯ ವಿಕ್ರಮಾದಿತ್ಯನದು. ಇಲ್ಲಿ ಕೇವಲ ಅಗ್ರಹಾರದ ವಿದ್ವಾಂಸರ ವರ್ಣನೆಯನ್ನಷ್ಟೇ ಮಾಡದೆ ಅವರು ಬೋಧಿಸುತ್ತಿದ್ದ ವಿಷಯಗಳನ್ನು ಹಾಗೂ ಅವರ ಜೀವನ ನಿರ್ವಹಣೆಗೆ ನೀಡಲಾದ ದಾನ-ದತ್ತಿಗಳನ್ನೂ ಹೇಳಲಾಗಿದೆ. ಅಂದರೆ, ಕಲ್ಯಾಣ ಚಾಲುಕ್ಯರ ಅವಧಿಯಲ್ಲಿ ವಿದ್ಯಾದಾನ ಮಾಡುತ್ತಿದ್ದ ಅಧ್ಯಾಪಕರಿಗೆ ಅಥವಾ ಗುರುಗಳಿಗೆ ವೈಯಕ್ತಿಕವಾಗಿ ದಾನ ನೀಡಿರುವುದು ಕಂಡುಬರುತ್ತದೆ. ಅಧ್ಯಯನದ ವ್ಯಾಪ್ತಿಯಲ್ಲಿ ನಾಲ್ಕು ನೂರಕ್ಕು ಹೆಚ್ಚು ಶಾಸನಗಳಲ್ಲಿ ವಿದ್ಯಾದಾನ ಮಾಡುತ್ತಿದ್ದ ಅಧ್ಯಾಪಕರ ಜೀವಿತಕ್ಕೆ ದಾನ ಮಾಡಿದ ಉಲ್ಲೇಖಗಳು ಸಿಗುತ್ತವೆ.

ವಿದ್ಯಾದಾನಕ್ಕೆಂದು ದಾನ ಬಿಡುವಾಗ ವಿದ್ಯಾರ್ಥಿಗಳ ತಪೋಧನರ ಆಹಾರ ಶಯನಕ್ಕೆ ದಾನ ಬಿಡುವಾಗ ಅಲ್ಲಿ ಬೋಧಿಸುತ್ತಿದ್ದ ಅಧ್ಯಾಪಕರ ಜೀವಿತಕ್ಕೂ ದಾನ ನೀಡಲಾಗಿದೆ. ಅಧ್ಯಾಪಕರನ್ನು ವಕ್ಖಾಣಭಟ್ಟ ಮತ್ತು ಉಪಾಧ್ಯಾಯ, ಯತಿ ಮತ್ತು ನೈಷ್ಠಿಕ ತಪೋಧನರು, ಮಠದ ತಪೋಧನರು, ಎಂದು ಬೇರೆ ಬೇರೆ ಹೆಸರುಗಳಿಂದ ಕರೆಯಲಾಗುತ್ತಿತ್ತು. ಇವರಲ್ಲಿ ಅಲ್ಪ ವ್ಯತ್ಯಾಸಗಳಿದ್ದರೂ ಇವರೆಲ್ಲರ ಕಾರ್ಯ ಬೋಧನೆಯೇ ಆಗಿತ್ತು. 'ಉಪಾಧ್ಯಾರರ್ಗೆ'[362] 'ವಕ್ಖಾಣ ಭಟ್ಟರ್ಗೆ'[363] 'ತಪೋಧನರ್ಗೆ'[364] 'ಏಕ್ಕಾಣಿಸು ವುಪಾಧ್ಯಾಯರ್ಗ್ಗಂ'[365] 'ವ್ಯಾಖ್ಯಾನದುಪಾಧ್ಯಾಯರ್ಗ್ಗೆ, ಖಣ್ಡಿಕೆಯುಪಾಧ್ಯಾಯರ್ಗ್ಗೆ'[366] ಎಂಬ ಅನೇಕ ಉಲ್ಲೇಖಗಳನ್ನೊಳಗೊಂಡು ವಿವಿಧ ಉಪಾಧ್ಯಾಯರಿಗೆ ದನ ನೀಡಿರುವುದು ಹಲವು ಶಾಸನಗಳಿಂದ ತಿಳಿದುಬರುತ್ತದೆ.

**ದೇವಾಲಯದ ಪರಿವಾರದವರಿಗೆ ದಾನ :**

ದೇವಾಲಯಗಳು ಮುಖ್ಯವಾಗಿ ದೇವರ ಸ್ಥಾನಗಳು ಅಷ್ಟೇ ಅಲ್ಲ; ಸಾಮೂಹಿಕ ಪೂಜಾಕೇಂದ್ರಗಳು. ಇವು ಕಾಲಕ್ರಮದಲ್ಲಿ ಸಮಾಜದ ಅಭಿನ್ನ ಅಂಗವಾಗಿ ರೂಪಗೊಳ್ಳುತ್ತ

ಬಂದಿವೆ. ನಿರ್ಮಾಣವಾದ ದೇವಾಲಯದೊಳಗಿನ ದೇವರಿಗೆ ಪೂಜೆ, ಪುರಸ್ಕಾರ, ದೇವರ ದರ್ಶನಕ್ಕೆ ಬರುವ ಭಕ್ತಾದಿಗಳಿಗೆ ಹಲವು ರೀತಿಯ ವ್ಯವಸ್ಥೆ ಮಾಡಲು ದೇವಾಲಕ್ಕೆ ಒಂದು ಪರಿವಾರದ ಅನಿವಾರ್ಯತೆಯೂ ಬೆಳೆಯಿತು. ದೇವಾಲಯದ ಪರಿವಾರದಲ್ಲಿ ಈ ಕೇಳಗೆ ಸೂಚಿದವರು ಒಳಗೊಳ್ಳುತ್ತಾರೆ.

**ಸ್ಥಾನಪತಿ ಅಥವಾ ಸ್ಥನಿಕ** : ದೇವಾಲಯಗಳ ವ್ಯವಸ್ಥೆಯ ಜವಾಬ್ದಾರಿ ಹೊತ್ತ ಮುಖ್ಯಸ್ಥ ಅಥವಾ ಗುರುವನ್ನು ಸ್ಥಾನಪತಿ ಎನ್ನುತ್ತಿದ್ದರು. ಇವರನ್ನು ಶಾಸನಗಳಲಿ ಸ್ಥಾನ ಒಡೆಯ, ಸ್ಥಾನದಾಚಾರ್ಯ, ಸ್ಥಾನಾಧಿಪತಿ ಇತ್ಯಾದಿ ಪಾರಿಭಾಷಿಕ ಪದಗಳಿಂದಲೂ ಉಲ್ಲೇಖಿಸಲಾಗಿದೆ.

**ಪೂಜಾರಿ ಮತ್ತು ಅರ್ಚಕ** : ಆಗಮೋಕ್ತ ಕ್ರಮದಲ್ಲಿ ಪ್ರತಿನಿತ್ಯ ದೇವರ ವಿಗ್ರಹಕ್ಕೆ ಪೂಜೆ ಸಲ್ಲಿಸುವವನು ಪೂಜಾರಿ. ದೇವರಿಗೆ ಅರ್ಚನೆ ಮಾಡುವವನು ಅರ್ಚಕ. ಪೂಜೆ ಮತ್ತು ಅರ್ಚನೆಗಳು ತಾರ್ಕಿಕವಾಗಿ ಬೇರೆ ಬೇರೆಯಾದರೂ ತಾತ್ವಿಕವಾಗಿ ಎರಡೂ ಒಂದೇ ಆಗಿವೆ.

**ಪಾದಮೂಲ ಪರಿವಾರ–ಪಾವುಳ** : ಪಾತ್ರದವರು, ಸೂಳೆಯರು, ಮಾಲೆಗಾರ, ವಂಚಿಗ ಅಥವಾ ವಂಶಿಗ, ಪರೆಕಾರ ಪಾವಾಡಿಗ, ಸೂಳೆವಳ ಮುಂತಾದವರಿಗೆ ಪಾದಮೂಲ ಪರಿವಾರದವರು ಎಂದು ಕರೆಯುತ್ತಿದ್ದರು. ಪಾತ್ರದವರು ರಂಗಭೋಗದಲ್ಲಿ ನೃತ್ಯದ ಮೂಲಕ ಸೇವೆ ಸಲ್ಲಿಸುವ ನರ್ತಕ ಅಥವಾ ನರ್ತಕಿಯರು ಯಾವುದೋ ಒಂದು ಪುರಾಣದ ಪಾತ್ರವಾಗಿ ಅಭಿನಯದ ಮೂಲಕ ನೃತ್ಯ ಪ್ರದರ್ಶನ ಮಾಡುತ್ತಿದ್ದರು. ಇವರನ್ನು ಪಾತ್ರದವರು ಎಂದು ಕರೆಯಲಾಗಿದೆ. ಸ್ತ್ರೀಯರಾಗಿದ್ದ ಪಾತ್ರದವರನ್ನೇ ಸೂಳೆಯರು ಎಂತಲೂ ಶಾಸನಗಳಲ್ಲಿ ಉಲ್ಲೇಖಿಸಿದೆ. ಸೂಳೆಯರಲ್ಲಿ ಕಂಬದ ಸೂಳೆ(ದೇವಾಲಯದ ಬೇರೆ ಬೇರೆ ಕಂಬಗಳ ಬಳಿನಿಂತು ಕರ್ತವ್ಯಗಳನ್ನು ನಿರ್ವಹಿಸುವವಳು) ಚಾಮರದ ಸೂಳೆ (ಚಾಮರ ಬೀಸುವ ಕೆಲಸಕ್ಕೆ ನಿಂತವರು), ಭೋಗದ ಸೂಳೆ (ಸಾರ್ವಜನಿಕವಾಗಿ ವೇಶ್ಯೆಯಾಗಿದ್ದವಳು) ದೇವರಿಗೆ ಮಾಲೆಗಳನ್ನು ಮಾಡುವವನು ಮಾಲೆಗಾರ :

ವಂಚಿಗ ಅಥವಾ ವಂಶಿಗ : ದೇವಾಲಯದಲ್ಲಿ ಕೊಳಲೂದುವವ

ಪರೆಕಾರ : ಹಲಗೆ ಬಾರಿಸುವವನು

ಪಾವಾಡಿಗ/ಪಾಡುವರ್ : ದೇವಾಲಯದಲ್ಲಿನ ಗಾಯಕರು.

ಸೂಳೆವಳ : ಸೂಳೆಯರ ಮೇಲ್ವಿಚಾರಕ ಗೀತ, ನೃತ್ಯಗಳ ಸೇವೆಯನ್ನು ಸಲ್ಲಿಸುವ ಸ್ತ್ರೀಯರ ಮೇಲಿನ ಅಧಿಕಾರಿ.

ಸೇವಾ ವರ್ಗದವರು : ಕಮ್ಮಾರರು, ಜ್ಯೋತಿಷಿಗಳು, ಕಲುಕುಟಿಗರು, ಪಟ್ಟಸಾಲಿಗ (ರೇಷ್ಮೆ ಬಟ್ಟೆ ನೇಯುವವ), ಬಾಣಸಿಗ (ಅಡಿಗೆಯವ), ತೋಟಿಗ, ಕಾವಲುಗಾರ, ಕರಣಿಕ, ಕುಂಬಾರ, ಅಗಸ, ಮುಂತಾದವರು. ದೇವಾಲಯದ ಪರಿವಾರದ ಅವಿಭಾಜ್ಯ ಅಂಗವಾಗಿದ್ದರು. ಆದರೆ ಇವರ ಸೇವೆ ಕೆಲವು ದೇವಾಲಯಗಳಲ್ಲಿ ಸಾಂದರ್ಭಿಕವೂ ಇನ್ನೂ ಕೆಲವೆಡೆ ನಿರಂತರವೂ ಆಗಿರುತ್ತಿತ್ತು.

ಈ ಮೇಲೆ ಹೆಸರಿಸಿದ ಎಲ್ಲರೂ ದೇವಾಲಯದ ಪರಿವಾರದಲ್ಲಿ ಬರುವವರಾದ್ದರಿಂದ ಸ್ಥಾನಿಕ ಅಥವಾ ಸ್ಥಾನಪತಿಯನ್ನು ಹೊರತು ಪಡಿಸಿ ಉಳಿದವರಿಗೆ ದೇವಾಲಯದಿಂದಲೇ ಉಂಬಳಿಯಾಗಿ ಭೂಮಿಯನ್ನು ಇಲ್ಲವೇ ನಗದು ರೂಪದಲ್ಲಿ ಸಂಬಳವನ್ನು ನೀಡುತ್ತಿದ್ದಂತೆ ಕಾಣುತ್ತದೆ. ಇದಲ್ಲದೆ ಹಲವು ಸಂದರ್ಭಗಳಲ್ಲಿ ದೇವಾಲಯದ ಪರಿವಾರದವರಿಗೆ ಕಲ್ಯಾಣ ಚಾಲುಕ್ಯರ ಅವಧಿಯಲ್ಲಿ ದಾನಗಳನ್ನು ನೀಡಲಾಗಿದೆ. ದೇವಾಲಯಕ್ಕೆ ಸಲ್ಲುವ ದಾನಗಳನ್ನು ಸ್ಥಾನಪತಿ ಅಥವಾ ಸ್ಥಾನಿಕರ ಕೈಯ್ಯಲ್ಲಿಯೇ ನೀಡಲಾಗಿದೆ. ಸ್ಥಾನಪತಿಗಳಿಗೆ ವಯಕ್ತಿಕ ಜೀವನಕ್ಕೆಂದು ದಾನ ನೀಡಿದಂತೆ ತೋರುವುದಿಲ್ಲ. ಆದರೆ ಉಳಿದ ದೇವಾಲಯದ ಪರಿವಾರದವರಿಗೆ ದಾನಗಳನ್ನು ಬಿಡಲಾಗಿದೆ. ಹಾಗೆ ಬಿಟ್ಟ ದಾನಗಳ ಕೆಲವು ನಿದರ್ಶನಗಳನ್ನು ಈ ಕೆಳಗೆ ವಿವರಿಸಲಾಗಿದೆ.

ತೆಲವಾಗಿಲು ಶಾಸನದ ಪ್ರಕಾರ ಮಹಾಸಾಮಂತ ಜಗದೇಕಮಲ್ಲ ಉದಯಾದಿತ್ಯ ದೇವನು ತಲವಗೆಯ ಭೋಗೇಶ್ವರ ದೇವರ ಪರಿಕಾರರಿಗೆ ಗದ್ದೆ ಮತ್ತರು ೧, ಹಾಡುವವರಿಗೆ ಗದ್ದೆ ಮತ್ತರು ೧, ದೇವರ ಪೂಜಾರಿಗೆ ಕಮ್ಮ ಗದ್ದೆ ಮತ್ತರು ೨೦೦ ಭೂಮಿಯನ್ನು ದಾನ ನೀಡಿದ್ದಾನೆ[367] ಇಮ್ಮಡಿ ಜಯಸಿಂಹನ ರಾಣಿ ಸೋಮಲದೇವಿಯು ನಿಪ್ಪಾಣಿಯಲ್ಲಿ ಸರಸ್ವತಿ ದೇವಿಯ ವಿಗ್ರಹ ಪ್ರತಿಷ್ಠೆ ಮಾಡಿದ ಸಂದರ್ಭದಲ್ಲಿ ಬೇರೆಬೇರೆ ಉದ್ದೇಶಗಳಿಗೆ ದಾನ ನೀಡಿ ದೇವಾಲಯದ ಶಿಲ್ಪಿ ಸುವೋಜನಿಗೆ ೨೪ ಮತ್ತರು ಭೂಮಿಯನ್ನು ನೀಡಿದ್ದಾಳೆ[368]. ಮಹಾಸಾಮಂತ ಬನವಾಸಿ ಪುರವರೇಶ್ವರ ಘಟ್ಟಿಯರಸನು ಮೋರಿಗೇರಿಯ ಗೋವಿಂದೇಶ್ವರ ದೇವಾಲಯದ ಪರಿವಾರದವರಿಗೂ ಈ ಕೆಳಗಿನಂತೆ ಭೂಮಿ ನೀಡಲಾಗಿದೆ.[369]

| | |
|---|---|
| ಪಿರಿಯರ ಮಾದಯ್ಯನಿಗೆ | – ೧೨ ಮತ್ತರು |
| ಸೊಳೆವಾಳನಿಗೆ | – ೧೨ ಮತ್ತರು |
| ವಂಸಿಗರಿಬ್ಬರಿಗೆ | – ೨೪ ಮತ್ತರು |
| ಪರೆಕಾರರಿಗೆ | – ೨೪ ಮತ್ತರು |
| ಸೂಳೆಯರಿಬ್ಬರಿಗೆ | – ೧೦ ಮತ್ತರು |
| ಘಳಿಗೆಯ ಮಾಣಿ ನಾಲ್ಕು ವರ್ಗಕ್ಕೆ | – ೮ ಮತ್ತರು, |
| ಸವಕಟ್ಟಿನಲ್ಲಿ | – ೩೨ ಮತ್ತರು |

| | |
|---|---|
| ಕಾಹಿನಾಡಯ್ಯರಿಗೆ (ಕಾವಲುಗಾರರು) | – ೪ ಮತ್ತುರು |
| ಖಂಡಸ್ಪುಟಿತ ಮೊದಲಾದವನ್ನು ಮಾಡುವ | |
| ರೂವಾರಿ ಮುಚ್ಚೋಜನಿಗೆ | – ೧೨ ಮತ್ತರು |
| ನಟ್ಟಿವಂಗೆ (ನಾಟ್ಯದವರು) | – ೧೨ ಮತ್ತರು. |

ಹುಳಿವೆ (ಹರಪನಹಳ್ಳ)ಯ ಘಟ್ಟದ ಕದಂಬೇಶ್ವರ ದೇವಾಲಯದ ಕಲ್ಲುಕುಟಿಗರಾದ ಮಾಣಿಕಾಚಾರ್ಯನಿಗೆ ೫ ಕೊಳಗ ಗದ್ದೆ, ಹಿರಿಯ ಚಾವುಂಡೋಜನಿಗೆ ಮತ್ತು ಕಿರಿಯ ಚಾವುಂಡೋಜನಿಗೆ ೧೦ ಕೊಳಗ ಗದ್ದೆಯನ್ನು ಅಲ್ಲಿನ ಹಲವು ಜನರು ಸೇರಿ ದಾನ ನೀಡಿದ್ದಾರೆ.[370] ಹಿರೇಮಗಳಗೇರಿ ಶಾಸನದ ಪ್ರಕಾರ ದಂಡನಾಯಕ ಜಗದೇಕಮಲ್ಲನೊಳಂಬ ಬ್ರಹ್ಮಾದಿರಾಜನು ಸ್ವಯಂಭುದೇವರ ಪರೆಕಾರರಿಗೆ, ಪಾತ್ರಕ್ಕೆ, ಪೂಜಾರಿಗಳಿಗೆ ೫ ಬೆರ್ದ್ದಲೆ ಮತ್ತರು, ಕೆರೆಯ ಕೆಳಗಿನ ೧೦ ಕೊಳಗ ಭೂಮಿಯನ್ನು, ಕಂಭದ ನಾಲ್ವರು ಸೂಳೆಯರ ಮನೆವಣ, ಕನ್ನಡಿವಣ ತೆರಿಗೆಗಳನ್ನು ದಾನ ಬಿಟ್ಟಿದ್ದಾನೆ.[371] ಬೇವಿನೂರ ದೇವಿಕಬ್ಬೆ ಗವುಡಿಯ ಪುರಮಠದ ಭೋಗೇಶ್ವರ ದೇವಾಲಯದ ಜೀರ್ಣೋದ್ಧಾರಕ್ಕೆ ನಿಯುಕ್ತನಾದ ಇಟ್ಟಿಗೆಯ ದಾಸೋಜನಿಗೆ ಮಾಣಿಕೇಶ್ವರದ ಕೋಲಿನಿಂದ ಅಳೆದ ೧೦ ಮತ್ತರು ಭೂಮಿಯನ್ನು, ೫ ಕೈಯ್ಯಳತೆಯ ಮನೆಯನ್ನು ದತ್ತಿ ಬಿಡಲಾಗಿದೆ.[372] ಕಡ್ಲೇವಾಡದ ಸೂತ್ರಧಾರಿ ಸಂಗೋಜನಿಗೆ[373] ಭೂಮಿ, ನಿವೇಶನಗಳನ್ನು ಮಲಘಾನ ಶಾಸನ ತಿಳಿಸುವಂತೆ ಅಲ್ಲಿನ ಸೋಮೇಶ್ವರ ದೇವರ 'ಬಾವಿಯುಂ ದೇಗುಲಮುಮಂ' ಕಾಯುವ ಆಳಿಗೆ ಹತ್ತು ಮತ್ತರು ಭೂಮಿಯನ್ನು ದಾನ ನೀಡಲಾಗಿದೆ[374]. ಬನಕಾರ ಚವುಂಡೆಯ ಮತ್ತು ನನ್ನಯ್ಯರು ಬನ ಕಾಯಲು ಭೂಮಿ ಮತ್ತು ನಿವೇಶನ ಪಡೆದುದನ್ನು ಹಿರೇಬೇವಿನೂರ ಶಾಸನ ಉಲ್ಲೇಖಿಸುತ್ತದೆ[375]. ದೇವರ ನಾವದಗಿಯಲ್ಲಿ ಮಲ್ಲಿಕಾರ್ಜುನ ದೇವಾಲಯವನ್ನು ನಿರ್ಮಾಣ ಮಾಡಿದ ಬಿಂನ್ನಾಣಿ ತಪ್ಪೋಜನಿಗೆ ೨ ಮತ್ತರು ಭೂಮಿ ಮತ್ತು ಒಂದು ಮನೆಯನ್ನು ದಾನ ನೀಡಲಾಗಿದೆ.[376]

ಕಿಸುಕಾಡು ಎಪ್ಪತ್ತು ಮುಂತಾದುವನ್ನು ಆಳುತ್ತಿದ್ದ ಅಕ್ಕಾದೇವಿ ಎಂಬಾಕೆಯು ಸೂಂಡಿಯಲ್ಲಿ ಅಕ್ಕೇಶ್ವರ ದೇವಾಲಯವನ್ನು ಕಟ್ಟಿಸಿ, ಅಲ್ಲಿ ನೃತ್ಯವನ್ನು ಮಾಡುವ ಸೂಳೆಯರಿಗೆ (ಪಾತ್ರದವರು) ಈ ಕೆಳಗಿನಂತೆ ದತ್ತಿ ಬಿಟ್ಟಿದ್ದಾಳೆ.[377]

| | |
|---|---|
| ಎಡದ ಪಕ್ಕದ ಕೇರಿಯ ಮೊದಲ ದೆಸೆಯ ಬಿಟ್ಟಿಯ | |
| ಚಾಮರದ ಸೂಳೆ...ಬ್ಬೆಗೆ | ಮ ೧೧ |
| ಪೆರ್ಗ್ಗಡೆ ಬಾಳಮೂಕಯ್ಯನಿಗೆ | ಮ ೧೫ |
| ಬಲದ ದೆಸೆಯ ಮೊದಲ ಕಂಭದ ಸೂಳೆ...ಬ್ಬೆಗೆ | ಮ ೧೫ |
| ಕಂಭದ ಸೂಳೆ ಅಸಗಬ್ಬೆಗೆ | ಮ ೧೨ |
| ಎಡದ ದೆಸೆಯ ಮೊದಲ ಕಂಭದ ಸೂಳೆ ರೇವಕಬ್ಬೆಗೆ | ಮ ೧೨ |

| | |
|---|---|
| ಕಂಭದ ಸೂಳೆ ಗುಬ್ಬಿಯ ಚಾವುಂಡಬ್ಬೆಗೆ | ಮತ್ತರ್ |
| ಬಲದ ದೆಸೆಯ ಬಿಟ್ಟಿಯ ಚಾಮರದ ಸೂಳೆ...ಬ್ಬೆಗೆ | ಮ ೧೨ |
| ಕೇರಿಯ ಚಾಮರದ ಸೂಳೆ ಚೆಟ್ಟಿಯಬ್ಬೆಗೆ | ಮ ೧೨ |
| ಎಡದ ದೆಸೆಯ ಕೇರಿಯ ಚಾಮರದ ಸೂಳೆ ಗುಬ್ಬಿಯ ಕೇತಬ್ಬೆಗೆ | ಮ ೧೨ |
| ಬಲದ ದೆಸೆಯ ಪಾತ್ರಂ ಸೂಳೆ...ವಕಬ್ಬೆಗೆ | ಮ ೧೨ |
| ಎಡದ ದೆಸೆಯ ಪಾತ್ರಂ ಸೂಳೆ ಗಾರ್ಗಬ್ಬೆಗೆ | ಮ ೧೨ |
| ಎಡಪಕ್ಕದ ಕೇರಿಯ ಸೂಳೆ ಮೈಲಬ್ಬೆಗೆ | ೧[೨] |
| ಬಲಪಕ್ಕದ ಕೇರಿಯ ಸೂಳೆ ಜಕ್ಕಬ್ಬೆಗೆ | ಮತ್ತರಂ ೧೨....[378] |

ಹೀಗೆ ಹಲವು ಜನ ಪಾತ್ರದವರಿಗೆ, ಸೂಳೆಯರಿಗೆ ಭೂಮಿ ದಾನವನ್ನು ಮಾಡಲಾಗಿದೆ. ಇದೇ ರೀತಿ ಕ್ರಿ.ಶ. ೧೦೫೮ರ ಸೂಡಿಯ ಶಾಸನವೂ ಸೂಳೆಯರಿಗೆ ದಾನ ನೀಡಿರುವುದನ್ನು ಸ್ಪಷ್ಟಪಡಿಸುತ್ತದೆ.[379]

ಮಹಾರಾಷ್ಟ್ರದ ಸೋಲಾಪುರ ಜಿಲ್ಲೆಯ ಮಾಂಡ್ರುಪನ್‌ದ ಒಂದು ಶಾಸನವು ಮಂದುಬ್ಬೆಯೆ ಸಿದ್ಧನಾಥ ದೇವರ ದೇವಾಲಯದಲ್ಲಿ ರಂಗಭೋಗಕ್ಕಾಗಿ ಖೇಯಿದೇವನು ಗಾಯಕರು ಮತ್ತು ಲಚ್ಚಣಿಯರನ್ನು ಕರೆತಂದು ಮಾಡಿದ ವ್ಯವಸ್ಥೆ ಮತ್ತು ಅವರಿಗೆ ನೀಡಲಾದ ದಾನಗಳನ್ನು ದಾಖಲಿಸಿದೆ[380]. ಅದರ ವಿವರ ಈ ಕೆಳಗಿನಂತಿದೆ.

| | |
|---|---|
| ವಾಸಿಕಾರ (ವಾಂಶಿಕ)ನಿಗೆ | – ಮತ್ತರು ೧೬ |
| ಒತ್ತುಕಾರನಿಗೆ | – ಮತ್ತರು ೫ |
| ಮದ್ದಳಿಗನಿಗೆ | – ಮತ್ತರು ೧೬ |
| ಎರಡನೆಯ ಮದ್ದಳಿಗನಿಗೆ | – ಮತ್ತರು (?) |
| ಆಉಜಿನಿಗೆ | – ಮತ್ತರು ೧೬ |
| ಮೊಕರಿಗನಿಗೆ | – ಮತ್ತರು ೧೨ |
| ಇಬ್ಬರು ಸವಗಾಣಿಯರಿಗೆ | – ಮತ್ತರು ೧೬ |
| ನಾಲ್ಕು ಕಂಬದವರಿಗೆ (ಸೂಳೆಯರು) | – ಮತ್ತರು ೨೪ |
| ಪಾತ್ರಕ್ಕೆ | – ಮತ್ತರು ೧೨ |
| ಎರಡನೆಯ ಪಾತ್ರಕ್ಕೆ | – ೨ |
| ಸೂಳೆವಾಳನಿಗೆ | – ಮತ್ತರು ೬ |
| ದೇಗುಲದ ಮಾವಕೂಟದ ಬಡಗಿಗೆ | – ಮತ್ತರು ೬ |

ಇದೇ ರೀತಿ ನಾಗಯ್ಯ ನಾಯಕ ಎಂಬುವವನು, ಚಿಲ್ತುರುವ ಪನ್ನಾಯದ ಸುಂಕವನ್ನಾಳುತ್ತಿದ್ದಾಗ ಬೆಳ್ವನೂರ ಮೂಲಸ್ಥಾನದ ಕಲಿದೇವಸ್ವಾಮಿಗೆ ಹಾಗೂ ಅಲ್ಲಿನ ಪರಿವಾರದವರಿಗೆ ಈ ಕೆಳಗೆ ದಾಖಲಿಸಿದಂತೆ ದಾನ ನೀಡಿದ್ದಾನೆ.[381]

ದೇವರಿಗೆ – ಹಿರಿಯ ಕೆರೆಯ ಗದ್ದೆ ಮತ್ತರು ೧, ತೆಲ್ಲಿಗ ಕೆರೆಯ ಕೇಳಗೆ ಗದ್ದೆ ಮತ್ತರು ೧, ಕಮ್ಮ ೪೫೦, ಬೆದ್ದಲೆ ಮತ್ತರು ೧೪, ೫೦೦ ಬಳ್ಳಿಯ ತೋಟ, ಎತ್ತು ಗಾಣ೧, ಮನೆಯ ಸಾಮ್ಯ ೧೨, ಕಯ್ಯಾಗ ೧, ಬ್ರಹ್ಮವೇದಿ ಜೀಯರು ಮತ್ತು ಭೋಗಂಮಾರ್ಪ್ಪ ಪರೆಕಾರರು, ಪಾತ್ರಕ್ಕೆ– ಗದ್ದೆ ೧ ಮತ್ತರು, ಕಮ್ಮ ೪೫೦, ಬೆದ್ದಲೆ ಮತ್ತರು ೧೨.

ಈ ಮೇಲಿನ ಎಲ್ಲ ಉದಾಹರಣೆಗಳು ದೇವಾಲಯ ಪರಿವಾರದ ವಿವಿಧ ಸೇವಾವರ್ಗದವರಿಗೆ ದಾನ ನೀಡಿರುವುದನ್ನು ತಿಳಿಸುತ್ತವೆ. ಬ್ರಾಹ್ಮಣರು, ಉಪಾಧ್ಯಾಯರಿಗೆ ದಾನ ನೀಡಿದ ಸಂಖ್ಯೆಯಲ್ಲಿಯೇ ದೇವಾಲಯದ ಪರಿವಾರಕ್ಕೆ ದಾನ ನೀಡಲಾಗಿದೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಅಪಾರ ಪ್ರಮಾಣದ ದಾನ ಶಾಸನಗಳು ರಚನೆಯಾಗಲು ಸೇವೆ ಸಲ್ಲಿಸಿದ ಶ್ರಮಿಕ ವರ್ಗದವರಿಗೆ ವೇತನಕ್ಕೆ ಬದಲಿಗೆ ಉಂಬಳಿಯಾಗಿ ಭೂಮಿ, ನಿವೇಶನಗಳನ್ನು ನೀಡುತ್ತಿದ್ದದೂ ಒಂದು ಕಾರಣವಾಗಿದೆ. ಇವು ಕೇವಲ ಶ್ರಮಿಕ ವರ್ಗಕ್ಕೆ ನೀಡಿದ ದಾನಗಳನ್ನು ತಿಳಿಸದೇ ಅಂದಿನ ಕಾಲದಲ್ಲಿ ಸಾಮಾನ್ಯ ಜನರಿಗೆ ನೀಡಿದ ಸಹಾಯ, ಸಹಕಾರಗಳನ್ನು ಕನ್ನಡಿಗರ ಔದಾರ್ಯವನ್ನು ಪ್ರತಿಬಿಂಬಿಸುತ್ತವೆ. ದೇವಾಲಯಗಳಿಗೆ ದಾನ ನೀಡುವುದಲ್ಲದೆ, ದೇವಾಲಯದ ಕೆಲಸ ಕಾರ್ಯಗಳನ್ನು ನಿರ್ವಹಿಸುವವರ ಜೀವನದ ಬಗ್ಗೆ ಕಾಳಜಿ ತೋರಿಸಿರುವುದು, ತನ್ಮೂಲಕ ಸಾಮಾಜಿಕ ನ್ಯಾಯವನ್ನು ಪಾಲಿಸುವಲ್ಲಿ ಅವರ ಸೂಕ್ಷ್ಮತೆ ಗಮನೀಯವಾಗಿದೆ.

## ವೀರಯೋಧರಿಗೆ – ಅವರ ಕುಟುಂಬದವರಿಗೆ ದಾನ :

**ಜಿತೇನ ಲಭ್ಯತೇ ಲಕ್ಷ್ಮೀರ್ಮೃತೇನಾಪಿ ಸುರಂಗನಾ**
**ಕ್ಷಣ ವಿಧ್ವಂಸಿನಿ ಕಾಯೇ ಕಾ ಚಿಂತಾ ಮರಣೇ ರಣೇ॥**[382]

'ಯುದ್ಧದಲ್ಲಿ ಗೆದ್ದರೆ ಲಕ್ಷ್ಮಿ ದೊರಕುವಳು, ಸತ್ತರೆ(ಸ್ವರ್ಗದಲ್ಲಿ) ಸುರಾಂಗನೆಯರು ದೊರಕುವರು; ದೇಹವು ಕ್ಷಣದಲ್ಲಿ ವಿಧ್ವಂಸವಾಗುವ ವಸ್ತುವಾದ್ದರಿಂದ ರಣರಂಗದಲ್ಲಿ ಮಡಿಯುವ ವಿಷಯದಲ್ಲಿ ಚಿಂತೆ ಏಕೆ?' ಎಂಬ ಈ ಮಾತುಗಳು ಪ್ರಾಚೀನ ಕನ್ನಡಿಗ ಯೋಧರ ಭಾವನೆಗಳಾಗಿದ್ದವು. ಇವು ಅವರ ಧೈರ್ಯ, ಸ್ಥೈರ್ಯ, ದೇಶಪ್ರೇಮ, ಒಡೆಯನಿಗಾಗಿ ಅವರು ತೋರಿದ ಮಹಾತ್ಯಾಗವನ್ನು ತೋರಿಸುತ್ತವೆ. ಅಲ್ಲದೆ ಪ್ರಾಚೀನ ಕನ್ನಡಿಗರ ದೇಹದಾನವನ್ನು ಉತ್ಕಟವಾದ ಮೋಕ್ಷಾಪೇಕ್ಷೆ, ಅಸೀಮವಾದ ಸ್ವಾಮಿಭಕ್ತಿಗಳನ್ನು ಪ್ರತಿ ನಿಧಿಸುತ್ತದೆ. ದೇಶ, ಧೈರ್ಯ, ನಿಷ್ಠೆ, ಸ್ವಾಮಿಭಕ್ತಿಗಾಗಿ ದೇಹತ್ಯಾಗ ಮಾಡಿರುವುದನ್ನು ವಿದ್ವಾಂಸರನೇಕರು 'ಆತ್ಮಬಲಿ' ಅಥವಾ 'ದೇಹತ್ಯಾಗ' ಎಂದು ಗುರುತಿಸಿದ್ದಾರೆ.[383] ಈ ಪದ್ಧತಿಗಳು ಆಧುನಿಕ ಯುಗದಲ್ಲಿ

ಬಹು ವಿಚಿತ್ರವಾಗಿ ತೋರಿದರೂ ಮನುಷ್ಯ ಪ್ರಾಣದ ಮೇಲಿನ ಮೋಹವನ್ನು ತೊರೆದು ಒಂದು ಆದರ್ಶ ಪಾಲನೆಗೆ ತಮ್ಮನ್ನು ತಾವು ಬಲಿಕೊಟ್ಟುಕೊಂಡದ್ದನ್ನು ಸ್ಮರಿಸಿದರೆ ಅವರ ವಿಷಯದಲ್ಲಿ ಅಗಾಧವಾದ ಗೌರವ, ಭಕ್ತಿ, ಹೆಮ್ಮೆಗಳು ಮೂಡುತ್ತವೆ. ಇಂಥ ಹೆಮ್ಮೆಯನ್ನು ಪ್ರಾಚೀನ ಕಾಲದ ಜನರೂ ಸಹ ವೀರರ ಸ್ಮಾರಕವಾಗಿ ವೀರಗಲ್ಲುಗಳನ್ನು ಸ್ಥಾಪಿಸುವುದರ ಮೂಲಕ, ಅವರ ಸಂಸಾರದ ನಿರ್ವಹಣೆಗಾಗಿ ದಾನ-ದತ್ತಿಗಳನ್ನು ನೀಡುವುದರ ಮೂಲಕ ತೋರ್ಪಡಿಸಿದ್ದಾರೆ.

ಯುದ್ಧ, ಕಾಳಗಗಳಲ್ಲಿ ಪಾಲ್ಗೊಂಡು ನಾಡ ರಕ್ಷಣೆಗಾಗಿ ತಮ್ಮ ಪ್ರಾಣವನ್ನೇ ಅರ್ಪಿಸಿದ ವೀರಯೋಧರಿಗೆ ರಾಜರು, ಸಾಮಂತರು ಅಥವಾ ಅವರ ಊರಿನ ಜನರು ಸೇರಿ ದತ್ತಿಗಳನ್ನು ಬಿಟ್ಟು ಕೊಟ್ಟಿದ್ದಾರೆ. ಹೀಗೆ ಬಿಟ್ಟುಕೊಟ್ಟ ದತ್ತಿಗಳನ್ನು 'ನೆತ್ತರುಗೊಡಗೆ', 'ಬೀರಗೂಳ್', 'ಬಾಳ್ಗಟ್ಟಿ 'ಕಲ್ನಾಟ್ಟು' ಮುಂತಾದ ಹೆಸರುಗಳಿಂದ ಶಾಸನಗಳಲ್ಲಿ ಕರೆಯಲಾಗಿದೆ. ಇಂಥ ಕೆಲವು ದಾನಗಳ ಅರ್ಥ ಸಹಿತ ತಿಳಿಯುವುದು ಇಲ್ಲಿ ಸೂಕ್ತವೆನಿಸುತ್ತದೆ.

**ನೆತ್ತರಕೊಡಿಗೆ/ನೆತ್ತರಗೊಡಿಗೆ – ವೀರಮರಣಕ್ಕಾಗಿ ಕೊಟ್ಟದತ್ತಿ**

ಪದ್ಮ ಎಂಬುವನ ಮಗನು ತುರುಗೋಳದಲ್ಲಿ ಸತ್ತಾಗ ಆ ಊರಿನ ಮಹಾಜನರು ಅವನ ತಂದೆ ಪದ್ಮನಿಗೆ 'ನೆತ್ತರಗೊಡಗೆ'ಯಾಗಿ ಹೊಲವನ್ನು ದಾನ ಮಾಡಿದ್ದಾರೆ.[384] ನಾಗೆ ನಾಯಕ ಎಂಬುವವನು ಯುದ್ಧದಲ್ಲಿ ಸತ್ತು ಬೀಳಲು ಅವನ ತಮ್ಮನಿಗೆ ಬಂಕೆರೆಯ ಎಂಬಾತನು 'ನೆತ್ತರುಗೊಡಗೆ'ಯಾಗಿ ಭೂಮಿಯನ್ನು ದಾನ ಮಾಡಿದ್ದಾನೆ.[385] ತಿಮ್ಮಯನು ವೀರಮರಣ ಹೊಂದಿದಾಗ ಅವನಿಗೆ ಹೊಲವನ್ನು ದಾನ ನೀಡಲಾಗಿದೆ.[386]

ಬಾಳ್ಗಟ್ಟಿ – ಯುದ್ಧದಲ್ಲಿ ಹೋರಾಡಿ ಗೆದ್ದು ಬಂದವರಿಗೆ ಪ್ರಶಸ್ತಿರೂಪವಾಗಿ ಕೊಡುತ್ತಿದ್ದ ದತ್ತಿ

ಪಂಚಮಮಾರಾಯ ಎಂಬಾತನು ಹನಸೋಗೆಯ ಯದ್ಧದಲ್ಲಿ ಅನೇಕರನ್ನು ಕೊಂದು ಬಂದದ್ದಕ್ಕಾಗಿ ಅವನಿಗೆ 'ಕ್ಷತ್ರಿಯ ಶಿಖಾಮಣಿ ಕೊಂಗಾಳ್ವ' ಎಂದು ಬಿರುದು ಕೊಟ್ಟು, 'ಮಾಲಂಬಿ' ಎಂಬ ಊರನ್ನು ದತ್ತಿಯಾಗಿ ಬಿಟ್ಟುದ್ದನ್ನು ಕ್ರಿ.ಶ.೧೦೦೫ರ ಶಾಸನವೊಂದು ತಿಳಿಸುತ್ತದೆ[387] ಯುದ್ಧದಲ್ಲಿ ಕಲಿತನದಿಂದ ಕಾದಿದ ಮಹೊಮ್ಮಲ್ಲಮೊಡೆಯನಿಗೆ ಸುರೂರನ್ನ ಬಾಳ್ಗಟ್ಟಿ ನೀಡಲಾಗಿದೆ.[388]

ಕಲ್ನಾಡು/ಕಲ್ನಾಟು/ಕಲ್ನಟ್ಟು – ಇದೂ ಕೂಡ ಯದ್ಧದಲ್ಲಿ ಮಡಿದ ವೀರನ ಮನೆಯವರಿಗೆ ನೀಡಿದ ದಾನವನ್ನು ಸೂಚಿಸುತ್ತದೆ. ಸತ್ತ ವೀರನ ಮನೆಯವರಿಗೆ ದತ್ತಿಯ ಮೇರೆಯನ್ನು ಸೂಚಿಸಲು ಕಲ್ಲುಗಳನ್ನು ನೆಡುತ್ತಿದ್ದರು. ಅದಕ್ಕಾಗಿ ಈ ದತ್ತಿಗೆ ಕಲ್ನಾಡು, ಕಲ್ನಾಟ, ಕಲ್ನಟ್ಟು ಎಂದು ಕರೆಯುತ್ತಿದ್ದರು.

ಕಿಲ್ಗೊಂಟೆಯಾಗಿ ಹೊರಾಡಿ ಸತ್ತ ಬರಗೂರಿನ ಎರೆಗಂಗಯ್ಯ ಎಂಬುವವನ ತಂದೆ ಕಲುನೇನರಸನಿಗೆ ಅಯ್ಯಪ್ಪದೇವ ಎಂಬುವವನು 'ಕಲ್ನಾಡು' ನೆಲವನ್ನು ಅಚಂದ್ರಾರ್ಕವಾಗಿ ದಾನ ನೀಡಿದ್ದಾನೆ.[389] ಬೆಣಕಲ್ಲು ಸೀಮೆಯ ಕಾಳಗದಲ್ಲಿ ತಳಾರನಾಯಕ ಎರೆಯಮ್ಮನೆಂಬುವನು ಸತ್ತಾಗ ಅವನ ಕುಟುಂಬಕ್ಕೆ ಹಲಗೇರಿ ಗ್ರಾಮದ ಊರೊಡೆಯ ಮತ್ತು ಮಹಾಜನರು ಭೂದಾನ ನೀಡಿದ್ದಾರೆ.[390] ತುರುಗಾಳಗದಲ್ಲಿ ಸತ್ತ ಬಲನಾಯಕನಿಗೆ ಐಹೊಳೆ ಐನೂರ್ವ್ವರು ೧೨ ಮತ್ತರು ಭೂಮಿಯನ್ನು ದಾನ ನೀಡಿದ್ದಾರೆ.[391]

ಹೀಗೆ ಧೈರ್ಯ, ಸಾಹಸಗಳನ್ನು ಮೆರೆದ ಅನೇಕ ವೀರಯೋಧರಿಗೆ ಹಾಗೂ ಅವರ ಕುಟುಂಬಗಳಿಗೆ ದಾನ ನೀಡಿದ ವಿವರಗಳು ಸಿಗುತ್ತವೆ. ಮೇಲೆ ಕೆಲವು ಉದಾಹರಣೆಗಳನ್ನು ಮಾತ್ರ ನೋಡುತ್ತೇವೆ. ಪರಾಕ್ರಮ ಮೆರೆದು ಪ್ರಾಣಾರ್ಪಣೆ ಮಾಡಿದ ವೀರರಿಗೆ ದಾನ ನೀಡುವುದು ಸಮಾಜ ಅವರಿಗೆ ನೀಡಿದ ಕೃತಜ್ಞತೆ ಎನಿಸುತ್ತದೆ. ಕೇವಲ ರಾಜನಾದವನೋ ಅಥವಾ ಸಾಮಂತನೋ ದಾನ ನೀಡಿದ್ದರೆ, ಅದು ಕರ್ತವ್ಯ ವೆನಿಸುತ್ತಿತ್ತು. ಸಾಮಾನ್ಯ ಜನರು ವೀರ ಯೋಧರಿಗೆ ದಾನಗಳನ್ನು ನೀಡುವುದರ ಮೂಲಕ ಗೌರವಗಳನ್ನು ಅರ್ಪಿಸಿದ್ದಾರೆ.

### ೪.೪.೭ ಸಾಮಾಜಿಕ ಕಾರ್ಯಗಳಿಗೆ :

ಕೆರೆ, ಬಾವಿ, ಅರವಟ್ಟಿಗೆ, ಉದ್ಯಾನ ಅಗ್ಗಿಷ್ಟಿಗೆ, ಸತ್ರ, ಶಯನ ಇತ್ಯಾದಿಗಳಿಗೆ. ಕಲ್ಯಾಣ ಚಾಲುಕ್ಯರ ಕಾಲದ ಜನರ ಔದಾರ್ಯತೆಯ ಅರಿವಾಗುವುದು. ಅವರು ಸಾಮಾಜಿಕ ಕಾರ್ಯಗಳಿಗೆ ನೀಡಿದ ದಾನ-ದತ್ತಿಗಳಿಂದ. "ದೀನನಾಥರಿಗೆ, ಬಡವರಿಗೆ ಆಶ್ರಯಿಸಿ ಬಂದವರಿಗೆ ನೀರು, ಅನ್ನ ಆಶ್ರಯ ನೀಡಿ ಕೀರ್ತಿಪಡೆದರೆ; ದೇಗುಲ, ಅರವಂಟಿಗೆ ಮತ್ತು ಕೆರೆಗಳ ನಿರ್ಮಾಣದಿಂದ ಸಹಜಗುಣ ದೊರೆಯುತ್ತದೆ. ಎಂದು ಅವರು ಭಾವಿಸಿದ್ದರು.[392] 'ಹಸಗೂಸುಗಳಿಗೆ ಹಾಲನ್ನೂ ಹಸಿದವರಿಗೆ ಅನ್ನವನ್ನು ನೀಡುವ ಕಾರ್ಯವು ಸದಾ ನಡೆಯಬೇಕೆಂಬ' ಹಂಬಲ ಹೊಂದಿದ್ದರು. ಬಡವರಿಗೆ, ತಪಸ್ವಿಗಳಿಗೆ, ಬೇಡುವವರಿಗೆ ಆಹಾರದಾನದ ವ್ಯವಸ್ಥೆ ಮಾಡಲೇಬೇಕು; ಒಳ್ಳೆಯ ಮನುಷ್ಯ ಎನಿಸಿಕೊಳ್ಳಲು ಐಶ್ವರ್ಯವನ್ನು ಕೆರೆಗೆ, ಸತ್ರಕ್ಕೆ, ತಟಾಕಕ್ಕೆ, ದೇವಾಯತನಕ್ಕೆ ವಿನಿಯೋಗಿಸಬೇಕು; ಸಹಾಯಬೇಕೆಂದು ಬಂದ ಬಡವನಿಗೆ, ಭಟ್ಟನಿಗೆ, ಗಾಯಕನಿಗೆ, ಸತ್ಯವಿಗೆ, ವಂದಿ, ವಾಗ್ಮಿಗಳಿಗೆ ದಾನ ನೀಡುವುದರಲ್ಲಿ 'ಚಾರುದತ್ತನೋ, ಶಿಬಿಯೋ, ಗುತ್ತನೋ, ದಿನೇಶಜನೋ' ಎಂದು ಜನ ಪ್ರಶಂಸಿಸುವಂತಿರಬೇಕು.[393] ಎಂಬ ಹಿರಿದಾದ ಮೌಲ್ಯಗಳನ್ನು ಹೊಂದಿದ್ದರು. 'ಕೆರೆಯ ನೀರನ್ನು ಕೆರೆಗೆ ಚಲ್ಲು' ಎಂಬ ನಾಣ್ಣುಡಿಯಂತೆ ಸಮಾಜದಿಂದ ಪಡೆದ ಕೀರ್ತಿ, ಸಂಪತ್ತುಗಳನ್ನು ಸಮಾಜದ ಒಳಿತಿಗಾಗಿಯೇ ವಿನಿಯೋಗಿಸಬೇಕೆಂಬುದು ಅವರ ಧ್ಯೇಯವಾಗಿತ್ತು ಇದಕ್ಕಾಗಿಯೇ ಕಾಡನ್ನು ಕಡಿದು ಊರು ಮಾಡಿ ದೇವಾಲಯ ಮತ್ತು ಕೆರೆಗಳನ್ನು ಕಟ್ಟಿಸುತ್ತಿದ್ದ ಅನೇಕ ಶಾಸನೋಲ್ಲೇಖಗಳು ದೊರೆಯುತ್ತವೆ.

"ಜೀವನವು ಕ್ಷಣಿಕವಾದುದು. ದಿನದಿನವೂ ಆಯಸ್ಸು ಕ್ಷೀಣುಸುತ್ತಾ ಹೋಗುತ್ತದೆ. ಹೀಗಿರುವಾಗ ಮನಷ್ಯನು ಧರ್ಮವನ್ನು ಅವಲಂಬಿಸಿ ಪದ್ಧತಿಯನ್ನು ಸಂಪಾದಿಸಿಕೊಳ್ಳಬೇಕು.[394] ಎಂಬ ಭಾವನೆಗಳಿಂದ ಹಲವರು ಭೂಮಿ, ತೋಟ, ನಿವೇಶನಗಳನ್ನು ವ್ಯಯಮಾಡಿ ಸ್ವತಃ ತಾವೇ ಸಾಮಾಜಿಕ ಕಾರ್ಯಗಳನ್ನು ಮಾಡಿದ್ದಾರೆ. ಇನ್ನೂ ಅನೇಕರು ಸಾಮಾಜಿಕ ಕಾರ್ಯಗಳಿಗಾಗಿ ತಮ್ಮಲ್ಲಿರುವುದನ್ನು ಉದಾರವಾಗಿ ದಾನ ಮಾಡಿದ್ದಾರೆ. ದಾನ ನೀಡಲು ಭೂಮಿಯಾಗಲಿ,ಹಣವಾಗಲಿ ಏನೂ ಇಲ್ಲದವರು ಬೇರೆಯವರಿಂದ ಬೇಡಿ ಪಡೆದು, ಬಿನ್ನಹಗೈದು ದಾನ ಕೊಡಿಸಿದ್ದಾರೆ. ಇವರೆಲ್ಲರ ಉದ್ದೇಶವೂ ಒಂದೇ; ಅದು ಸಮಾಜೋಪಯೋಗಿ ಕಾರ್ಯಗಳನ್ನು ಮಾಡುವುದು.

ದಂಡನಾಯಕ ಪೋಚಿಮಯ್ಯನು "ಕೆರೆಯುಂ ಕೆರೆಯ ತುಂಬುಗಳುಮಂ ಬಾವಿಗಳುಮಂ ಮಾಡಿ ಯೂರೊಡೆ ವಾಳ್ಗೆಯುಂ ತಂನದಾಗಿ ಪೋಚೇಶ್ವರ' ದೇವಾಲಯವನ್ನು ಮಾಡಿಸಿದ್ದಾನೆ.[395] ಅಳಿವಿಂಡಿಯ ಕರುವಂಗುಲ್ಲಿಮಯ್ಯನು ಊರ ನಡುವೆ ಬಾವಿ, ಕಲ್ಲದೇಗುಲ ಮತ್ತು ಸತ್ರದ ಮನೆಯನ್ನು ಮಾಡಿಸುತ್ತಾನೆ.[396] ರಾಯಭಾರಿ ಈಶ್ವರದೇವ ಅಥವಾ ಈಸಪಯ್ಯ ದಂಡನಾಯಕರು ಛತ್ರ, ಅರವಂಟಿಗೆ, ಕೆರೆ, ಸಾಲೆ, ತೋಟ, ಬಾವಿ ತಟಾಕ, ಅಗ್ಗಿಷ್ಟಕೆ, ವಿಷ್ಣುಗೃಹ ಮತ್ತು ಶಿವಾಲಯಗಳನ್ನು ನಿರ್ಮಾಣ ಮಾಡಿಸಿದ್ದಾರೆ.[397] 'ಪಡೆದೊಡಮೆಯೊಳನಿತಿ ನಿತಂ ಮಡಗದೆ ಕೆರೆ, ಬಾವಿ, ದೇಗುಲಂಗಳ ಕೆಲಸಕ್ಕೊಡಮೆಯೆನೆ ತವಿಸಿ" ದಾನವನ್ನು ಮಾಡಿ ರೇವಗವುಂಡನು ಗಳಿಸಿದ ಸಂಪತ್ತನ್ನು ಸಾಮಾಜಿಕ ಕಾರ್ಯಗಳಿಗೆ ವಿನಿಯೋಗಿಸಿದ್ದಾನೆ.[398] ಗೊಯ್ದಿಸೆಟ್ಟಿಯ ಬಿನ್ನಹದ ಮೇರೆಗೆ ಮಲ್ಲೋಜ ಎಂಬುವವನು ಹಿರಿಯೂರಿನಲ್ಲಿ ಕೆರೆಯನ್ನು ಕಟ್ಟಿಸಿ, ದೇವಾಲಯವನ್ನು ಮಾಡಿಸಿದ್ದಾನೆ.[399] ಮಹಾವಿನಹಾಳ ಮುಂಮ್ಮುರಿ ದಂಡಗಳಲ್ಲಿ ಒಬ್ಬನಾದ ಕಲ್ಲಸೆಟ್ಟಿಯು ಕೆರೆಕಟ್ಟಿಸಿ, ಸಂತೋಷದಿಂದ ತೋಪು ಮಾಡಿಸಿ, ಹಸಿದವರಿಗೆ ಊಟ ನೀಡುವ ಸತ್ರ, ನೀರೆರೆವ ಅರವಂಟಿಗೆಗಳನ್ನು ನಿರ್ಮಿಸಿದ್ದಾನೆ.[400] ಕಿರಿಯ ಬಸವಾಚಾರಿ ಎಂಬುವವನು ಸಂಸಾರ ಭೀತನಾಗಿ ಕೆರೆಯನ್ನು ಕಟ್ಟಿಸಿ, ದೇವಾಲಯವನ್ನು ಮಾಡಿಸಿ ತಪಸ್ವಿಯಾಗಿದ್ದಾನೆ.[401] ಹಾಗೆಯೇ ಮಹಾಮಂಡಳೇಶ್ವರ ರೇವರಸನು ಅಗ್ರಹಾರ ಮದ್ರಕಿಯಲ್ಲಿ ನಾಮಗಾವುಂಡನ ಧರ್ಮೋತಕ್ಕೆಂದು ಭೂಮಿ, ಮನೆ, ಹೂದೋಟಗಳನ್ನು ದಾನ ಮಾಡಿದ್ದಾನೆ.[402]

ಪಟ್ಟಣ ಸ್ವಾಮಿ ನೊಕ್ಕಯ್ಯ ಎಂಬಾತನು ಹಿಂದೆ ತಾನು ಕಟ್ಟಿಸಿದ್ದ ಐದು ಕೆರೆಗಳಿಗೆ ನೀರು ಪೂರೈಕೆ ಮಾಡಲು 'ಉಗುರೆ' ಎಂಬ ಹಳ್ಳಕ್ಕೆ ತಟಾಕ ನಿರ್ಮಿಸಲು ೧೦೦ ಗದ್ಯಾಣಗಳನ್ನು ನೀಡಿದ್ದಾನೆ.[403]ಬೆಳವಂತಿಗೆಯ ಹಿರಿಯ ಕೆರೆಯ ಜೀರ್ಣೋದ್ಧಾರಕ್ಕೆ

ಶ್ರೀಧರಯ್ಯ ದಂಡನಾಯಕನು 'ಬೆಳವಂತಿಯ ಮುನ್ನೂರ್ವರಿಗೆ' ೧೦೦ ಗದ್ಯಾಣಗಳನ್ನು ದಾನ ನೀಡಿದ್ದಾನೆ.[404] ಸಾಮಂತ ಪಲ್ಲವ ನರಸಿಂಘ ದೇವನು ಸುವಿಪಾಕೆಯ ಪಶ್ಚಿಯ ದಿಕ್ಕಿನಲ್ಲಿ ಹೊಸ ಕೆರೆಯನ್ನು ಮಾಡಿಸಲು ೫೦ ಮತ್ತರು ಭೂಮಿಯನ್ನು ನೀಡಿದ್ದಾನೆ.[405]

ತಂತ್ರಪಾಳ ಗಂಗರ ಚಾವುಂಡಮಯ್ಯನಾಯಕ[406] ಹಾಗೂ ಚಾವುಂಡಯ್ಯ[407] ಎಂಬುವವರು ಕೆರೆಯ ನಿರ್ವಹಣೆಗೆ ಹಾಗೂ ಕೆರೆಯ ಜೀರ್ಣೋದ್ಧಾರಕ್ಕೆ ಭೂಮಿಯನ್ನು ದಾನ ಮಾಡಿದ್ದಾರೆ.

ಕೆರೆ ಅರವಟ್ಟಿಗೆಗಳಿಗೆ ದಾನಗಳನ್ನು ನೀಡಿದಂತೆಯೇ ಅಗ್ಗಿಷ್ಟಕೆ, ನಿವೇಶನ, ಆರಾಮ (ಉದ್ಯಾನ)ಗಳಿಗೂ ನೀಡಲಾಗಿದೆ. ಬೆಂಕಿ ಆರದಂತೆ ಅಗ್ನಿಯನ್ನು ಇಡುವ ಸ್ಥಳ ಅಥವಾ ಲೋಹದ ಸಾಧನಕ್ಕೆ ಅಗ್ಗಿಷ್ಟಿಕೆ ಎನ್ನುವರು. ಪ್ರಾಚೀನ ಕಾಲದಲ್ಲಿ ಬೆಂಕಿಯನ್ನು ಹೊತ್ತಿಸುವುದು ಸುಲಭವಾಗಿಲ್ಲದ ಕಾರಣ ಹೊತ್ತಿಸಿದ ಬೆಂಕಿ ಆರದಂತೆ ನೋಡಿಕೊಳ್ಳಲು ಊರಿನ ಮಠ, ದೇವಾಲಯ, ಶ್ರದ್ಧಾವಂತ ವೈದಿಕರ ಮನೆಗಳಲ್ಲಿ ಅಗ್ಗಿಷ್ಟಗೆಯ ವ್ಯವಸ್ಥೆ ಮಾಡುತ್ತಿದ್ದರು. ಸದಾಕಾಲ ಅಗ್ಗಿಷ್ಟಗೆಯಲ್ಲಿ ಬೆಂಕಿಯಿರುವಂತೆ ನೋಡಿಕೊಳ್ಳಲು, ಅದರ ನಿರ್ವಹಣೆಗೆ ದತ್ತಿ ಬಿಟ್ಟಿರುವುದನ್ನು ಶಾಸನಗಳಲ್ಲಿ ಕಾಣಬಹುದಾಗಿದೆ. ಮುದ್ದಲದೇವಿ ಎಂಬಾಕೆ ಶಿವಪುರ ಅಗ್ರಹಾರದಲ್ಲಿ ಅಗ್ಗಿಷ್ಟಗೆಯನ್ನು ನೋಡಿಕೊಳ್ಳಲು ೬ ಗದ್ಯಾಣಗಳನ್ನು ದಾನ ನೀಡಿದ್ದಾಳೆ. ಆ ಹಣವನ್ನು ಬಡ್ಡಿಗೆ ಬಿಟ್ಟು ಬಂದ ಬಡ್ಡಿಯಲ್ಲಿ ಅಗ್ಗಿಷ್ಟಗೆಯ ನಿರ್ವಹಣೆ ಮಾಡಬೇಕೆಂದು ಕ್ರಿ.ಶ. ೧೧೮೦ರ ಶಾಸನವೊಂದು ಉಲ್ಲೇಖಿಸಿದೆ.[408] ತುಂಬಳ ಅಗ್ರಹಾರದಲ್ಲಿನ ವಿದ್ಯಾದಾನಕ್ಕೆ ದತ್ತಿ ನೀಡುವಾಗ ಅಗ್ಗಿಷ್ಟಗೆಯನ್ನು ನೋಡಿಕೊಳ್ಳುವ ಬ್ರಾಹ್ಮಣನಿಗೂ ೨ ಗದ್ಯಾಣಗಳನ್ನು ದಾನ ನೀಡಲಾಗಿದೆ.[409] ಪ್ರಾಚೀನ ಕಾಲದಲ್ಲಿ ದೇವಾಲಯಗಳು ಅತಿಥಿ, ಅಭ್ಯಾಗತರಿಗೆ, ಪ್ರವಾಸಿಗರಿಗೆ, ದೀನರಿಗೆ ಆಶ್ರಯ ತಾಣಗಳಾಗಿದ್ದವು. ಬಂದು ಹೋಗುವ ಯಾತ್ರಿಕರಿಗೆ ಹಾಗೂ ಭಕ್ತರಿಗೆ ಉಳಿದುಕೊಳ್ಳಲು ಅಂದು ಇಂದಿನಂತೆ ವಸತಿ ನಿಲಯಗಳು ವೈಯಕ್ತಿಕವಾಗಿರಲಿಲ್ಲ. ದೇವಾಲಯಗಳಲ್ಲಿಯೇ ಅದಕ್ಕೆಂದು ಛತ್ರಗಳು, ದಾನ ಶಾಲೆಗಳಿರುತ್ತಿದ್ದವು. ಇವುಗಳಿಗಾಗಿಯೇ ಅನೇಕರು ದಾನಗಳನ್ನು ನೀಡಿದ್ದಾರೆ.

ಪಿರಿಯ ಮೊಸಂಗಿಯ ಪೋತಿಸೆಟ್ಟಿ ಎಂಬುವನು ಮುಖಸ್ಥಾನ ದೇವಾಲಯದ ತಪೋಧನರಿಗೆ, ಬ್ರಾಹ್ಮಣರ ಛತ್ರಕ್ಕೆಂದು ೩೫ ಮತ್ತುರು ಭೂಮಿಯನ್ನು ದಾನ ನೀಡಿದ್ದಾನೆ.[410] ಮಹಾಸಾಮಂತ ರಾಜರಸನು ಮೊರಂಬದಲ್ಲಿ ರಾಜಜಿನಾಲಯದ ನಿವೇಶನಕ್ಕಾಗಿ ಭೂದಾನ ಮಾಡಿದ್ದಾನೆ.[411] ಬಾಗಳಿಯ ಪೆರ್ಗ್ಗಡೆ ನರಸಿಂಘಯ್ಯನು ಅಲ್ಲಿನ ತಪೋಧನರ ಛತ್ರಕ್ಕೆ ಭೂ ದಾನಗೈದಿದ್ದಾನೆ. ಚಕ್ರವರ್ತಿ ಒಂದನೆಯ ಜಗದೇಕ ಮಲ್ಲನ ಅಕ್ಕ ಅಕ್ಕಾದೇವಿಯು ಪೆರೂರು ಅಗ್ರಹಾರದ ೫೦೦ ವಿದ್ಯಾರ್ಥಿಗಳ ಶಯನಕ್ಕಾಗಿ ೫೦ ಮನೆಗಳನ್ನು[412] ಹಾಗೂ ಜಗದೇಕಮಲ್ಲ ದೇವನ ರಾಣಿ ಸೋಮಲದೇವಿಯು ಬಳ್ಳನಿಟ್ಟಿಗೆಯ ಬಸದಿಗೆ ೫ ಮನೆಗಳನ್ನು ದಾನ ನೀಡಿದ್ದಾರೆ.[413] ಹೀಗೆ ಇನ್ನೂ ನೂರಾರು ಸಂಖ್ಯೆಯಲ್ಲಿ ಸಾಮಾಜಿಕ ಕಾರ್ಯಗಳಿಗೆ ದಾನಗಳನ್ನು ನೀಡಿರುವುದು ಶಾಸನಗಳಿಂದ ತಿಳಿದುಬರುತ್ತದೆ.

ಈ ಮೇಲೆ ಚರ್ಚಿಸಿದ ದಾನದ ಉದ್ದೇಶಗಳಿಂದ ಕಲ್ಯಾಣ ಚಾಲುಕ್ಯರ ಅವಧಿಯಲ್ಲಿ ಜನರು ವಿವಿಧ ದೃಷ್ಟಿಕೋನಗಳಿಂದ ಬೇರೆ ಬೇರೆ ಉದ್ದೇಶ ಸಾಧನೆಗೆ ದಾನ ನೀಡಿರುವುದು ಸ್ಪಷ್ಟವಾಗಿ ತಿಳಿದುಬರುತ್ತದೆ. ದಾನಗಳ ಉದ್ದೇಶಗಳನ್ನು ವರ್ಗೀಕರಣ ಮಾಡುವಾಗ ಸಾಮಾನ್ಯವಾಗಿ

ಕೆಲವು ಗೊಂದಲಗಳು ಆಗುವುದುಂಟು. ದಾನಗಳನ್ನು ನೀಡುವಾಗ ಕೇವಲ ಒಂದೇ ಉದ್ದೇಶಕ್ಕಾಗಿ ನೀಡಿರುವುದು ವಿರಳ, ಹೀಗಾಗಿ ಒಂದೇ ಶಾಸನದಲ್ಲಿನ ದಾನವನ್ನು ಯಾವ ಯಾವ ಉದ್ದೇಶಗಳಿಗಾಗಿ ಮತ್ತು ಯಾರಿಗೆ ನೀಡಲಾಗಿದೆ ಎಂಬುದನ್ನು ಸಾಧ್ಯವಾದಷ್ಟು ಮಟ್ಟಿಗೆ ಸರಳಗೊಳಿಸಿ ವಿವರಿಸಲಾಗಿದೆ. ಯಾವ ಯಾವ ಉದ್ದೇಶಗಳಿಗೆ ದಾನಗಳನ್ನು ನೀಡಿದ್ದಾರೆ ಎಂಬುದನ್ನು ತಿಳಿದಾದ ಮೇಲೆ ಒಟ್ಟು ಯಾವ ಯಾವ ರೂಪದಲ್ಲಿ ದಾನಗಳನ್ನು ನೀಡಲಾಗಿದೆ ಎಂಬುದನ್ನು 'ಪ್ರಮುಖ ದಾನಗಳು' ಎಂಬ ಶಿರ್ಷಿಕೆಯಡಿಯಲ್ಲಿ ವಿವರಿಸಲಾಗಿದೆ.

## ೪.೫ ದಾನಗಳ ವರ್ಗೀಕರಣ

ಈ ಹಿಂದೆ 'ದಾನದ ಅರ್ಥ, ಸ್ವರೂಪ ಮತ್ತು ಇತಿಹಾಸ' ಎಂಬ ಶಿರ್ಷಿಕೆಯ ಮೂರನೆಯ ಅಧ್ಯಾಯದಲ್ಲಿ ದಾನದ ವಿಧಗಳನ್ನು ಸಾದ್ಯಂತವಾಗಿ ವಿಶ್ಲೇಷಿಸಲಾಗಿದೆ. ಶಾಸನಗಳಲ್ಲಿ ಕಂಡುಬರುವ ಷೋಡಶ ಮಹಾದಾನಗಳ' ಉಲ್ಲೇಖದಿಂದ ಹಾಗೂ ಮೂರನೆಯ ಸೋಮೇಶ್ವರನ 'ಮಾನಸೋಲ್ಲಾಸ'ದಲ್ಲಿನ ಉಲ್ಲೇಖದಿಂದ ಹದಿನಾರು ವಿಧದ ದಾನಗಳು ಇದ್ದವು ಎಂಬುದು ತಿಳಿದುಬರುತ್ತದೆ. ಇವು ದಾನವನ್ನು ನೀಡುವ ವಿಧಾನವನ್ನನುಸರಿಸಿ ವರ್ಗೀಕರಿಸಿದ ದಾನಗಳು. ಇನ್ನೊಂದು ವಿಧದಲ್ಲಿ ವಸ್ತುವನ್ನಾಧರಿಸಿ ದಾನ ನೀಡಿದ ವರ್ಗೀಕರಣವನ್ನು ಮಾಡಲಾಗುತ್ತದೆ. ವಸ್ತುವನ್ನಾಧರಿಸಿ ವರ್ಗೀಕರಣ ಮಾಡುವಾಗ ಭೂಮಿದಾನ, ಹಣದಾನ, ಸುಂಕದಾನ, ಗ್ರಾಮದಾನ, ಗಾಣದಾನ, ತೋಟದಾನ, ಮನೆದಾನ ಮುಂತಾದವುಗಳನ್ನು ಕಾಣುತ್ತೇವೆ. ಕಲ್ಯಾಣ ಚಾಲುಕ್ಯರ ದಾನ-ದತ್ತಿಗಳಲ್ಲಿ ವಸ್ತುವನ್ನಾಧರಿಸಿದ ಹಾಗೂ ವಿಧಾನವನ್ನಾಧರಿಸಿದ ದಾನ ಎಂದು ವಿಂಗಡಿಸಿಕೊಳ್ಳಬಹುದು.

ಪ್ರಸ್ತುತ ಈ ಶಿರ್ಷಿಕೆಯಲ್ಲಿ ಅಧ್ಯಯನದ ಅನುಕೂಲಕ್ಕೆ ೧. ಭೂಮಿದಾನ ೨. ಹಣದಾನ ೩. ಗ್ರಾಮದಾನ ೪. ಸುಂಕದಾನ ೫. ಗಾಣದಾನ ೬. ಅಂಗಡಿದಾನ ೭. ಮನೆದಾನ ೮. ತೋಟದಾನ ೯. ಕನ್ಯಾದಾನ ೧೦. ಮಹಾದಾನ ಮತ್ತು ೧೧. ಇತರ ದಾನಗಳು (ಗೋದಾನ, ವಸ್ತ್ರದಾನ, ಡೋಣಿದಾನ, ಆಭರಣದಾನ, ದೇಹದಾನ, ಶಾಸ್ತ್ರದಾನ, ಔಷಧದಾನ) ಎಂದು ವರ್ಗೀಕರಣ ಮಾಡಲಾಗಿದೆ. ದಾನಗಳನ್ನು ಕೆಲವು ನಿಯಮಗಳಿಗೆ ಬದ್ಧವಾಗಿ ನೀಡುತ್ತಿದ್ದುದನ್ನು ಈ ಹಿಂದೆಯೇ ಚರ್ಚಿಸಲಾಗಿದೆ. ಅದಾಗ್ಯೂ ದಾನಗಳನ್ನು ನೀಡಿದ ವಿಧಾನವನ್ನಾಧರಿಸಿ ಈ ಕೆಳಗಿನಂತೆ ಹದಿನೈದು ವಿಧದ ದಾನಗಳ ವಿಧಾನಗಳನ್ನು ಗುರುತಿಸಬಹುದು.

೧. ಸರ್ವನಮಸ್ಯ
೨. ಸರ್ವನಮಸ್ಯ ಸರ್ವಬಾಧಾ ಪರಿಹಾರ
೩. ಸರ್ವನಮಸ್ಯ ತ್ರಿಭೋಗಾಭ್ಯಂತರ

೪. ಸರ್ವನಮಸ್ಯ ತ್ರಿಭೋಗಾಭ್ಯಂತರ ಸರ್ವಬಾಧಾ ಪರಿಹಾರ

೫. ಪರಮೇಶ್ವರ ದತ್ತಿ

೬. ಪರಮೇಶ್ವರ ದತ್ತಿ – ಸರ್ವನಮಸ್ಯ

೭. ತ್ರಿಭೋಗಾಭ್ಯಂತರ

೮. ತ್ರಿಭೋಗಾಭ್ಯಂತರ ಪರಮೇಶ್ವರ ದತ್ತಿ

೯. ಏಕಭೋಗ

೧೦. ಉಭಯಸಾಮ್ಯ

೧೧. ಕಟ್ಟುಗುತ್ತಗೆ

೧೨. ಕಟ್ಟುಗುತ್ತಗೆ ಪಿಂಡಾದಾನ

೧೩. ಸರ್ವಾಯಶುದ್ಧಿ ಕಟ್ಟುಗುತ್ತಗೆ ಪಿಂಡಾದಾನ

೧೪. ಕ್ರಯದಾನ

೧೫. ಅಚಂದ್ರಾರ್ಕ ತಾರಂಬರ ದಾನ.

ಇವುಗಳ ಕುರಿತು ಸಂಕ್ಷಿಪ್ತ ವಿವರವನ್ನು ಈ ಕೆಳಗಿನಂತೆ ನೋಡೋಣ.

**೧. ಸರ್ವನಮಸ್ಯ :** 'ಸರ್ವಮನಸ್ಯ' ಎಂದರೆ ತೆರಿಗೆರಹಿತವಾಗಿ ಎಂದು ಡಿ.ಸಿ. ಸರ್ಕಾರ ಅವರು ಅರ್ಥೈಸಿದ್ದಾರೆ.[414]. ಸರ್ವನಮಸ್ಯ ಎನ್ನುವುದು 'ಸರ್ವನಮ ಶಿವಾಯ' ಎನ್ನುವುದನ್ನು ಸೂಚಿಸುತ್ತದೆ. 'ಸರ್ವನಮಸ್ಯವಾಗಿ.[415], 'ಸರ್ವನಮಸ್ಯದತ್ತ್ಯಾಗಿ.'[416], 'ಸರ್ವ್ವನಮ ಶಿವಾಯವಾಗಿ.'[417], ಇತ್ಯಾದಿ ಕ್ರಮದಲ್ಲಿ ದತ್ತಿ ಬಿಟ್ಟಿರುವುದು ನಿಶ್ಚಿತವಾದ ತೆರಿಗೆಗಳಿಂದ ಮುಕ್ತವಾಗುವಂತೆ ನೀಡಿದ ದಾನವನ್ನು ಹೇಳುತ್ತದೆ.

**೨. ಸರ್ವನಮಸ್ಯ ಸರ್ವಬಾಧಾ ಪರಿಹಾರ :** ಭೂಮಿಯ ಮೇಲಿನ ಕಿರುಕುಳ ಮುಂತಾದ ಬಾಧೆ ಎನಿಸಬಹುದಾದ ಸಣ್ಣ ಸುಂಕಗಳು ಇರದಂತೆ ಪರಿಹಾರ ಮಾಡಿ ಕೊಟ್ಟ ದಾನವು ಸರ್ವನಮಸ್ಯ ಸರ್ವಬಾಧಾ ಪರಿಹಾರವಾಗುತ್ತಿತ್ತು. ಹಲವು ಶಾಸನಗಳು ಸರ್ವನಮಸ್ಯ ಸರ್ವಬಾಧಾ ಪರಿಹಾರವಾಗಿ ದಾನ ನೀಡಿರುವುದನ್ನು ಉಲ್ಲೇಖಿಸುತ್ತವೆ.[418]

**೩. ಸರ್ವನಮಸ್ಯ ತ್ರಿಭೋಗಾಭ್ಯಂತರ :** ಇಲ್ಲಿ ಸರ್ವನಮಸ್ಯ–ತ್ರಿಭೋಗ–ಅಭ್ಯಂತರ ಎಂಬ ಮೂರು ಪದಗಳಿವೆ. ಮೂರು ತಲೆಮಾರುಗಳವರೆಗೆ ತೆರಿಗೆ ರಹಿತವಾಗಿ ನೀಡಿದ ದಾನವನ್ನು ಇದು ಸೂಚಿಸುತ್ತದೆ.[419]

**೪. ಸರ್ವನಮಸ್ಯ ತ್ರಿಭೋಗಾಭ್ಯಂತರ ಸರ್ವಬಾಧಾ ಪರಿಹಾರ :** ಮೂರು ತಲೆಮಾರುಗಳ ವರೆಗೆ ಭೂಮಿಯ ಮೇಲಿನ ಕಿರುಕುಗಳದಂಥ ಸಣ್ಣ ಸುಂಕಗಳನ್ನು ಪರಿಹಾರ ಮಾಡಿ ಕೊಟ್ಟ ದಾನವು ಸರ್ವನಮಸ್ಯ ತ್ರಿಭೋಗಾಭ್ಯಂತರ ಸರ್ವಬಾಧಾ ಪರಿಹಾರ.

೫. **ಪರಮೇಶ್ವರ ದತ್ತಿ** : 'ಚಕ್ರವರ್ತಿಯ ಕಾರುಣ್ಯವಂ ಪಡೆದ'[420] ದತ್ತಿಯೇ ಪರಮೇಶ್ವರ ದತ್ತಿ. ಆಳುವ ಚಕ್ರವರ್ತಿ ಅಥವಾ ಮಾಂಡಲಿಕನಿಂದ ಅನುಮತಿ ಪಡೆದು ನೀಡಲಾಗುತ್ತಿದ್ದ ದತ್ತಿ ಇದಾಗಿದೆ.

೬. **ಪರಮೇಶ್ವರ ದತ್ತಿ – ಸರ್ವನಮಸ್ಯ** : ಆಳುವ ಚಕ್ರವರ್ತಿ ಅಥವಾ ಮಾಂಡಳಿಕನಿಂದ ಅನುಮತಿ ಪಡೆದು ನೀಡಲಾಗುತ್ತಿದ್ದ ದತ್ತಿಯ ತೆರಿಗೆಗಳನ್ನು ರದ್ದು ಮಾಡಿ, ಬಾಧೆಗಳನ್ನು ಪರಿಹರಿಸಿ ಕೊಟ್ಟರೆ, ಆಗ ಅದು 'ಪರಮೇಶ್ವರದತ್ತಿ ಸರ್ವನಮಸ್ಯ' ಆಗುತ್ತದೆ.[421]

೭. **ತ್ರಿಭೋಗಾಭ್ಯಂತರ ಸಿದ್ಧಿ** : 'ತ್ರಿಭೋಗ' ಎನ್ನುವುದಕ್ಕೆ ಏಕಾಭಿಪ್ರಾಯದ ಅರ್ಥಗಳಲ್ಲಿ. ಡಾ.ಎಂ. ಚಿದಾನಂದಮೂರ್ತಿ ಅವರು ಫ್ಲೀಟರವರ ಅಭಿಪ್ರಾಯವನ್ನು ತಿಳಿಸುತ್ತ "ಮೂರು ತಲೆಮಾರುಗಳು, ಅನುಭವಿಸುವ ದಾನ' ಎಂಬುದನ್ನು ಪುಷ್ಟೀಕರಿಸಿದ್ದರೆ;[422] ಡಿ.ಸಿ. ಸರ್ಕಾರ ಅವರು 'ಮೂರನೆ ಒಂದು ಭಾಗದ ಫಲವನ್ನು ಅನುಭುವಿಸುವ ಹಕ್ಕು' (ಇನ್ನುಳಿದ ಎರಡು ಭಾಗಗಳು ಸಮನಾಗಿ ದೇವರು ಮತ್ತು ಬ್ರಾಹ್ಮಣರಿಗೆ ಸೇರುತ್ತವೆ) ಎಂದು ಅರ್ಥೈಸಿದ್ದಾರೆ[423]. ಅಂದರೆ ಖಾಸಗಿಯಾಗಿ ಒಬ್ಬ ವ್ಯಕ್ತಿ, ದೇವರು ಮತ್ತು ಬ್ರಾಹ್ಮಣರಿಗೆ ಸಂಯುಕ್ತವಾಗಿ ನೀಡಿದ ದಾನವೇ 'ತ್ರಿಭೋಗಾಭ್ಯಂತರ ಸಿದ್ಧಿ'ಯಾಗಿದೆ.

೮. **ತ್ರಿಭೋಗಾಭ್ಯಂತರ ಪರಮೇಶ್ವರ ದತ್ತಿ** : ರಾಜ ಅಥವಾ ಮಾಂಡಳಿಕರಿಂದ ಅನುಮತಿ ಪಡೆದು, ವ್ಯಕ್ತಿ, ದೇವರು ಮತ್ತು ಬ್ರಾಹ್ಮಣರಿಗೆ ನೀಡಿದ ಸಂಯುಕ್ತ ದಾನವೇ 'ತ್ರಿಭೋಗಾಭ್ಯಂತರ ಪರಮೇಶ್ವರ ದತ್ತಿ'.

೯. **ಏಕಭೋಗ** : 'ಏಕಭೋಗ' ವೆಂದರೆ ಒಬ್ಬನೇ ವ್ಯಕ್ತಿಗೆ ಸೇರಿದ ಮತ್ತು ಒಬ್ಬನೇ ವ್ಯಕ್ತಿಯು ಒಂದು ತಲೆಮಾರಿನವರೆಗೆ ಅನುಭವಿಸಬಹುದಾದ ಸೀಮಿತ ದಾನವೇ ಏಕಭೋಗ.

ಏಕಭೋಗ, ತ್ರಿಭೋಗಗಳಂತೆ 'ಅಷ್ಟಭೋಗ ತೇಜಸ್ವಾಮ್ಯ' ಎಂಬ ಪದವೂ ಶಾಸನಗಲ್ಲಿ ಕಾಣಸಿಗುತ್ತದೆ. ನಿಧಿ, ನಿಕ್ಷೇಪ, ಜಲ, ಪಾಷಾಣ, ಅಕ್ಷೀಣ, ಆಗಾಮಿ, ಜಲ ಮತ್ತು ತರು ಇವೇ ಅಷ್ಟಭೋಗಗಳು. ಇವು ಎಂಟು ಬಗೆಯ ಭೂಮಿಯ ಒಡೆತನದ ಅಧಿಕಾರಗಳು.[424] ಹಾಗೆಯೇ ಭೂಮಿಯ ವಿಕ್ರಯ, ದಾನ, ವಿನಿಮಯ, ಜಲ, ತರು ಪಾಷಾಣ, ನಿಧಿ ನಿಕ್ಷೇಪಗಳನ್ನು ಅನುಭವಿಸುವ ಹಕ್ಕೇ 'ಅಷ್ಟಭೋಗ ತೇಜಸ್ವಾಮ್ಯ' ಎಂದು ಕರೆಯುವರು. ಮನೆ, ಹಾಸುಗೆ, ವಸ್ತ್ರ, ಆಭರಣ, ಸ್ತ್ರೀ, ಪುಷ್ಪ, ಗಂಧ, ತಾಂಬೂಲ ಇವುಗಳನ್ನು ಅಷ್ಟಭೋಗಗಳೆಂದೇ ತಿಳಿಯಲಾಗಿದೆ.[425] ಆದರೆ, ಭೂಮಿಗೆ ಸಂಬಂಧಿಸಿದಂತೆ ನಿಧಿ, ನಿಕ್ಷೇಪ, ಜಲ ಇತ್ಯಾದಿಗಳೇ ಅಷ್ಟಭೋಗಗಳು ಇವುಗಳಲ್ಲಿ ಯಾವುದಾದರೊಂದನ್ನು ಅನುಭವಿಸುವ ಹಕ್ಕು ನೀಡಿದರೆ 'ಏಕಭೋಗ'; ಮೂರನ್ನು ಅನುಭವಿಸುವ ಹಕ್ಕನ್ನು ನೀಡಿದರೆ ಅದು 'ತ್ರಿಭೋಗ' ಎಂದೂ ತಿಳಿಯಬಹುದು.

೧೦. **ಉಭಯ ಸಾಮ್ಯ** : 'ಉಭಯ ಸಾಮ್ಯ'[426], ಉಭಯ ಸಾಮ್ಯದಿಂ[427], ಉಭಯ ಸಾಮ್ಯಾಭ್ಯಂತರ ಸಿದ್ಧಿ[428] ಇತ್ಯಾದಿ ಉಲ್ಲೇಖಗಳಿಂದ ಉಭಯ ಸಾಮ್ಯ ಎನ್ನುವುದು ಎರಡು ವಿಧದ ಒಡೆತನ ಅಥವಾ ಹಕ್ಕನ್ನು ಸೂಚಿಸುತ್ತದೆ ಎಂದು ತಿಳಿಯಬಹುದು. ದಾನವಾಗಿ ಪಡೆದ ಭೂಮಿಯನ್ನು ಸ್ವಂತವಾಗಿ ಕೃಷಿ ಮಾಡುವ ಅಥವಾ ಬೇರೆಯವರಿಂದ ಕೃಷಿ ಮಾಡಿಸುವ ಇಲ್ಲವೆ ದಾನವಾಗಿ ಪಡೆದ ಭೂಮಿಯಿಂದ ಧನರೂಪದಲ್ಲಾಗಲಿ, ಧಾನ್ಯರೂಪದಲ್ಲಾಗಲಿ ಫಲ ಪಡೆಯುವ ಅಧಿಕಾರ ಉಭಯ ಸಾಮ್ಯ ಎಂದು ಭಾವಿಸಬಹುದು.

೧೧. **ಕಟ್ಟುಗುತ್ತಗೆ** : ನಿಗದಿತ ಅವಧಿ ಅಥವ ನಿರ್ದಿಷ್ಟ ಸಮಯದಲ್ಲಿ ಭೂಮಿಯನ್ನು ಉಪಯೋಗಿಸಿಕೊಂಡು ಇಂತಿಷ್ಟು ಹಣ ಅಥವಾ ಧಾನ್ಯವನ್ನು ಕೊಡಬೇಕೆಂಬ ನಿಬಂಧನೆ ಅಥವಾ ಒಪ್ಪಂದವು ಇರುತ್ತದೆ. ಇಂಥ ಒಪ್ಪಂದದಲ್ಲಿ ನಿಗದಿಯಾದ ಧನ ಅಥವ ಧಾನ್ಯದ ಪ್ರಮಾಣವೇ 'ಕಟ್ಟುಗುತ್ತಗೆ' ಅಥವಾ 'ಗುತ್ತಗೆ'ಯಾಗಿದೆ. ಕಟ್ಟುಗುತ್ತಗೆಯು ಸಾಮಾನ್ಯವಾಗಿ ಧನರೂಪದಲ್ಲೇ ಇರುತ್ತಿತ್ತು. ತೆಂಕಣಯ್ಯವಳೆಯ ಮಹಾಜನ ಐನೂರ್ವರು, ಮಹಾನಾಡುಗಳು, ಮತ್ತಿತರರು ಸೇರಿ, ಊರಿಗೆ ಸರ್ವಬಾಧಾ ಪರಿಹಾರವಾಗಿ, ಕಟ್ಟುಗುತ್ತಗೆಯಾಗಿ ತೆರುವ ತೆರ ಬಾಗಿಲಿಗೆ (ಮನೆಗೆ) ಎರಡು ಪಣ ಎಂದು ತೀರ್ಮಾನಿಸಿದ್ದಾರೆ.[429] ಹಾಗೆ ಕವಿಳನಾಥ ದೇವರ ಹಳ್ಳಿಯ ಮೈಳುಗಿದೇವನಿಗೆ, ಮಹಾಲಕ್ಷ್ಮೀದೇವಿಯ ಶ್ರೀಕಾರ್ಯಕ್ಕೆಂದು ಗಿರಿಯಾದೇವಿಯಕ್ಕ ಮತ್ತು ಮಹಾಜನರು, ಸಮಸ್ತ ಪ್ರಜೆ ಗಾವುಂಡಗಳು ವರುಷಕ್ಕೆ ೧೫ ಗದ್ಯಾಣ ಕಟ್ಟುಗುತ್ತಗೆ ನೀಡುತ್ತಾರೆ[430]. ದೇವಾಲಯಗಳಿಗೆ ನೀಡಿದ್ದ ಎಲ್ಲ ಭೂಮಿಯನ್ನು ದೇವಾಲಯದವರೇ ಉಳುಮೆ ಮಾಡಲು ಆಗುತ್ತಿರಲಿಲ್ಲ. ಅಂಥ ಸಂಧರ್ಭದಲ್ಲಿ ದೇವಾಲಯದ ಒಡೆತನದ ಭೂಮಿಯನ್ನು ಬೇರೆಯವರಿಗೆ **'ಕಟ್ಟುಗುತ್ತಗೆ'** ನೀಡಿ ಅದರಿಂದ ಬಂದ ಹಣವನ್ನು ದೇವಕಾರ್ಯಗಳಿಗೆ ಬಳಸುತ್ತಿದ್ದರು.

೧೨. **ಕಟ್ಟುಗುತ್ತಗೆ ಪಿಂಡಾದಾನ** : ಪಿಂಡಾದಾನ ಎಂದರೆ, ದಾನವಾಗಿ ಕೊಟ್ಟ ಭೂಮಿಯ ಮೇಲಿನ ಅಲ್ಪಕರ ಅಥವಾ ಒಟ್ಟು ಮೊತ್ತ.[431] **'ಕಟ್ಟುಗುತ್ತಗೆ ಪಿಂಡಾದಾನವು'** ದಾನವಾಗಿ ಕೊಟ್ಟ ಭೂಮಿಯ ಕಟ್ಟುಗುತ್ತಗೆಯಿಂದ ಬಂದ ಒಟ್ಟು ಮೊತ್ತವನ್ನು ಇದು ಸೂಚಿಸುತ್ತದೆ.

೧೩. **ಸರ್ವಾಯಶುದ್ಧಿ ಕಟ್ಟುಗುತ್ತಗೆ ಪಿಂಡಾದಾನ** : ಸರ್ವಾಯ ಶುದ್ಧಿ ಎಂದರೆ, ಎಲ್ಲ ಕರ (ತೆರಿಗೆ)ಗಳಿಂದ ವಿಮುಕ್ತಿ ಎಂದರ್ಥ[432]. 'ಸರ್ವಾಯ ಶುದ್ಧಿ ಕಟ್ಟುಗುತ್ತಗೆ ಪಿಂಡಾದಾನ'ವು ಎಲ್ಲ ಕರಗಳಿಂದ ಮುಕ್ತವಾದ ಭೂಮಿಯನ್ನು ಗುತ್ತಿಗೆ ಕೊಟ್ಟು ಅದರಿಂದ ಬಂದ ಒಟ್ಟು ಮೊತ್ತವನ್ನು ಸೂಚಿಸುತ್ತದೆ.

೧೪. **ಕ್ರಯದಾನ** : ಭೂಮಿಯನ್ನು ಕ್ರಯಕ್ಕೆ (ಖರೀದಿಗೆ) ತೆಗೆದುಕೊಂಡು ಅದನ್ನು ದಾನ ಮಾಡುವುದನ್ನು ಕ್ರಯದಾನ ಎನ್ನುವರು.

೧೫. ಅಚಂದ್ರಾರ್ಕ ತಾರಾಂಬರ ದಾನ : 'ಅಚಂದ್ರಾರ್ಕ ತಾರಾಂಬರ ದಾನ' ಎಂದರೆ, ಶಾಶ್ವತವಾಗಿ ನೀಡಿದ ದಾನ. ಸೂರ್ಯ, ಚಂದ್ರ, ನಕ್ಷತ್ರ, ಆಕಾಶಗಳಿರುವವರೆಗೂ ದಾನವನ್ನು ಪಡೆದಿದ್ದ ವಸ್ತು, ಶಾಶ್ವವಾಗಿ ದಾನ ಪಡೆದವನಿಗೆ ಸೇರುತ್ತದೆ ಎಂಬುದು ಇದರ ಅರ್ಥ. ದಾನ ಪಡೆದವನು ಶಾಶ್ವತವಾಗಿ ದಾನದ ವಸ್ತುವಿನ ಮೇಲೆ ಅಧಿಕಾರ ಹೊಂದಿರುತ್ತಾನೆ.

ಹೀಗೆ ದಾನದ ವಿಧಾನ ಅಥವಾ ನಿಬಂಧನೆಗಳಿಗೆ ಅನುಗುಣವಾಗಿ ದಾನಗಳ ವರ್ಗೀಕರಣ ಮಾಡಬಹುದೆಂಬುದನ್ನು ಈ ಹಿಂದೆಯೇ ತಿಳಿದಿದ್ದೇವೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ನೀಡಲಾದ ಪ್ರಮುಖ ದಾನಗಳನ್ನು ಮುಂದಿನ ವಿವರಣೆಯಲ್ಲಿ ತಿಳಿಯೋಣ.

## ೪.೬ ಪ್ರಮುಖ ದಾನಗಳು

ದಾನವಾಗಿ ಇಂಥದ್ದೇ ವಸ್ತುವನ್ನು ಕೊಡಬೇಕೆಂಬ ನಿಯಮವಿಲ್ಲ. ಆದರೆ, ಯಾವುದು ಹೆಚ್ಚು ಉಪಯುಕ್ತವಾಗಲ್ಲದೋ, ಯಾರಿಗೆ ಯಾವುದರ ಅವಶ್ಯಕತೆಯಿದೆಯೋ ಅಂಥದ್ದನ್ನು ನೀಡಿದರೆ ಹೆಚ್ಚು ಶ್ರೇಯಸ್ಕರವೆಂಬುದು ಮಹತ್ವದ್ದಾಗಿದೆ. ದಾನವು ವಸ್ತುರೂಪದಲ್ಲೇ ಇರಬೇಕೆಂಬುದಿಲ್ಲ. ಸೇವೆಯ ರೂಪದಲ್ಲಿದ್ದರೂ ಅದರ ಪಾವಿತ್ರ್ಯತೆ ಅಷ್ಟೇ ಇರುತ್ತದೆ. ಭೂಮಿದಾನ, ಹಣದಾನ, ಸುಂಕದಾನ, ಗಾಣದಾನ, ಮನೆದಾನ, ತೋಟದಾನ ಮುಂತಾದವುಗಳು ಭೌತಿಕವಾದ ದಾನಗಳೆನಿಸುತ್ತವೆ. ಹಾಗೆ ವಿದ್ಯಾದಾನ ಅಭಯದಾನಗಳು ಅಭೌತಿಕ ದಾನಗಳೆನಿಸುತ್ತವೆ. ದಾನ ನೀಡಿದುದರಲ್ಲಿ ಭೌತಿಕ ದಾನಗಳ ಸಂಖ್ಯೆಯೇ ಹೆಚ್ಚು. ಭೂಮಿ, ಗ್ರಾಮ, ಹಣ, ಸುಂಕ, ತೋಟ, ಮನೆ, ಗಾಣ, ಅಂಗಡಿದಾನಗಳು ಸಂಖ್ಯೆ ಮತ್ತು ಪ್ರಮಾಣಗಳೆರಡರಲ್ಲೂ ಹೆಚ್ಚಾಗಿವೆ. "ಉಳ್ಳವರು ಶಿವಾಲಯವ ಮಾಡುವರು, ನಾನೇನು ಮಾಡಲಿ ಬಡವನಯ್ಯ" ಎಂಬ ಬಸವಣ್ಣನವರ ವಾಣಿಯಂತೆ ಉಳ್ಳವರು ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ದಾನ ಮಾಡಿದ್ದಾರೆ; ಬಡವರಾದವರು ಪ್ರಮಾಣದಲ್ಲಿ ಕಡಿಮೆ ನೀಡಿದರೂ ಸಂಖ್ಯೆಯಲ್ಲಿ ಹಿಂದೆ ಬಿದ್ದಿಲ್ಲ. ಚಕ್ರವರ್ತಿ ಅಥವಾ ಮಾಂಡಳಿಕರು ಗ್ರಾಮಗಳನ್ನು ದಾನ ಮಾಡಿದರೆ; ತೀರ ಬಡವನಾಗಿದ್ದವನು ಸೊಂಟಿಗೆ ಎಣ್ಣೆಯನ್ನಾದರೂ ದಾನ ಮಾಡಿದ್ದಾನೆ. ಬಡವ-ಬಲ್ಲಿದರಲ್ಲಿನ ದಾನ ನೀಡುವ ತುಡಿತ ಮಾತ್ರ ಒಂದೇ ಆಗಿದೆ.

ಯಾವುದನ್ನೇ ದಾನಕೊಟ್ಟರೂ ಅದು ಸಮಾಜಕ್ಕೆ ಉಪಯೋಗವಾಗುವಂತಿದ್ದರೆ ದಾನಿಗೆ ಉತ್ತಮವಾದ ಪ್ರತಿಫಲವೇ ಸಿಗುತ್ತದೆ ಎಂಬುದನ್ನು ಪ್ರಾಚೀನ ಕಾಲದಲ್ಲಿ ನಂಬಲಾಗಿತ್ತು. ವೇದ, ಪುರಾಣಗಳು, ಕಾವ್ಯಗಳಲ್ಲಿ ಯಾವ ಯಾವ ವಸ್ತುಗಳನ್ನು ದಾನಮಾಡಿದವರಿಗೆ ಯಾವ ಯಾವ ಫಲಗಳು ದೊರೆಯುತ್ತವೆ ಎಂಬುದನ್ನು ಹೇಳಲಾಗಿದೆ. ಋಗ್ವೇದವು "ಉಚ್ಚಾ ದಿದಿ ದಕ್ಷಿಣಾವನ್ತೋ ಅಸ್ಥರ್ಯೇ ಅಶ್ವದಾಃ ಸಹ ತೇ ಸೂರ್ಯೇಣ। ಹಿರಣ್ಯದಾ ಅಮೃತತ್ವಂ

ಭಜನ್ತೇ ವಾಸೋದಾಃ ಸೋಮ ಪ್ರತಿರನ್ತ ಆಯುಃ॥"[433] ಎಂದು ಹಸು ಕುದುರೆಗಳು ಬಂಗಾರ ಮತ್ತು ಬಟ್ಟೆಗಳ ದಾನವನ್ನು ಹೊಗಳುತ್ತದೆ. ಮನುಸ್ಮೃತಿಯಲ್ಲಿ 'ನೀರನ್ನು ಕೊಟ್ಟವನಿಗೆ ತೃಪ್ತಿ, ಆಹಾರ ನೀಡಿದವನಿಗೆ ದೀರ್ಘಾಯುಷ್ಯ, ಬೆಳ್ಳಿಯನ್ನು ದಾನಮಾಡಿದವನಿಗೆ ದೇಹ ಸೌಂದರ್ಯ, ವಸ್ತ್ರದಾನ ಮಾಡಿದವನಿಗೆ ಚಂದ್ರಲೋಕ, ಅಶ್ವದಾನ ಮಾಡಿದವನಿಗೆ ಅಶ್ವಿನಿ ದೇವತೆಗಳ ಲೋಕ, ಎತ್ತುಗಳನ್ನು ನೀಡಿದವನಿಗೆ ಐಶ್ವರ್ಯ, ಗೋವುಗಳನ್ನು ದಾನ ಮಾಡಿದವನಿಗೆ ಸೂರ್ಯಲೋಕ' ಮುಂತಾದವು ದೊರೆಯುತ್ತವೆ ಎಂದು ಹೇಳಲಾಗಿದೆ. ಅನೇಕ ಶಾಸನಗಳು ದಾನಿಯನ್ನು ವರ್ಣಿಸುವಾಗ ಬೇಡಿದವರಿಗೆ ಬೇಡಿದ್ದನ್ನು ನೀಡಿದ 'ಮಹಾದಾನಿ'[434] 'ಕಲಿಕಾಲಕರ್ಣ್ಣ'[435], 'ಸಹಾಯ ಸಿಂಹ'[436], 'ದಾನಗುಣ ವಿಶುದ್ಧ'[437], ಎಂದು ಮುಂತಾಗಿ ಹೇಳಿವೆ. ಇದರಿಂದ ದಾನದ ವಸ್ತು ಯಾವುದೇ ಇದ್ದರೂ ಅದಕ್ಕೆ ದಾನದಲ್ಲಿ ತನ್ನದೇ ಆದ ಮಹತ್ವವಿದೆ ಎಂಬುದು ತಿಳಿಯುತ್ತದೆ. ಮತ್ತು ಶಾಸನಗಳಲ್ಲಿ ದಾನಿಯನ್ನು 'ಬೇಡಿದವರಿಗೆ ಬೇಡಿದ್ದನ್ನು ನೀಡುವವನು' ಎಂಬುದೂ ಕೂಡ ಅದನ್ನೇ ಸೂಚಿಸುತ್ತದೆ.

ಚಾಲುಕ್ಯ ಚಕ್ರವರ್ತಿ ಮುಮ್ಮಡಿ ಸೋಮೇಶ್ವರನ ಪ್ರಕಾರ 'ಬೆಳ್ಳಿ, ಬಂಗಾರ, ರತ್ನ, ವಸ್ತ್ರ, ಶಯ್ಯೆ, ಆಸನ, ಗಜ, ಅಶ್ವ, ಆಕಳು, ಎಮ್ಮೆ, ಗೃಹ, ಗ್ರಾಮ, ಭೂಮಿ, ದಾಸಿ, ಕನ್ಯೆ, ಭೂಷಣ, ಅನ್ನ-ಪಾನ, ಔಷಧಿಗಳನ್ನು ದಾನ ಮಾಡುವುದರೊಂದಿಗೆ ಭೀತನಾದವನಿಗೆ ಅಭಯ ದಾನವನ್ನು ನೀಡಬೇಕು. ಇವು ಮಹಾಪಾತಕಗಳನ್ನು ಕಳೆಯುವ, ಮಹಾಪುಣ್ಯವನ್ನು ನೀಡುವ ಮಹಾದಾನಗಳು. ವಿದ್ವಾಂಸನು ಬಯಸುವುದನ್ನು, ಅವನ ಮನೆಯಲ್ಲಿ ಸುಖವನ್ನುಂಟು ಮಾಡುವುದನ್ನು ಆತನಿಗೆ ದಾನ ಕೊಡಬೇಕು. ಅದು ಶಾಶ್ವತವಾಗಿ ಉಳಿಯುತ್ತದೆ.' (ಮಾನಸೊಲ್ಲಾಸ ಸಂ.೧.ಪು.೨) ಜೈನರಲ್ಲಿ ಅಭಯದಾನ, ಆಹಾರದಾನ, ಔಷಧದಾನ ಮತ್ತು ಶಾಸ್ತ್ರದಾನಗಳೆಂದು ನಾಲ್ಕು ವಿಧಗಳಿವೆ. ('ಅಭಯಾಹಾರ ಭೈಷಜ್ಯ ಶ್ರತ ಭೇದಾಚ್ಚತ ವಿಧಂ ದಾನಂ').

ಪ್ರಸ್ತುತ ಅಧ್ಯಯನದಲ್ಲಿ ತಿಳಿದು ಬರುವಂತೆ ಕೆಲವು ದಾನಗಳು ಸಂಖ್ಯೆ ಮತ್ತು ಪ್ರಮಾಣದಲ್ಲಿ ಹೇರಳವಾಗಿದ್ದರೆ; ಮತ್ತೆ ಕೆಲವು ದಾನಗಳು ವಿರಳವಾಗಿವೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನೀಡಿದ ಕೆಲವು ಪ್ರಮುಖ ದಾನಗಳ ವೈಶಿಷ್ಟ್ಯತೆಯನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ. ಅಧ್ಯಯನಕ್ಕೆ ಆಯ್ದುಕೊಂಡ ಒಟ್ಟು ೧೫೦೦ ಶಾಸನಗಳಿಂದ ತಿಳಿದು ಬರುವಂತೆ, ನೀಡಲಾದ ದಾನಗಳ ಸಂಖ್ಯಾ ಪ್ರಮಾಣ ಹೀಗಿದೆ.

| | | |
|---|---|---|
| ಭೂಮಿದಾನ | – | ೭೦೫ |
| ಹಣದಾನ | – | ೧೨೦ |
| ಸುಂಕದಾನ | – | ೧೨೦ |
| ಗ್ರಾಮದಾನ | – | ೯೦ |

| | | |
|---|---|---|
| ಮನೆದಾನ | – | ೬೦ |
| ಗಾಣದಾನ | – | ೧೫೦ |
| ಅಂಗಡಿದಾನ | – | ४೫ |
| ತೋಟದಾನ | – | ೭೫ |
| ಹೆಣ್ಣುದಾನ/ಕನ್ಯಾದಾನ | – | ೩೦ |
| ಇತರ ದಾನಗಳು | – | ೭೫ |

(ಗೋದಾನ, ಆಭರಣದಾನ, ಶಾಸ್ತ್ರದಾನ, ಔಷಧದಾನ, ವಸ್ತ್ರದಾನ, ಡೋಣಿದಾನ, ಪದಾರ್ಥದಾನ ಇನ್ನೂ ಮುಂತಾದವು.)

ಮೇಲಿನ ಪಟ್ಟಿಯಲ್ಲಿ ಸೂಚಿಸಿದಂತೆ ದಾನಗಳ ಸಂಖ್ಯೆ ತಾತ್ವಿಕವಾಗಿ ನಿಜವಾಗಿದೆಯಾದರೂ ಪರಿಪೂರ್ಣವಲ್ಲ. ಏಕೆಂದರೆ ಕೇವಲ ಹಣದಾನವನ್ನಾಗಲಿ, ಭೂದಾನ, ಗ್ರಾಮದಾನ, ಮನೆದಾನಗಳನ್ನಾಗಲಿ ಪ್ರತ್ಯೇಕವಾಗಿ ನೀಡಿರುವುದಿಲ್ಲ. ಹಾಗೆ ನೀಡಿದ್ದರೂ ಅವುಗಳ ಸಂಖ್ಯೆ ಕಡಿಮೆ. ಒಂದೇ ಶಾಸನದಲ್ಲಿ ಭೂಮಿ, ಹಣ, ಗಾಣ, ಅಂಗಡಿ, ಮನೆ, ತೋಟ ಮುಂತಾದವುಗಳನ್ನು ಉಲ್ಲೇಖಿಸಲಾಗಿದೆ. ಮತ್ತು ಭೂಮಿಯನ್ನು ದಾನ ಮಾಡುವಾಗ ದೇವಾಲಯಕ್ಕೆ ಅಲ್ಲಿ ನಡೆಯುವ ಆಹಾರದಾನಕ್ಕೆ, ವಿದ್ಯಾದಾನಕ್ಕೆ ಪೂಜಾರಿಗಳಿಗೆ, ನೃತ್ಯ, ಗೀತ, ವಾದ್ಯಗಳಿಗೆ ಪ್ರತ್ಯೇಕವಾಗಿ ದಾನ ನೀಡಲಾಗಿದೆ. ಗ್ರಾಮದಾನವನ್ನು ನೀಡುವಾಗ ಆ ಗ್ರಾಮದ ಎಲ್ಲ ಭೂಮಿಯನ್ನು ಬೇರೆ ಬೇರೆ ಉದ್ದೇಶಗಳಿಗೆ ಹಂಚಿಕೆ ಮಾಡಲಾಗಿದೆ. ಗ್ರಾಮದಾನದಲ್ಲಿ ಭೂಮಿ, ಸುಂಕ, ಮನೆ, ಅಂಗಡಿ ತೋಟ ಮುಂತಾದವುಗಳೂ ಒಳಗೊಳ್ಳುತ್ತವೆ. ಹಣದಾನವನ್ನು ನೀಡುವಾಗಲೂ ಬೇರೆ ಬೇರೆ ಉದ್ದೇಶಗಳಿಗೆ ಹಣವನ್ನು ಹಂಚಲಾಗಿದೆ. ಹೀಗಿರುವಾಗ ಇವುಗಳನ್ನು ಪ್ರತ್ಯೇಕಗೊಳಿಸಿ ಲೆಕ್ಕ ಹಾಕುವುದು ಅಸಾಧ್ಯದ ಮಾತು. ಇಂಥ ಸಂದರ್ಭದಲ್ಲಿ ಭೂಮಿ, ಹಣ, ಸುಂಕ, ಗ್ರಾಮದಾನಗಳನ್ನು ಒಂದೇ ಶಾಸನದಲ್ಲಿ ಬೇರೆ ಬೇರೆ ಉದ್ದೇಶಗಳಿಗೆ ನೀಡಿದ್ದರೂ ಅಂಥವುಗಳನ್ನು ಒಂದೇ ಎಂದು ಪರಿಗಣಿಸಲಾಗಿದೆ. ಉದಾಹರಣೆ : ಕ್ರಿ.ಶ. ೧೧೦೩ರ ಸೈದಾಪೂರ ಶಾಸನದ ಪ್ರಕಾರ ಇಮ್ಮಡಿ ಜಗದೇಕಮಲ್ಲನು ಬುದ್ಧದೇವ ಜಿನಾಲಯಕ್ಕೆ ಅಲ್ಲಿನ ಅಂಗಭೋಗ, ರಂಗಭೋಗ ಇನ್ನಿತರ ಉದ್ದೇಶಗಳಿಗೆ ಭೂಮಿಯನ್ನು, ಒಂದು ಹೂದೋಟ, ಹತ್ತು ನಿವೇಶನ, ೧ ದ್ರಮ್ಮ ಹಣವನ್ನು ದಾನ ನೀಡಿದ್ದಾನೆ. ಹೀಗಿರುವಾಗ ಭೂಮಿದಾನ ೧, ತೋಟದಾನ ೧, ಮನೆ/ನಿವೇಶನ ದಾನ ೧, ಹಣದಾನ ೧ ಎಂದು ಪರಿಗಣಿಸಲಾಗಿದೆ. ಇಂಥ ದಾನಗಳನ್ನು 'ಬಹುವಿಧ ದಾನ' ಎಂದು ಕರೆಯಬಹುದು. ಹಾಗೆ ನೋಡಿದರೆ ಒಟ್ಟು ದಾನಗಳಲ್ಲಿ ಪ್ರತಿಶತ ೫೦ ರಷ್ಟು 'ಬಹುವಿಧ ದಾನಗಳೇ' ಆಗಿವೆ.

## ೪.೬.೧ ಭೂಮಿದಾನ

ಭೂಮಿ ಸರ್ವಕ್ಕೂ ಆಧಾರ. ನಮ್ಮ ಬದುಕು-ಬಾಳಿಗೆ ಸುಖ ಸ್ವಚ್ಛಂದತೆಗೆ ಬೇಕಾದ ಸಾಮಗ್ರಿಯೆಲ್ಲವೂ ಭೂಮಿ-ಭೂಗರ್ಭದಿಂದಲೇ ಉತ್ಪನ್ನವಾಗುತ್ತವೆ. ಬ್ರಂಹ್ಮಾಂಡದಲ್ಲಿ ಎಲ್ಲ ಜೀವಿಗಳಿಗೆ ಆವಾಸ ಸ್ಥಾನವಾಗಿರುವುದು ಭೂಮಿಯೊಂದೇ. ಮಾನವ ಸಮಾಜ ಸಾವಿರಾರು ವರ್ಷಗಳ ಪುರಾತನ ಇತಿಹಾಸ ಹೊಂದಿದ್ದರೂ ಎಷ್ಟೇ ಮುಂದುವರೆದಿದ್ದರೂ ಭೂಮಿಯ ಇನ್ನು ಹಲವು ಭಾಗಗಳಿಗೆ ತಲುಪಲಾಗಿಲ್ಲ; ಅಷ್ಟು ವಿಶಾಲವಾಗಿದೆ ಭೂಮಿ. ಭೂಮಿ ಎಷ್ಟೇ ವಿಶಾಲವಾಗಿದ್ದರೂ ಅದರ ಒಡೆತನಕ್ಕಾಗಿ ಪುರಾತನ ಕಾಲದಿಂದಲೂ ಸಂಘರ್ಷಗಳು ನಡೆಯುತ್ತಲೇ ಬಂದಿವೆ. ವಿಶಾಲ ಭೂಪ್ರದೇಶ ಹೊಂದಿದ ಭಾರತದಂಥ ರಾಷ್ಟ್ರದಲ್ಲಿ ಒಡೆತನ ಸ್ಥಾಪಿಸಲು ದಂಡೆತ್ತಿ ಬಂದವರಿಗೆ ಲೆಕ್ಕವೇ ಇಲ್ಲ. ತಾನು ಸೃಷ್ಟಿಸಿದ ಪ್ರಾಣಿಗಳಿಗೂ ಮನುಷ್ಯರಿಗೂ ಜೀವನ ನಡೆಸಲು ಮೂಲತಃ ಯಾವ ಸಾಮಗ್ರಿಗಳು ಬೇಕೋ ಅವನ್ನು ಸಮಾನಭಾವದಿಂದ ಎಲ್ಲರಿಗೂ ಉಚಿತವಾಗಿ, ಸುಲಭವಾಗಿ ಸಿಗುವಂತೆ ದೇವರು ವ್ಯವಸ್ಥೆ ಮಾಡಿದ್ದಾನೆ. ಇದನ್ನು 'ಪಂಚಭೂತ' ಎನ್ನುತ್ತಾರೆ. ಭೂಮಿ, ನೀರು, ಗಾಳಿ, ಅಗ್ನಿ, ಆಕಾಶ ಇವೇ ಪಂಚಭೂತಗಳು. ಇವುಗಳಲ್ಲಿ ಗಾಳಿ, ನೀರು, ಆಕಾಶ (ಬೆಳಕು), ಅಗ್ನಿಗಳನ್ನು ಯಾರು ಯಾರಿಗೆ ಎಷ್ಟು ಬೇಕೋ ಅಷ್ಟನ್ನು ಸಮಾನಾಧಿಕಾರದಿಂದ ಪಡೆದುಕೊಳ್ಳುತ್ತಾರೆ. 'ಸೂರ್ಯ ಮನೆ ಮನೆಗೂ ಹೋಗುತ್ತಾನೆ. ಸೂರ್ಯಕಿರಣ ರಾಜನಿಗೆಷ್ಟೋ ಭಂಗಿಗೂ ಅಷ್ಟೇ ಲಭಿಸುತ್ತದೆ. ಗಾಳಿ, ನೀರು, ಅಗ್ನಿ, ಆಕಾಶಗಳ ಹಂಚಿಕೆಯಲ್ಲಿ ದೇವರು ಭೇದ ತೋರಿಲ್ಲ. ಆದರೆ ಭೂಮಿಯನ್ನು ಸಮನಾಗಿ ಹಂಚದೆ ಕೆಲವೇ ಜನರ ಕೈಯಲ್ಲಿಟ್ಟಿದ್ದಾನೆ'. ವಾಸ್ತವವಾಗಿ ಈ ಪೃಥ್ವಿಯ ಮೇಲೂ ಎಲ್ಲರಿಗೂ ಸಮಾನ ಅಧಿಕಾರವಿದ್ದರೂ ಎಲ್ಲೆಡೆ ಅಸಮಾನತೆಯಿದೆ. ಒಬ್ಬನ ಬಳಿ ಬೇಕಾದುದಕ್ಕಿಂತ ಹೆಚ್ಚು ಭೂಮಿಯಿದ್ದರೆ; ಇನ್ನೊಬ್ಬನ ಬಳಿ ಎಳ್ಳಷ್ಟೂ ಇಲ್ಲ. ಇದರಿಂದಲೇ ದೇಶಗಳಲ್ಲಿ ಸಂಪತ್ತಿನ ವೈಷಮ್ಯದ ವಿಕಾರಗ್ರಸ್ಥ ವಿಕಟತನ ತಾಂಡವವಾಡುತ್ತಿದೆ. ಇಂಥಹ ವೈಷಮ್ಯವನ್ನು ತೊಡೆದು ಹಾಕಲು 'ಭೂಮಿದಾನ' ಎಂಬ ಪರಿಕಲ್ಪನೆ ಅದ್ವಿತೀಯವಾದುದು.

ಪ್ರಾಚೀನ ಕಾಲದಿಂದಲೂ ಕರ್ನಾಟಕದಲ್ಲಿ 'ಭೂದಾನ' ನಡೆಯುತ್ತ ಬಂದಿದೆ. ಸಾಕಿಯವರು ಅಭಿಪ್ರಾಯ ಪಡುವಂತೆ ಕರ್ನಾಟಕದಲ್ಲಿ "ಅಂತಹ ಕೊಡುಗೆಗಳು (ಭೂಮಿದಾನ) ಕ್ರಿ.ಶ. ೨೦೦ ರಿಂದ ಪ್ರಾರಂಭವಾದುದು, ಕ್ರಿ.ಶ. ೧೨೦೦ರ ವೇಳೆಗೆ ಈ ಪದ್ಧತಿಯು ಪೂರ್ಣ ಪ್ರಮಾಣದಲ್ಲಿ ಚಾಲ್ತಿಯಲ್ಲಿತ್ತು"[438]. ಅಂದರೆ ಸಾಕಿಯವರ ಅಭಿಪ್ರಾಯ ಕಲ್ಯಾಣ ಚಾಲುಕ್ಯರ ಕಾಲದಲ್ಲಿಯೇ ಭೂಮಿದಾನದ ಪದ್ಧತಿಯು ಪರಿಪೂರ್ಣತೆಯನ್ನು ಪಡೆಯಿತು ಎಂಬುದನ್ನು ಸ್ಪಷ್ಟಪಡಿಸುತ್ತದೆ. ಚಾಲುಕ್ಯರ ಶಾಸನಗಳಲ್ಲಿ ಹೇಳುವಂತೆ 'ಕ್ಷತ್ರಿಯರಿಗೆ ಭೂಮಿದಾನ, ಭೂಮಿಪಾಲನೆಗೆ ಮಿಗಿಲಾದ ಧರ್ಮವಿಲ್ಲ'[439]. ಆದ್ದರಿಂದ ರಾಜರಾದಿಯಾಗಿ ಹಲವಾರು ಜನರು ತಮ್ಮ ಕರ್ತವ್ಯವೆಂದು ಭಾವಿಸಿ ಭೂಮಿದಾನ ಮಾಡಿದ್ದಾರೆ. 'ಭೂಮಿದಾನತ್ಪರಂ ದಾನಂ ನಭೂತರ್ನಭವಿಷ್ಯತಿ' ಎನ್ನುವ ಶಾಸ್ತ್ರೋಕ್ತ ಮಾತು ಭೂತ-ಭವಿಷ್ಯತ್ಕಾಲಗಳಲ್ಲಿ

ಭೂಮಿದಾನಕ್ಕಿಂತ ಶ್ರೇಷ್ಠವಾದ ದಾನಗಳಿಲ್ಲವೆಂಬುದನ್ನು ಹೇಳುತ್ತದೆ. ಶಿಕಾರಿಪುರದ ಶಾಸನವೊಂದು ಭೂಮಿದಾನದ ಮಹತ್ವವನ್ನು ಹೇಳುವುದರ ಮೂಲಕ ಚಾಲುಕ್ಯರ ಕಾಲದ ಜನರ ಭಾವನೆಯನ್ನು ಹೀಗೆ ವ್ಯಕ್ತಪಡಿಸುತ್ತದೆ.

> **"ಸರ್ವ್ವೇಷಾಮೇವ ದಾನಾನಾಂ ಭೂಮಿದಾನಂ ಪರಂ ಸ್ಮೃತಂ ।**
> **ಸರ್ವ್ವಪಾಪಹರಂ ತದ್ಧಿಸ್ವರ್ಗ್ಯಂ ಚಾಹುರ್ಮ್ಮನೀಷಿಣಃ ॥**
> **ತಪಸ್ವಿನೋಥಯಜ್ವಾನಃ ಸತ್ಯಮಂತೋ ಬಹುಶ್ರುತಾಃ ।**
> **ಗುರುದೇವ ಪರಾಶ್ಚೈವನಾತಿ ಕ್ರಾಮಂತಿ ಭೂಮಿಪ ॥**
> **ನಾಸ್ತಿ ಭೂಮಿ ಸಮೋದಾನಂ ನಾಸ್ತಿ ಭೂಮಿಸಮೋ ನಿಧಿಃ ।**
> **ನಾಸ್ತಿ ಸತ್ಯ ಸಮೋ ಧರ್ಮ್ಮೋ ನ ಪಾಪಮನೃತಾತ್ಪರಂ ॥"**[440].

'ಎಲ್ಲದಾನಗಳಲ್ಲಿ ಭೂಮಿದಾನವೇ ಶ್ರೇಷ್ಠ, ಭೂಮಿದಾನವು ಸರ್ವಪಾಪನಾಶಕವಾದುದು; ಸ್ವರ್ಗಪ್ರಾಪ್ತಿ ಮಾಡುವಂಥದು. ಭೂಮಿದಾನಕ್ಕೆ ಸಮಾನವಾದ ಬೇರೊಂದು ದಾನವಾಗಲಿ, ನಿಧಿಯಾಗಲಿ ಇರಲಾರದು' ಎಂಬುದು ಇಲ್ಲಿನ ಆಶಯ. ಹೀಗೆ ನೂರಾರು ಶಾಸನಗಳು ಭೂಮಿದಾನದ ಮಹತ್ವವನ್ನು ಹೇಳುವುದಲ್ಲದೆ, ಭೂದಾನ ನೀಡಿರುವುದನ್ನು ದಾಖಲಿಸುತ್ತವೆ. ಕಲ್ಯಾಣ ಚಾಲುಕ್ಯರ ಭೂಮಿದಾನದ ಕೆಲವು ವಿಶೇಷತೆಗಳನ್ನು ಈ ಕೆಳಗಿನಂತೆ ತಿಳಿಯಬಹುದು.

**ಭೂಮಿದಾನದ ವಿಶೇಷತೆಗಳು ಅಥವಾ ಲಕ್ಷಣಗಳು**

- ಉಳಿದೆಲ್ಲ, ದಾನಗಳಿಗಿಂತಲೂ ಅತಿ ಹೆಚ್ಚಿನ ಪ್ರಮಾಣದಲ್ಲಿ ಭೂಮಿದಾನವನ್ನು ನೀಡಲಾಗಿದೆ. ಉಳಿದೆಲ್ಲ, ಚಾಲುಕ್ಯ ಅರಸಂಗಿಂತಲೂ 'ನಿತ್ಯಭೂಮಿದಾನ ಲೋಲ' ನೆಂದು ಪ್ರಖ್ಯಾತನಾಗಿದ್ದ ಆರನೆ ವಿಕ್ರಮಾದಿತ್ಯನ ಕಾಲದಲ್ಲಿ ಹೆಚ್ಚು ಭೂದಾನಗಳನ್ನು ನೀಡಲಾಗಿದೆ. ದೇವಾಲಯಗಳಿಗೆ, ದೇವರ ಸೇವೆಗೆ, ವ್ಯಕ್ತಿಗಳಿಗೆ, ಸಮಾಜಕಾರ್ಯ ಸಾಮಾಜಿಕ ಕಾರ್ಯಗಳಿಗೆ ಹೀಗೆ ಎಲ್ಲ ರೀತಿಯ ಉದ್ದೇಶಗಳಿಗೂ ಭೂಮಿಯನ್ನು ದಾನ ಮಾಡಲಾಗಿದೆ. ಅದರಲ್ಲೂ ದೇವಾಲಯಗಳಿಗೆ ಬಹುಪಾಲು ಭೂಮಿದಾನ ಸಂದಿವೆ.

- ಭೂಮಿಯನ್ನು ದಾನ ಮಾಡುವಾಗ ಎಷ್ಟು ಪ್ರಮಾಣದಲ್ಲಿ ನೀಡಲಾಗಿದೆ ಎಂಬುದನ್ನು ಸ್ಪಷ್ಟವಾಗಿ ತಿಳಿಸಲಾಗಿದೆ. ಭೂಮಿಯನ್ನು ಎರಡು ರೀತಿಯಲ್ಲಿ ಅಳತೆ ಮಾಡುತ್ತಿದ್ದರು. ಒಂದು ಅದರಲ್ಲಿ ಬಿತ್ತಬಹುದಾದ ಬೀಜದ ಪ್ರಮಾಣದ ಮೇಲೆ ಉದಾಹರಣೆಗೆ 'ಎರಡು ಸಲಗೆ ಗದ್ದೆ,'[441] ಎಂದರೆ ಎರಡು ಸಲಗೆಯಷ್ಟು ಬೀಜವನ್ನು ಬಿತ್ತಬಹುದಾದ ಗದ್ದೆ ಎಂದರ್ಥ. ಎರಡು ಖಂಡುಗ ಬೀಜವನ್ನು ಹಿಡಿಸುವ ಭೂಮಿ/ಹೊಲ 'ಇಕ್ಕಂಡುಗ ಬೆದ್ದಲ್'.[442] ಈ ರೀತಿಯಲ್ಲದೆ ಇನ್ನೊಂದು ರೀತಿಯ ಅಳತೆಯ ವಿಧಾನವನ್ನು ಬಳಸಲಾಗುತ್ತಿತ್ತು. ಅದೇ ಅಳತೆಗೋಲುಗಳ ಸಹಾಯದಿಂದ ಅಳೆಯುತ್ತಿದ್ದ ವಿಧಾನ. ವ್ಯವಹಾರ ಗಣಿತ ಮತ್ತು ಕ್ಷೇತ್ರಗಣಿತಗಳ ಆಧಾರದ ಮೇಲೆ ರಾಜ್ಯದ ಆಯಾ ಭಾಗಗಳಿಗೆ, ಆಯಾ ಊರುಗಳಿಗೆ ರಾಜನು

ಅಳತೆಗೋಲುಗಳನ್ನು ನಿರ್ಧರಿಸಿರುವಂತೆ ತೋರುತ್ತದೆ. ಅಕ್ಕಾಗಿಯೇ ಶಾಸನಗಳಲ್ಲಿ ಬೇರೆ ಬೇರೆ ಪ್ರಮಾಣದ ನೂರಾರು ಅಳತೆಗೋಲುಗಳ ಹೆಸರುಗಳು ಕಂಡುಬರುತ್ತವೆ. ಕೆಲವು ಅಳತೆಗೋಲುಗಳ ಪ್ರಮಾಣವನ್ನು ಮಾತ್ರ ಕೆಲವು ಶಾಸನಗಳು ಹೆಸರಿಸುತ್ತವೆ. ಉದಾಹಣೆಗೆ 'ಇರ್ಪತ್ತೆಂಟು ಗೇಣಗಳ'.[443], 'ಹದಿನಯ್ದು ಮಾರುಂಜೆ ತೋಳು ಘಳೆ'.[444] 'ಐವತ್ತೆರಡು ಗೇಣ ಗಳೆ'.[445] ಇತ್ಯಾದಿಗಳನ್ನು ನೋಡಬಹುದು. ಕೆಲವು ಅಳತೆಗೋಲುಗಳಿಗೆ ಪ್ರತ್ಯೇಕ ಹೆಸರುಗಳಿದ್ದವು. ಆಯಾ ಊರುಗಳಲ್ಲಿ ಮತ್ತು ಸುತ್ತಮುತ್ತ ಪ್ರಚಾರದಲ್ಲಿದ್ದ ಅಳತೆಗೋಲುಗಳಿಗೆ ಆಯಾ ಊರುಗಳ ಹೆಸರುಗಳನ್ನೇ ಕೊಡುತ್ತಿದ್ದಂತೆ ಕಾಣುತ್ತದೆ. 'ಕೋಗಳಿಯ ಗಡಿಂಬ'[446], 'ಕುಮಿತ ಕೂಂಟೆಯ ಕೋಲ್'.[447] 'ಕತ್ಸವಿಯ ಗಳೆ'.[448], ಇವು ಅಂಥ ಕೆಲವು ಉದಾಹರಣೆಗಳು. ಹಾಗೆ ದೇವಾಲಯಗಳ ಹೆಸರಿನ 'ನಗರೇಶ್ವರದ ಗಡಿಂಬದ ಕೋಲ್'.[449] 'ಎಳರಾವೆಯ ತೀರ್ಥದ ಗಳಿಂಬ'.[450], 'ಬೇರುಂಡ ಗಳೆ'[451]; ವ್ಯಕ್ತಿಗಳ ಬಿರುದುಗಳನ್ನಾಧರಿಸಿದ 'ಬಂಟರಭಾವನ ಕೋಲ್'.[452] 'ಮುಳಗುಂದದ ಮಲ್ಲಹರ ಮಾರಿಯ ಕೋಲ್'.[453], 'ದಾನಚಿಂತಾಮಣಿ ಘಳೆ'[454], ಮುಂತಾದ ಅಳತೆ ಗೋಲುಗಳಿಂದ ಭೂಮಿಯನ್ನು 'ಮತ್ತರು' ಮತ್ತು ಕಮ್ಮ' (ಕಂಬ)ಗಳೆಂಬುದಾಗಿ ಅಳೆದು ದಾನ ಬಿಡಲಾಗಿದೆ. (ಒಂದು ಮತ್ತರು = ೧೦೦ ಮಾರು; ೧ ಮಾರು ೨ ಯಾರ್ಡಿಗೆ ಸಮ. ಕಮ್ಮ=ಮತ್ತರಿನ ೧೦೦ನೇ ಭಾಗ[455])

- ದಾನ ನೀಡುವ ಭೂಮಿಯು ಯಾವ ವಿಧದ್ದಾಗಿದೆ ಎಂಬುದನ್ನು ಸ್ಪಷ್ಟವಾಗಿ ತಿಳಿಸಲಾಗುತ್ತಿತ್ತು. ಭೂಮಿಯ ಪ್ರಮಾಣವನ್ನು ಹೇಗೆ ಸ್ಪಷ್ಟಪಡಿಸಲಾಗಿದೆಯೋ ಅದೇ ರೀತಿ ಭೂಮಿಯ ವಿಧವನ್ನು ಹೇಳಲಾಗುತ್ತಿತ್ತು. 'ಎರೆ'[456] (ಕಪ್ಪುಭೂಮಿ), 'ಕರಿಯ ನೆಲ'.[457], 'ಕಿಸುಕಾಡು'[458] (ಕೆಂಪುಮಣ್ಣಿನ ಭೂಮಿ), 'ಗದ್ದೆ'[459] (ಭತ್ತ ಬೆಳೆಯುವ ನೀರಾವರಿ ಭೂಮಿ), 'ತೋಟ'.[460], 'ನಿರ್ಣ್ನೆಲ'[461] (ನೀರಾವರಿ ಭೂಮಿ), 'ಬೆದ್ದಲೆ'.[462], (ಮಳೆ ನೀರಿನಿಂದ ಬೆಳೆಯುವ ಭೂಮಿ) ಹೀಗೆ ದಾನ ಕೊಡುವ ಭೂಮಿ ಹೇಗಿದೆ ಎಂಬುದನ್ನು ಸ್ಪಷ್ಟವಾಗಿ ಹೇಳಲಾಗುತ್ತಿತ್ತು.

- ಹಲವಾರು ಭೂಮಿದಾನಗಳನ್ನು ನೀಡಿದ ಶಾಸನಗಳು ದಾನ ನೀಡಿದ ಭೂಮಿಯ ಸೀಮೆಗಳನ್ನು, ಮೇರೆಗಳನ್ನು ಹೇಳುತ್ತವೆ.

- ಭೂಮಿದಾನಕ್ಕೆ ಕೆಲವು ನಿಬಂಧನೆಗಳೂ ಇರುತ್ತಿದ್ದವು. ಸಾಮಾನ್ಯವಾಗಿ ದಾನ ಮಾಡಬೇಕಾದ ಭೂಮಿಯು ಪರಭಾರೆ ಆಗಿರಬಾರದು; ಅದರ ಮೇಲಿನ ಯಾವ ಸುಂಕವೂ ಬಾಕಿ ಇರಬಾರದು ಇತ್ಯಾದಿ. ಅವುಗಳ ಜೊತೆಗೆ ಇದೇ ಅಧ್ಯಾಯದ ೪.೫ರಲ್ಲಿ ಹೇಳಿದ ದಾನದ ವರ್ಗೀಕರಣದಲ್ಲಿ ಚರ್ಚಿಸಿದ ನಿಬಂಧನೆಗಳಂತೆಯೂ ದಾನ ನೀಡುತ್ತಿದ್ದ ಉದಾಹರಣೆಗಳು ಸಾಕಷ್ಟು ಲಭಿಸುತ್ತವೆ.

- ಸಾಮಾನ್ಯವಾಗಿ ರಾಜರು, ಸಾಮಂತರು, ಅಧಿಕಾರಿಗಳು ಹಾಗೂ ಸಾಮಾನ್ಯ ಜನರು ನೀಡಿದ ಭೂಮಿದಾನಗಳಲ್ಲಿ ವ್ಯತ್ಯಾಸಗಳಿವೆ. ರಾಜರಾಗಲಿ ಅಥವಾ ಸಾಮಂತರಾಗಲಿ

ಗ್ರಾಮದ ಎಲ್ಲ ಭೂಮಿಯನ್ನು ದಾನ ನೀಡುತ್ತಿದ್ದಂತೆ ಸಾಮಾನ್ಯ ಜನರಿಗೆ ಸಾಧ್ಯವಿರಲಿಲ್ಲ. ತಮ್ಮ ಒಡೆತನದಲ್ಲಿದ್ದ ಭೂಮಿಯಲ್ಲಿ ತಮ್ಮ ಚೈತನ್ಯವಿರುವಷ್ಟನ್ನು ನೀಡಿದ್ದಾರೆ. ಸಂಖ್ಯಾ ಪ್ರಮಾಣದಲ್ಲಿಯೂ ಸಾಮಾನ್ಯರಿಗಿಂತ ಹೆಚ್ಚಿನ ಭೂಮಿದಾನಗಳು ಭೂಪಾಲಕರೆನಿಸಿದ ಆಳುವ ವರ್ಗದವರಿಂದ ನಡೆದಿವೆ.

ಭೂಮಿದಾನ ಮಾಡಲು ಇಚ್ಛಿಸಿದವರು ತಮ್ಮಲ್ಲಿ ದಾನ ಮಾಡಲು ಭೂಮಿ ಇಲ್ಲದ ಸಂದರ್ಭದಲ್ಲಿ, ಅಥವಾ ದೇವಾಲಯಕ್ಕೆ ಆಸುಪಾಸಿನಲ್ಲಿ ತಮ್ಮ ಭೂಮಿಯಿಲ್ಲದಿದ್ದ ಸಂದರ್ಭದಲ್ಲಿ ಬೇರೆಯವರಿಂದ ಕ್ರಯಕ್ಕೆ ಪಡೆದು ದಾನ ನೀಡಿದ್ದಾರೆ. ಇದನ್ನು ಈ ಹಿಂದೆ ಚರ್ಚಿಸಲಾಗಿದೆ.

ಹೀಗೆ ಭೂಮಿದಾನವು ಕೆಲವು ವಿಶೇಷತೆಗಳನ್ನು ಹೊಂದಿದೆ. ಭೂಮಿದಾನ ನೀಡಿದ ಕೆಲವು ಉದಾಹರಣೆಗಳನ್ನು ಈ ಕೆಳಗಿನ ವಿವರದಲ್ಲಿ ನೋಡೋಣ.

**ಸಾಮಾನ್ಯ ಜನರಿಂದ ಭೂಮಿದಾನ**

ದ್ವೇದಿ ಚಟ್ಟೋಪಾಧ್ಯಾಯ ಎಂಬುವವರು ನರೇಗಲ್‌ದ ತ್ರೈಪುರುಷ ದೇವಾಲಯದ ಪೂಜಾರಿಯ ಜೀವಿತಕ್ಕೆ, ಭಟ್ಟ ವೃತ್ತಿಗೆ, ಅಂಗಭೋಗ, ರಂಗಭೋಗ, ನಂದಾದೀವಿಗೆ ಮತ್ತು ದೇವಾಲಯದ ಜೀರ್ಣೋದ್ಧಾರಕ್ಕೆಂದು ೨೦ ಮತ್ತರು ಭೂಮಿಯನ್ನು ದಾನ ನೀಡಿದ್ದಾರೆ.[463] ಕುಡತಿನಿಯ ಕುಮಾರಸ್ವಾಮಿ ದೇವಾಲಯಕ್ಕೆ ಸುಣ್ಣ ಬಳಿಯಲೆಂದು ಹಾರಕತ್ಥೀಗಾರೋಗಿಗೋಮ ಎಂಬಾತ ಭೂದಾನ ನೀಡಿದ್ದಾನೆ[464] ಕರಡಿಕಲ್ಲಿನ ಜೋಗ ಶಿವಾಚಾರ್ಯ ಎಂಬುವನು ನವಲಿಯಲ್ಲಿ ರಾಜಗುರು ಭಟ್ಟಾರಕರ ಪಾದುಕೆಯನ್ನು ಪೂಜಿಸವುದಕ್ಕೋಸ್ಕರ ೨೦ ಮತ್ತರು ಭೂಮಿ ಬಿಟ್ಟಿದ್ದಾನೆ.[465] ಹಲಗೇರಿಯ ಊರೊಡೆಯ ಮತ್ತು ಮಹಾಜನರು ಸೇರಿ ಬೆಣ್ಣೆಕಲ್ಲು ಸೀಮೆಯ ಕಾಳಗದಲ್ಲಿ ತಳಾರನಾಯಕ ಎರೆಯಮ್ಮನೆಂಬುವನು ಸತ್ತಾಗ ಅವನ ಕುಟುಂಬಕ್ಕೆ ೨ ಪತ್ತಿನ ಭೂಮಿಯನ್ನು ಸರ್ವ್ವಬಾಧಾಪರಿಹಾರವಾಗಿ ನೀಡಿದ್ದಾರೆ.[466] ಹಿರಿಯ ಮೊಸಂಗಿಯ ಪೋತಿಸೆಟ್ಟಿಯೆಂಬುವನು ಮೂಲಸ್ಥಾನ ದೇವಾಲಯದ ತಪೋಧನರಿಗೆ, ಬ್ರಾಹ್ಮಣರ ಛತ್ರಕ್ಕೆಂದು ೨೪ ಮತ್ತರು ಭೂಮಿಯನ್ನು ಕೊಂಡು ದಾನ ಮಾಡಿದ್ದಾನೆ.[467]

ದಂಡಾಸನಿ ಗಧಾಧರ ಬ್ರಹ್ಮಚಾರಿ ಮತ್ತು ಐದುವರ್ಗದವರು ಕೊಟ್ಟಿತೊನೆಯ ಭೂಮಿಯನ್ನು ಭೈರವೇಶ್ವರದೇವರಿಗೆ ನೀಡಿದ್ದಾರೆ.[468] ಚಂದಗಾವುಡ ಎಂಬಾತನು ದೇಯಿಗಾವೆಯ ಚಂದಿಮಯ್ಯ ಎಂಬುವವನಿಗೆ ೧೦ ಮತ್ತರು ಭೂಮಿಯನ್ನು ಆ ಚಂದ್ರಾರ್ಕವಾಗಿ ನೀಡಿದ್ದಾನೆ.[469] ತಳಕಲ್ಲಿನ ಚಾವುಂಡಯ್ಯ ಎಂಬಾತನು ಅಲ್ಲಿನ ಕೆರೆಯ ಜೀರ್ಣೊದ್ಧಾರಕ್ಕೆ ೧೨ ಮತ್ತುರು ಭೂಮಿಯನ್ನು ನೀಡಿದ್ದಾನೆ.[470]

**ಪ್ರಭುವರ್ಗ ಮತ್ತು ಅವರ ಪರಿವಾರದರಿಂದ ಭೂಮಿದಾನ :** ಮಹಾಮಂಡಳೇಶ್ವರ, ಮಹಾಸಾಮಂತ, ಪ್ರಭುಗಾವುಂಡ, ಗಾವುಂಡರಿಂದ ಹಾಗೂ ಅವರ ಪರಿವಾರದವರಿಂದ ಮಹಾಮಂಡಳೇಶ್ವರ ರಟ್ಟರ ಶಾಂತಿವರ್ಮರಸನ ತಾಯಿ ನಿಜಕಬ್ಬೆಯು ಸವದತ್ತಿಯಲ್ಲಿ ತನ್ನ

ಮಗನು ಕಟ್ಟಿಸಿದ ಜಿನಾಲಯಕ್ಕೆ ೧೫೦ ಮತ್ತರು ಭೂಮಿಯನ್ನು ದಾನ ಮಾಡಿದ್ದಾಳೆ.[471] ಮಹಾಮಂಡಳೇಶ್ವರ ವೀರನೊಳಂಬ ಪಲ್ಲವಪೆರ್ಮಾಡಿದೇವನ ರಾಣಿ ರೇವಲದೇವಿಯು ಕಂಚಗಾರ ಬೆಳಗಲಿಯ ಕಾಳಪ್ರಿಯ ದೇವರಿಗೆ ಎರಡು ಮತ್ತರು, ವಿಷ್ಣುದೇವರಿಗೆ ೧೨ ಮತ್ತರು ಭೂಮಿದಾನ ಮಾಡಿದ್ದಾಳೆ.[472] ಬಾಗಡಗೆನಾಡನ್ನು ಆಳುತ್ತಿದ್ದ ಮಹಾಮಂಡಳೇಶ್ವರ ಸಿಂಧವಂಶದ ನಾಗಾದಿತ್ಯನು ಸಿಂಹರಾಶಿ ಭಟ್ಟಾರರ ಕಾಲನ್ನು ತೊಳೆದು ಪತ್ತಿಮತ್ತೂರಿನ ದಂಡಿನಲ್ಲಿದ್ದಾಗ ಸಿಂಧೇಶ್ವರ ದೇವರಿಗೆ ೧೦೦೦ ಮತ್ತರು ಹೊಲವನ್ನು ದಾನ ನೀಡಿದ್ದಾನೆ.[473] ಮಹಾಮಂಡಳೇಶ್ವರ ರಾಜರಸನು ಆಳಂದೆ ಸಾಸಿರವನ್ನು ಆಳುತ್ತಿದ್ದಾಗ ಮೊರಂಬದಲ್ಲಿ ರಾಜಜಿನಾಲಯವನ್ನು ಕಟ್ಟಿಸಿ ಅದಕ್ಕೆ ೧೦೦೦ ಮತ್ತರು ಭೂಮಿಯನ್ನು ದತ್ತಿ ಬಿಟ್ಟಿದ್ದಾನೆ.[474] ಮಹಾಸಾಮಂತ ಜಗದೇಕಮಲ್ಲ ಉದಯಾದಿತ್ಯದೇವನು ತಲವಗೆಯ ಭೋಗೇಶ್ವರ ದೇವರಿಗೆ ೫೦೦ ಮತ್ತರು ತೋಟದ ಭೂಮಿ, ೮೦೦ ಕಮ್ಮ ಗದ್ದೆಯನ್ನು ನೀಡಿದ್ದಾನೆ.[475] ಮಹಾಸಾಮಂತ ಸೋಭನರಸನು ತಳಕಲ್ಲು ಅಗ್ರಹಾರದ ನಾಗಲೇಶ್ವರ ದೇವಾಲಯಕ್ಕೆ ೪೦೦ ಮತ್ತರು ಭೂಮಿಯನ್ನು ಬಿಟ್ಟಿದ್ದಾನೆ.[476] ಸಾಮಂತ ಜಗದೇಕ ಮಲ್ಲ ನಿರ್ಮಡಿ ನೊಳಂಬರಾಜನು ಸೋಗೆಯೂರ ಮಠದ ವಿದ್ಯಾದಾನಕ್ಕೆ ೨೦ ಮತ್ತರು, ಮಠಕ್ಕೆ ೫೦ ಮತ್ತರು ಭೂಮಿ ಬಿಟ್ಟಿದ್ದಾನೆ.[477] ಸಾಮಂತ ತ್ರೈಲೋಕ್ಯಮಲ್ಲ ನೊಳಂಬ ಪಲ್ಲವ ಪೆರ್ಮಾಡಿ ಜಯಸಿಂಘದೇವನು ತುಂಬಳದ ದಕ್ಷಿಣಸೋಮೇಶ್ವರ ದೇವರಿಗೆ ೨೫೦ ಮತ್ತರು, ವಿದ್ಯಾದಾನಕ್ಕೆ ೨೦ ಮತ್ತರು ಭೂಮಿಯನ್ನು ದಾನ ನೀಡಿದ್ದಾನೆ[478]

ಮಹಾದೇವ ದಂಡನಾಯಕನು ಇಟಗಿಯಲ್ಲಿ ತಾನು ಕಟ್ಟಿಸಿದ ಮಹದೇವ ದೇವಾಲಯಕ್ಕೆ ಪಾತ್ರಪಾವುಳ, ನಿವೇದ್ಯ, ಅನ್ನದಾನ, ಭಟ್ಟವೃತ್ತಿ ಮುಂತಾದವುಗಳಿಗೆ ೪೦೦ ಮತ್ತರು ಹೊಲವನ್ನು ದಾನ ನೀಡಿದ್ದಾನೆ.[479] ಮಹಾಸಾಮಂತ ಕಾಕತೀಯ ಪೊಳಲರಸನು ಖಂಡಿಸಣಗರದಲ್ಲಿ ಪೆರ್ಗ್ಗಡೆ ಮಧುವಪ್ಪಯ್ಯಗಳು ಮಾಡಿಸಿದ ಮಧುಕೇಶ್ವರ ದೇವರಿಗೆ, ಅಲ್ಲಿಯ ಗಾವುಂಡರನ್ನು ಒಪ್ಪಿಸಿ ೧೨ ಮನೆ ನಿವೇಶನಗಳನ್ನು, ೨೦ ಮತ್ತರು ಕರಿಯಭೂಮಿಯನ್ನು, ೨೦ ಮತ್ತರು ಕಿಸುಕಾಡು, ೧ ಮತ್ತರು ನೀರ್ನೆಲವನ್ನು ದತ್ತಿ ಕೊಟ್ಟಿದ್ದಾನೆ.[480] ಮಹಾಮಂಡಳೇಶ್ವರ ತ್ರೈಳೋಕ್ಯಮಲ್ಲ ಮಲ್ಲದೇವ ಮಹಾರಾಜ ವಲ್ಲೂರಿನಿಂದ ಆಳುತ್ತಿದ್ದಾಗ ಅವನ ಮಹಾಪ್ರಧಾನ ಹೆಗ್ಗಡೆ ಅತ್ತಿಮಯ್ಯನು ಪುಷ್ಪಗಿರಿಯಲ್ಲಿ ಕೇಶವ ದೇವರನ್ನು ಪ್ರತಿಷ್ಠೆ ಮಾಡಿಸಿ ಅದರ ಸೇವೆಗೆ ೧೨ ಮತ್ತರು ಭೂಮಿಯನ್ನು ಕೊಟ್ಟಿದ್ದಾನೆ.[481] ಮಂಡಳೇಶ್ವರ ಹಲ್ಲವರಸನ ಪಡಿಹಾರಿ ನಾಗದೇವನಾಯಕನ ಹೆಂಡತಿಯಾದ ಚಾಕಮ ಎಂಬುವಳು ಆಲಂಪುರದ ಮಾಧವದೇವರಿಗೆ ಭೂಮಿಯನ್ನು ಬಿಟ್ಟಿದ್ದಾಳೆ.[482] ತ್ರಿಭುವನ ಮಲ್ಲದೇವನ ಅನುಜ್ಞಾತರೂ ಅನೇಕ ತರ್ಕಶಾಸ್ತ್ರ ಪಾರಂಗತರಾಗಿದ್ದ ಸಕಳ ಪ್ರಕಾಶಕ ಭಟ್ಟಾರಕರು ಚಕ್ರವರ್ತಿಗೆ ಶ್ರೇಯಸ್ಸಾಗಲಿ ಎಂದು ದೈವಜ್ಞರಾದ ಆದಿತ್ಯ ಭಟ್ಟೋಪಾಧ್ಯಾಯ ಪಿದ್ದಣ ಭಟ್ಟರಿಗೆ ಜ್ಯೋತಿಶಾಸ್ತ್ರ ಪರೀಕ್ಷಾ ಪೂರ್ವಕವಾಗಿ ೧ ಮತ್ತರು ಗದ್ದೆಯನ್ನು ದಾನ ನೀಡಿದ್ದಾರೆ.[483] ಕೇಶವ ಪುರದ ಪಶ್ಚಿಮ ದಿಶಾಭಾಗದಲ್ಲಿನ

ಭೀಮೇಶ್ವರ ದೇವರಿಗೆ ಮಹಾಪ್ರಧಾನ ಮಾಹೇಶ್ವರ ದಂಡನಾಯಕನು ಶನಿವಾರ ಸಿದ್ದಿಯ ಕೋಲಿನಿಂದ ಅಳೆದು ಭೂಮಿಯನ್ನು ದತ್ತಿಯಾಗಿ ನೀಡಿದ್ದಾನೆ.[484] ಹೀಗೆ ಇನ್ನೂ ನೂರಾರು ಸಂಖ್ಯೆಯಲ್ಲಿ ಪ್ರಭುವರ್ಗದವರು ಭೂಮಿದಾನ ಮಾಡಿದ ಉಲ್ಲೇಖಗಳು ಸಿಗುತ್ತವೆ.

**ಚಕ್ರವರ್ತಿ ಹಾಗೂ ಅವನ ಪರಿವಾರದವರಿಂದ ಭೂಮಿದಾನ :**

ಕಲ್ಯಾಣ ಚಾಲುಕ್ಯ ಚಕ್ರವರ್ತಿಗಳು ನೇರವಾಗಿ ತಾವೇ ದಾನಗಳನ್ನು ನೀಡಿರುವುದು ಕಡಿಮೆ. ಆದರೆ ಅವರ ಕೈಕೆಳಗಿನ ಅಧಿಕಾರಿಗಳಾಗಲಿ, ಮಹಾಮಂಡಳೇಶ್ವರರಾಗಲಿ ದಾನ ಬಿಡುವಾಗ ಹಲವಾರು ಸಂದರ್ಭಗಳಲ್ಲಿ ಅವರ ಅನುಮತಿಯನ್ನು ಪಡೆದುಕೊಂಡು ದಾನ ಬಿಟ್ಟಿದ್ದಾರೆ. ಈ ಹಿಂದೆಯೂ ಇದನ್ನು ಚರ್ಚಿಸಲಾಗಿದೆ. ಸಾಮ್ರಾಜ್ಯದ ಇಡೀ ಭೂಮಿಯೆಲ್ಲ ಚಕ್ರವರ್ತಿಯದೇ ಆಗಿತ್ತು. ಹೀಗಾಗಿಯೇ ಪ್ರತಿಯೊಂದು ದಾನವನ್ನು ನೀಡುತ್ತಿದ್ದಾಗ ಚಕ್ರವರ್ತಿಯನ್ನು ನೆನೆಯುತ್ತಿದ್ದುದನ್ನು ಶಾಸನಗಳು ತಿಳಿಸುತ್ತವೆ. ರಾಜನು ಆಡಳಿತ ಕಾರ್ಯಗಳಲ್ಲಿ ನಿರತನಾಗಿದ್ದಾಗ ಅವನ ರಾಣಿಯರು ಹಾಗೂ ಪರಿವಾರದವರು ಸಾಂಸ್ಕೃತಿಕವಾದ ದಾನ-ದತ್ತಿ ಕಾರ್ಯಗಳಲ್ಲಿ ತೊಡಗಿರುತ್ತಿದ್ದರು. ಹೀಗಾಗಿ ರಾಣಿಯರು ಹಾಗೂ ಚಕ್ರವರ್ತಿಯ ಸಂಬಂಧಿಕರು ನೀಡಿದ ದಾನಗಳು ಚಕ್ರವರ್ತಿಯು ನೇರವಾಗಿ ನೀಡಿದ ದಾನಗಳಿಗಿಂತ ಸಂಖ್ಯೆಯಲ್ಲಿ ಹೆಚ್ಚಾಗಿವೆ. ಚಾಲುಕ್ಯ ಚಕ್ರವರ್ತಿಗಳು ಹಾಗೂ ಅವನ ಪರಿವಾರದವರು ನೀಡಿದ ಕೆಲವು ಭೂಮಿದಾನಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಇರಿವಬೆಡಂಗನ ಆಳ್ವಿಕೆಯಲ್ಲಿ ಅವನ ದಾದಿ ದೇವಕಬ್ಬೆಯು ಚೊಪ್ಪದ್ಯಾಂಡಿಯಲ್ಲಿ ತಾನು ಮಾಡಿಸಿದ ದೇವಕೇಶ್ವರ ದೇವರಿಗೆ ಭೂಮಿಯನ್ನು ನೀಡಿದ್ದಾಳೆ.[485] ಸರಡಗಿ ಶಾಸನದ ಪ್ರಕಾರ ೫ನೇ ವಿಕ್ರಮಾದಿತ್ಯನು ಶಂಕರನಾರಾಯಣ ದೇವರ ನೈಷ್ಠಿಕಸ್ಥಾನವಾಗಿ ದೇವರ ಅಷ್ಟಪರ್ವಕ್ಕೆ ೧೦ ಮತ್ತರು, ವಿದ್ಯಾದಾನಕ್ಕೆ ೨೦ ಮತ್ತರು, ಹಳವಿಗೆ ಬಿಕ್ಕೋಜನಿಗೆ ೧ ಮತ್ತರು, ಹಾಡುವವರಿಗೆ ೨ ಮತ್ತರು, ಪಾತ್ರಕ್ಕೆ ೧ ಮತ್ತರು ಭೂಮಿಯನ್ನು ದಾನ ಮಾಡಿದ್ದಾನೆ.[486] ಇಮ್ಮಡಿ ಜಗದೇಕಮಲ್ಲನು ಪೊಟ್ಟಳ ಕೆರೆಯ ಬೀಡಿನಲ್ಲಿದ್ದಾಗ ಸಗರನಾಡ ಬಳಿಯ ದೋರನಹಳ್ಳಿಯ ೧೦೦೦ ಮತ್ತರು ಭೂಮಿಯನ್ನು ಶ್ರೀ ಮನ್ನೀಲಸಿವಭಟ್ಟಾರಕರಿಗೆ ಧಾರಾಪೂರ್ವಕ ದಾನ ನೀಡಿದ್ದಾನೆ.[487] ಇಮ್ಮಡಿ ಜಯಸಿಂಹನು ಪಿರಿಯ ಮೊಸಂಗಿಯ ಜಗದೇಕಮಲ್ಲ ಜಿನಾಲಯದ ಭೋಗಕ್ಕಾಗಿ ೧೦೦ ಮತ್ತರು ಕರಿನೆಲ, ೨ ಮತ್ತರು ಗದ್ದೆ, ಒಂದು ಹೂವಿನ ತೋಟಗಳನ್ನು ದಾನ ನೀಡಿದ್ದಾನೆ.[488] ಇದನ್ನು 'ಜಯಸಿಂಹ ವಲ್ಲಭದತ್ತಿ' ಎಂದು ಕರೆದಿದೆ. ಹಾಗೆ ವೈದ್ಯರತ್ನಾಕರ ಅಗ್ಗಳಯ್ಯನು ಮುಪ್ಪನ ಹಳ್ಳಿಯಲ್ಲಿ ಕಟ್ಟಿಸಿದ್ದ ಬುದ್ಧಸೇನ ಜಿನಾಲಯಕ್ಕೆ ೧೦೦೦ ಮತ್ತರು ಕರಿನೆಲ, ಒಂದು ಹೂದೋಟ ಮತ್ತು ಇತರ ಇನ್ನೂ ಹಲವು ದಾನಗಳನ್ನು ನೀಡಿದ್ದಾನೆ. ಇಕ್ಕೇರಿಯಲ್ಲಿನ ವೈದ್ಯ ರತ್ನಾಕರ ಜಿನಾಲಯದ ತೋಟಕ್ಕೆಂದು ೪ ಮತ್ತರು, ದೇವರ ಸೇವೆಗೆ ೩೫೦ ಮತ್ತರು ಭೂಮಿಯನ್ನು ಬಿಟ್ಟಿದ್ದಾನೆ.[489] ಹೆಚ್ಚಳ್ಳಿಯ ತ್ರೈಲೋಕ್ಯಮಲ್ಲಜೀಯ ಎಂಬುವನಿಗೆ

೧೦೦ ಮತ್ತರು ಕರಿಯ ಭೂಮಿಯನ್ನು ದತ್ತಿ ಬಿಟ್ಟಿದ್ದಾನೆ.[490] ತ್ರಿಭುವನ ಮಲ್ಲದೇವನಂತೂ 'ನಿತ್ಯಭೂಮಿದಾನಲೋಲ'ನೆನಿಸಿದ್ದಾನೆ. ಈತನ ಕಾಲದಲ್ಲಿ ಇಡೀ ಗ್ರಾಮದ ಭೂಮಿಯನ್ನೇ ದತ್ತಿ ಕೊಡುವುದನ್ನು ಕಾಣಬಹುದು.[491] ಅವುಗಳನ್ನು ಗ್ರಾಮದಾನದಲ್ಲಿ ವಿವರವಾಗಿ ಚರ್ಚಿಸಲಾಗಿದೆ.

ಜಗದೇಕಮಲ್ಲ ಜಯಸಿಂಹನ ಅಕ್ಕ ಅಕ್ಕಾದೇವಿಯು ಪೆರೂರ ತ್ರೈಪುಷ ಶಾಲೆಯ ೪೦೦ ವಿದ್ಯಾರ್ಥಿಗಳ ವಿದ್ಯಾದಾನಕ್ಕೆ ೩೦೦೦ ಮತ್ತರು ಭೂಮಿ, ೨ ಮತ್ತರು ಹೂವಿನ ತೋಟವನ್ನು ದಾನ ಬಿಟ್ಟಿದ್ದಾಳೆ.[492] ಜಗದೇಕಮಲ್ಲ ಜಯಸಿಂಹನ ರಾಣಿ ಮಹಾದೇವಿಯು ಪುವ್ವರವಳ್ಳಿಯ ಬೀಡಿನಲ್ಲಿದ್ದಾಗ ಬಳ್ಳನಿಟ್ಟಿಗೆಯ ತ್ರೈಪುರುಷ ದೇವಾಲಯಕ್ಕೆ[493] ಇನ್ನೊಬ್ಬ ರಾಣಿ ಪದ್ಮಲದೇವಿಯು ಕರಡಿಕಲ್ಲ ಬಳಿಯ ಗೋವಂತಿಗೆಯ ಸ್ವಯಂಭು ಕಲಿದೇವ ಸ್ವಾಮಿಗೆ ಕರಿಯ ನೆಲ ೨೪ ಮತ್ತರು ೪೪೦ ಕಮ್ಮ ಭೂಮಿಯನ್ನು ದಾನ ಮಾಡಿದ್ದಾಳೆ.[494] ಜಯಸಿಂಹನ ಇನ್ನೊಬ್ಬ ರಾಣಿ ಸುಗ್ಗಲದೇವಿಯಿಂದ ದೇವಾಪುರದ ಮಾರಸಿಂಘೇಶ್ವರ ದೇವರಿಗೆ ಹಿರಿಯ ಕೋಲಿನ ೧೦೦ ಮತ್ತರು ಕರಿಯ ನೆಲ ಸಂದಿದೆ.[495] ಹಾಗೆ ತ್ರಿಭುವನ ಮಲ್ಲದೇವನ ರಾಣಿಯರಾದ ಲಕ್ಷ್ಮಾದೇವಿ,[496] ಸಾವಳದೇವಿ,[497] ಚಂದಲದೇವಿ,[498] ಪದ್ಮಲದೇವಿ,[499] ಭಾಗಲಮಹಾದೇವಿ,[500] ಜಾಕಲದೇವಿ,[501] ಮಾಳಲದೇವಿ[502] ಇನ್ನೂ ಮುಂತಾದವರು ಅನೇಕ ದೇವಾಲಯಗಳಿಗೆ ಭೂಮಿದಾನ ಮಾಡಿದ್ದಾರೆ. ಲಕ್ಷ್ಮಾದೇವಿ /ಲಕ್ಷ್ಮ್ಮದೇವಿಯು ತನ್ನ ಆಳ್ವಿಕೆಗೆ ಒಳಪಟ್ಟಿದ್ದ ಡಂಬಳದ ಅಗ್ರಹಾರದ ಶ್ರೀ ಭಗವತಿ ಆರ್ಯ ತಾರಾದೇವಿ ವಿಹಾರಕ್ಕೆ, ಅಲ್ಲಿಯ ಬುದ್ಧದೇವರಿಗೆ ಪೂಜೆ, ಸತ್ಕಾರ, ನೈವೇದ್ಯ, ಬಿಕ್ಷುಗಳಿಗೆಂದು ಭೂಮಿದಾನ ಮಾಡಿದ್ದಾಳೆ.[502] ಭಗವತಿ ತಾರಾದೇವಿಯು ಕ್ರಿ.ಶ. ೧೦೯೬ ರಲ್ಲಿ ಡೋಣಿಯನ್ನಾಳುತ್ತಿದ್ದಾಗ ಸೋಕಸೆಟ್ಟಿ ಎಂಬುವನ ಬಸದಿಗೆ ಭೂದಾನ ನೀಡಿದ್ದಾಳೆ.[503] ರಾಣಿ ಹಿರಿಯ ಕೇತಲದೇವಿಯು ಕುಂಬಿಟ್ಟಿಗೆಯ ಚಂಡೇಶ್ವರ ದೇವರು, ಅಲ್ಲಿದ್ದ ವಿನಾಯಕ ದೇವರು, ಅಭ್ಯಾಗತರ ಸತ್ರಕ್ಕೆ ೧೪ ಮತ್ತರು ಭೂಮಿದಾನ ಮಾಡಿದ್ದಾಳೆ.[503]

ಹೀಗೆ ಸಾಮಾನ್ಯ ಜನರಿಂದ ರಾಜರವರೆಗೂ ಅನೇಕರು ಭೂಮಿದಾನವನ್ನು ಮಾಡಿದ್ದನ್ನು ನೋಡಬಹುದು. ನೂರಾರು, ಸಂಖ್ಯೆಯಲ್ಲಿರುವ ಭೂಮಿದಾನದ ಉಲ್ಲೇಖಗಳು ಕಲ್ಯಾಣ ಚಾಲುಕ್ಯರ ಕಾಲದ ಜನರ ದಾನಗುಣವನ್ನು ಪ್ರದರ್ಶಿಸುತ್ತವೆ.

### ೪.೬.೨ ಹಣದಾನ

'ಹಣ' ಎಂದರೆ ವಿನಿಮಯದ ಒಂದು ಮಾಧ್ಯಮ ಅಥವಾ ಸಾಧನ. ಪ್ರತಿಯೊಂದು ವ್ಯವಹಾರಕ್ಕೂ ಹಣ ವಿನಿಮಯದ ಮಾಧ್ಯಮವಾಗಿ ಕಾರ್ಯನಿರ್ವಹಿಸುತ್ತದೆ. ಹಣದ ಬಳಕೆ ಜಾರಿಯಲ್ಲಿಲ್ಲದ ಕಾಲದಲ್ಲಿ ವಸ್ತು ವಿನಿಮಯ ಪದ್ಧತಿ ಅಸ್ತಿತ್ವದಲ್ಲಿತ್ತು. ಹಣದ ಹುಟ್ಟು ಪ್ರಬುದ್ಧ ನಾಗರಿಕತೆಯ ಪ್ರತೀಕವೂ ಆಗಿದೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಾಣ್ಯಗಳ ರೂಪದಲ್ಲಿ ಹಣ ಚಲಾವಣೆಯಲ್ಲಿತ್ತು. ಅದರ ಜೊತೆಗೆ ವಸ್ತು ವಿನಿಮಯ ಪದ್ಧತಿಯೂ

ರೂಢಿಯಲ್ಲಿತ್ತು. ಆರ್ಥಿಕ ತಜ್ಞರು ರಾಷ್ಟ್ರ ಅಥವಾ ರಾಜ್ಯದಲ್ಲಿ ಚಲಾವಣೆಯಲ್ಲಿರುವ ಒಟ್ಟು ಹಣದ ಬಳಕೆಯ ಮೇಲೆ ಆ ರಾಷ್ಟ್ರ ಅಥವಾ ರಾಜ್ಯದ ಆರ್ಥಿಕ ಸ್ಥಿತಿಯನ್ನು ನಿರ್ಧರಿಸುತ್ತಾರೆ. ಕಲ್ಯಾಣದ ಚಾಲುಕ್ಯರ ಸಾಮ್ರಾಜ್ಯ ಆರ್ಥಿಕವಾಗಿ ಸುಸ್ಥಿತಿಯಲ್ಲಿತ್ತು. ಅಂದು ಸಾಮ್ರಾಜ್ಯದಾದ್ಯಂತ ಅನೇಕ 'ಟಂಕಸಾಲೆ'ಗಳು ಅಸ್ತಿತ್ವದಲ್ಲಿದ್ದವು. ಕರ್ನಾಟಕದ ಲೊಕ್ಕಿಗುಂಡಿ(ಲಕ್ಕುಂಡಿ)ಯು ಅತ್ಯಂತ ಶ್ರೀಮಂತ ನಗರವಾಗಿದ್ದು, ಅಮರಾವತಿಯನ್ನು ಮೀರಿಸುವಂತಿತ್ತು. ಎಂಬುದನ್ನು ಶಾಸನವೊಂದು ಸೂಚ್ಯವಾಗಿ ಹೇಳಿದೆ.[505] ಇಂಥ ಲೊಕ್ಕಿಗುಂಡಿಯಲ್ಲಿ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಪ್ರಸಿದ್ಧ ಟಂಕಸಾಲೆಯಿತ್ತು. ಅದೇ ರೀತಿ ಸೂಂಡಿ(ಸೂಡಿ)[506], ದೋರಸಮುದ್ರ[507] ಮುಂತಾದ ಕಡೆಗಳಲ್ಲಿ ನಾಣ್ಯಗಳನ್ನು ಮುದ್ರಿಸುವ ಕಮ್ಮಟಗಳಿದ್ದವು.

ಈ ಅವಧಿಯಲ್ಲಿ ಗದ್ಯಾಣ, ಪೊನ್, ದ್ರಮ್ಮ , ಪಣ, ಸುವರ್ಣ, ಸಾಹಿ, ಕಾಟಿ, ಸಲಿಕೆ, ಗುಳಿಕೆ, ಕಾಗಿಣಿ, ಮಾದ, ವೀಸಾ, ಅಡ್ಡ , ಪ್ರತಾಪ, ಧರಣ, ಹಾಗ ಎಂಬ ಹಲವು ಬಗೆಯ ನಾಣ್ಯಗಳು ಚಲಾವಣೆಯಲ್ಲಿದ್ದವು. ಇವು ಚಿನ್ನ, ಬೆಳ್ಳಿ, ತಾಮ್ರಗಳಿಂದ ಮಾಡಿದವುಗಾಗಿದ್ದವು. ನಾಣ್ಯಗಳಲ್ಲಿ ಗದ್ಯಾಣ ಅಥವಾ ಪೊನ್ ಎಂಬ ಹೆಸರಿನ ನಾಣ್ಯ ಪ್ರಸಿದ್ಧವಾಗಿತ್ತು. ಗದ್ಯಾಣವು ಚಿನ್ನದ ನಾಣ್ಯವಾಗಿದ್ದು, ಇದರ ತೂಕ ೯೬ ಗ್ರಾಂ. ಎಂದು ಡಾ. ಅಲ್ಟೇಕರರೂ ಸುಮಾರು ೬೨ ಗ್ರಾಂ ಎಂದು ಡಾ. ಅಪ್ಪಾದೊರೈ ಅವರೂ ಅಭಿಪ್ರಾಯ ಪಟ್ಟಿದ್ದಾರೆ.[508] ಗದ್ಯಾಣಕ್ಕೂ ಮತ್ತು ಇತರ ನಾಣ್ಯಗಳಿಗೂ ಇರುವ ಸಂಬಂಧವನ್ನು ಡಾ. ಎಂ. ಚಿದಾನಂದಮೂರ್ತಿ ಹೀಗೆ ಗುರುತಿಸಿದ್ದಾರೆ.

೧ ಗದ್ಯಾಣ – ಹತ್ತು ಪಣ ಅಥವಾ ಹಣ

೧ ಪಣ – ಎರಡು ಅಡ್ಡ (ಸಂಸ್ಕೃತದಲ್ಲಿ ಅರ್ಧ ; ಪಾಲಿ)

೧ ಪಣ – ನಾಲ್ಕು ಹಾಗ (ಮುಪ್ಪಾಗ ೨/೪ ಪಣ)

೧ ಪಣ – ಹದಿನಾರು ವೀಸ (ಅಥವಾ ೨೦ ವೀಸ)

೧ ಹಾಗ – ಎರಡು ಬೇಳೆ

ಹೀಗೆ ಚಲಾವಣೆಯಲ್ಲಿದ್ದ ನಾಣ್ಯಗಳನ್ನು ಹಣದಾನವಾಗಿ ನೀಡಿದ ಉಲ್ಲೇಖಗಳು ಕಲ್ಯಾಣ ಚಾಲುಕ್ಯರ ಶಾಸನಗಳಲ್ಲಿ ಸಾಕಷ್ಟಿವೆ. ಬೇರೆ ಬೇರೆ ಟಂಕಸಾಲೆಗಳಲ್ಲಿ ಮುದ್ರಿತವಾದ ಗದ್ಯಾಣಗಳನ್ನು ಬೇರೆ ಬೇರೆ ಪ್ರದೇಶಗಳಲ್ಲಿ ಅವು ಮುದ್ರಿತವಾದ ಊರಿನ ಹೆಸರಿನಿಂದ ಆ ಊರಿನ ಪ್ರಮುಖ ದೇವರ ಹೆಸರಿನಿಂದ ಕರೆಯುತ್ತದ್ದರೆಂದು ತಿಳಿದು ಬರುತ್ತದೆ. ಅದಕ್ಕಾಗಿಯೇ ಶಾಸನಗಳಲ್ಲಿ 'ಕುಮಾರ ಗದ್ಯಾಣ',[509] 'ದಾಸರ ಗದ್ಯಾಣ',[510] 'ಬೋವ ಗದ್ಯಾಣ',[511] 'ಲೊಕ್ಕಿ ಗದ್ಯಾಣ'[512]ಗಳೆಂದು ಉಲ್ಲೇಖಗೊಂಡಿವೆ. ಭೂಮಿದಾನದಂತೆಯೇ ಬೇರೆ ಬೇರೆ ಉದ್ದೇಶಗಳಿಗೆ ಹಣದಾನವನ್ನು ಮಾಡಲಾಗಿದೆ. ಹಣದಾನದ ಕೆಲವು ಪ್ರಮುಖಾಂಶಗಳನ್ನು ಈ ಕೆಳಗೆ ಚರ್ಚಿಸಲಾಗಿದೆ.

**ಹಣದಾನದ ಪ್ರಮುಖ ಅಂಶಗಳು :**

1 ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಹಣದಾನಗಳು ವ್ಯಾಪಕವಾಗಿ ಹರಡಿವೆ. ಭೂದಾನದಂತೆಯೇ ಹೆಚ್ಚಿನ ಹಣದಾನಗಳು ದೇವಾಲಯ ಮತ್ತು ದೇವರ ಸೇವೆಗೆ ಸಲ್ಲಿಸಲ್ಪಟ್ಟಿವೆ.

1 ಅಂದು ಚಲಾವಣೆಯಲ್ಲಿದ್ದ ಗದ್ಯಾಣ, ಪೊನ್ ಇವು ಚಿನ್ನದ ನಾಣ್ಯಗಳಾಗಿದ್ದು, ಹಣದಾನದ ಜೊತೆಗೆ ಸುವರ್ಣದಾನವನ್ನು ಮಾಡಿದಂತೆ ಭಾವಿಸಬಹುದಾಗಿದೆ.

1 ದೇವಾಲಯ, ವಿದ್ಯಾದಾನ, ಆಹಾರದಾನ ಮುಂತಾದವುಗಳಿಗೆ ಹೆಚ್ಚಿನ ಪ್ರಮಾಣದ ಹಣದಾನವನ್ನು ನೀಡಿದಾಗ ಅದೇ ಹಣವನ್ನು ಬೇರೆಯವರಿಗೆ ಬಡ್ಡಿಗೆ ಕೊಟ್ಟು ಅದರಿಂದ ಬರುವ ಬಡ್ಡಿಯನ್ನು ಉಪಯೋಗಿಸಿಕೊಳ್ಳಲು ವ್ಯವಸ್ಥೆ ಮಾಡುತ್ತಿದ್ದರೆಂಬುದು ಹಲವು ಶಾಸನಗಳಿಂದ ತಿಳಿಯುತ್ತದೆ. ಉದಾಹರಣೆಗೆ – ಪ್ರಭು ಮಾರಸಿಂಗನು ೧೦೦೦ ಗದ್ಯಾಣಗಳನ್ನು ಆಯುವಡಕ ಗ್ರಾಮದ ೪೦೦ ಮಹಾಜನರ ಕೈಯಲ್ಲಿ ಕೊಟ್ಟು ಅದರಿಂದ ವರ್ಷಪ್ರತಿ ಬರುವ ೧೫೦ ಗದ್ಯಾಣ ಬಡ್ಡಿಯಲ್ಲಿ ಸಿದ್ದೇಶ್ವರ ದೇವಾಲಯದ ಜೀರ್ಣೋದ್ದಾರ, ಸುಣ್ಣ ಬಣ್ಣಕ್ಕೆ ಬಳಸಬೇಕೆಂದು ವ್ಯವಸ್ಥೆ ಮಾಡಿದ್ದಾನೆ.[513] ಚಾಲುಕ್ಯಕವಂಶದ ತ್ರೈಲೋಕ್ಯಮಲ್ಲದೇವನ ಆಳ್ವಿಕೆಯಲ್ಲಿ ಕಂಠೆಯಚಾರದ ಬಚ್ಚವೈಷ್ಣವ ಸೊದ್ದಪಯ ಎಂಬುವನು ಐಯ್ಯಾವೊಳೆ ಅಗ್ರಹಾರದಲ್ಲಿ ಸತ್ರ ತೆರೆದು ಹೊನ್ನಿಗೆ ಎರಡು ಪಣದ ಬಡ್ಡಿಯ ಲೆಕ್ಕದಲ್ಲಿ ಕೆಲವು ಗದ್ಯಾಣಗಳನ್ನು ದತ್ತಿ ಇಟ್ಟು, ಅದರಿಂದ ಬಂದ ಬಡ್ಡಿಯಲ್ಲಿ ವ್ಯಯ ತೂಗಿಸಿಕೊಂಡು ಹೋಗುವಂತೆ ಸೂಚಿಸಲಾಗಿದೆ.[514]

ಭೂದಾನದಂತೆಯೇ ಸಾಮಾನ್ಯ ಜನರು ನೀಡಿದ ಹಣದಾನದ ಪ್ರಮಾಣಗಳಿಗಿಂತಲೂ ಆಳುವ ಪ್ರಭುಗಳು, ಅಧಿಕಾರಿಗಳು ನೀಡಿದ ಹಣದಾನಗಳು ಪ್ರಮಾಣದಲ್ಲಿ ಹೆಚ್ಚಾಗಿವೆ. ಕೆಲವು ಸಂದರ್ಭಗಳಲ್ಲಿ ದೇವರಿಗೆ, ಭೂಮಿಯನ್ನು ದಾನ ಮಾಡಲಿಚ್ಛಿಸುವವರು, ಅವರಿಗೆ ದಾನ ಮಾಡಬೇಕಾದ ಆ ಸ್ಥಳದಲ್ಲಿ ಸ್ವಂತ ಭೂಮಿ ಇಲ್ಲದಿದ್ದರೆ, ಬೇರೆ ಭೂಮಿಯನ್ನು ಕೊಂಡು ದಾನ ನೀಡಬೇಕಾಗುತ್ತಿತ್ತು. ಭೂಮಿದಾನ ಮಾಡಬೇಕಾದ ಸ್ಥಳದಲ್ಲಿ ಮಾರಾಟಕ್ಕೆ ಭೂಮಿ ಇಲ್ಲದೆ, ಆಗಲೇ ಎಲ್ಲ ಭೂಮಿಯೂ ದೇವಾಲಯಗಳಿಗೆ ದಾನವಾಗಿ ನೀಡಲ್ಪಟ್ಟಿದ್ದರೆ, ಅಂತಹ ಭೂಮಿಯನ್ನು ದೇವಾಲಯಗಳಿಂದಲೇ ಕೊಂಡು ಮತ್ತೆ ಅವುಗಳಿಗೇ ದಾನ ಮಾಡಲಾಗುತ್ತಿತ್ತು. ಇದರಿಂದ ದಾನಿಯು ಭೂಮಿದಾನವನ್ನೇ ಮಾಡಿದಂತಾಗುತ್ತಿದ್ದರೂ ಪರೋಕ್ಷವಾಗಿ ಹಣದಾನವನ್ನು ಮಾಡಿದಂತಾಗುತ್ತಿತ್ತು. ಹೆಸರಿಗೆ ಮಾತ್ರ ನಡೆದ ಕ್ರಯದಿಂದ ದೇವಾಲಯದ ನಿಧಿಗೆ ಹಣ ಸೇರುತ್ತಿತ್ತು. ಉದಾಹರಣೆಗೆ– ಅಕ್ಕಲಕೋಟೆಯ ಶಾಸನದ ಪ್ರಕಾರ ಹಡಪವಳಿ ದಂಡನಾಯಕನು ಪೈಠಾಣದಲ್ಲಿ ಶ್ರೀ ಕಂದರ್ಪೇಶ್ವರ ಮತ್ತು ಶ್ರೀ ಕೇಶವ ದೇವಾಲಯದಿಂದ ೫೦೦ ಮತ್ತರು ಭೂಮಿಯನ್ನು ಕ್ರಯವಾಗಿ ಪಡೆದು ಅದೇ ದೇವಾಲಯಕ್ಕೆ ಪುನಃ ದತ್ತಿ ಬಿಟ್ಟಿದ್ದಾನೆ.[515]

1 ಹಣದಾನದ ಇನ್ನೊಂದು ಪ್ರಮುಖ ಅಂಶವೆಂದರೆ – ಕೆಲವರು ಒಮ್ಮೆ ಹಣದಾನವನ್ನು ಒಂದು ಉದ್ದೇಶಕ್ಕೆ ನೀಡಿದಾಗ ಮತ್ತೆ ಅದೇ ಉದ್ದೇಶಕ್ಕೆ ಪ್ರತಿ ತಿಂಗಳು ಅಥವಾ ಪ್ರತಿ ವರ್ಷದಂತೆ ಹಣದಾನ ನೀಡಲು ಒಪ್ಪಿಕೊಂಡಿರುವುದು ಅಥವಾ ಮಹಾಜನರಿಗೆ, ವ್ಯಾಪಾರಿಗಳಿಗೆ ಆಯಾ ಪ್ರದೇಶದ ಅಧಿಕಾರಿಗಳು ಆಜ್ಞೆಯನ್ನು ಮಾಡಿ ನಿಯಮಿತವಾಗಿ ದೇವಾಲಯಕ್ಕೆ ಅಥವಾ ಇತರ ಕಾರ್ಯಗಳಿಗೆ ಹಣವನ್ನು ಸಲ್ಲಿಸಲು ಸೂಚಿಸಿರುವುದು. ಉದಾಹರಣೆಗೆ ತ್ರಿಭುವನಮಲ್ಲನ ಆಳ್ವಿಕೆಯಲ್ಲಿ ಬಾದುಂಬೆಯ ಸಮೀದಲ್ಲಿನ ಕೊಪ್ಪೇಶ್ವರ ದೇವರ ಬಳಿಯ ನಾರಾಯಣದೇವರಿಗೆ, ಮಹಾದೇವರಿಗೆ, ವಿನಾಯಕದೇವರಿಗೆ ದೀಪದ ಎಣ್ಣೆ, ನೈವೇದ್ಯ, ಹೂಬತ್ತಿಗೆಂದು ಮಂಡವದ ಪಾಳಿಸಾರರು ೨ ದ್ರಮ್ಮ, ಮುನ್ನೆದಡಿಯ ಪಾಳಿಸಾರರು ೨ ದ್ರಮ್ಮ, ಇನ್ನೊಂದು ಗುಂಪಿನ ಮನ್ನೆಯ ಪಾಳಿಸಾರರು ೨ ದ್ರಮ್ಮಗಳನ್ನು ಪ್ರತಿ ತಿಂಗಳು ಕೊಡುವುದಾಗಿ ಒಪ್ಪಿಕೊಂಡುದುದನ್ನು ಬಸವಕಲ್ಯಾಣದ ಶಾಸನ ತಿಳಿಸುತ್ತದೆ.[516]

1 ಇನ್ನೂ ಕೆಲವು ಶಾಸನಗಳು, ದಂಡದಿಂದ ಬಂದ ಹಣವನ್ನು ದತ್ತಿ ಬಿಟ್ಟ ವಿವರ ನೀಡುತ್ತವೆ. ಮಹಾಮಂಡಳೇಶ್ವರ ಎರೆಯಮ್ಮ (ಎರಗ)ನು ದಂಡದಿಂದ ಬಂದ ೪೦ ಗದ್ಯಾಣ ಪೊನ್ನನ್ನು ಮಂಡೂರಿನಲ್ಲಿ ಕೆರೆಯನ್ನು ಕಟ್ಟಿಸಲು ಆ ಊರಿನ ಮಧುಸೂಧನಯ್ಯ ಮತ್ತು ಪ್ರಮುಖ ಮಹಾಜನರಿಗೆ ಕೊಟ್ಟಿದ್ದಾನೆ.[517] ಅದೇ ರೀತಿ ಮಹಾಮಂಡಳೇಶ್ವರ ಚೇತರಸನು ಶ್ರೀ ಪರ್ವತದ ಮಲ್ಲಿಕಾರ್ಜುನ ಶಿಲಾಮಠದ ಪ್ರಸಿದ್ಧ ಆಚಾರ್ಯ ಪರ್ವತಾವಳಿಯ ಕಾಳಾಮುಖ ಮುನಿರಾಮೇಶ್ವರ ಪಂಡಿತರ ಕಾಲನ್ನು ತೊಳೆದು ಅವರ ಶಿಷ್ಯರಿಗೆ ಶಿವಪುರ ಗ್ರಾಮದ ಉತ್ಪನ್ನ, ನಿಧಿ, ನಿಧಾನ, ಶುಲ್ಕ ದಂಡದಧನ ಮತ್ತು ಉಪಭೋಗಗಳನ್ನು ದತ್ತಿಯಾಗಿ ನೀಡಿದ್ದಾನೆ.[518]

ಹಣದಾನವನ್ನು ಬೇರೆ ಬೇರೆ ಉದ್ದೇಶಗಳಿಗಾಗಿ ಬೇರೆ ಬೇರೆ ವ್ಯಕ್ತಿಗಳಿಗೆ ದೇವಾಲಯಗಳಿಗೆ ನೀಡಲಾಗಿದೆ. ಅಂಥ ಕೆಲವು ಉದಾಹರಣೆಗಳನ್ನು ಇಲ್ಲಿ ಚರ್ಚಿಸಲಾಗಿದೆ.

ರೈಕೆಯ ದ್ವೇದಿಚಟ್ಟೋಪಾಧ್ಯಾಯ ಸೋಮಯಾಜಿ ಎಂಬ ಬ್ರಾಹ್ಮಣೋತ್ತಮನು ಮೊದೆಯನೂರು ತ್ರೈಪುರುಷದೇವರ ಸೇವೆಗೆ ಮತ್ತು ಜೀರ್ಣೋದ್ಧಾರಕ್ಕೆಂದು ೨ ಗದ್ಯಾಣಗಳನ್ನು ದಾನ ನೀಡಿದ್ದಾನೆ.[519] ಕೆಲವು ವ್ಯಾಪಾರಿಗಳು ಸೇರಿ ಭಾಲ್ಕಿಯಲ್ಲಿ ಒಂದು ಸಭಾಮಂಟಪವನ್ನು ಕಟ್ಟಿಸಿ ಅದರ ವ್ಯವಸ್ಥೆಗೆ ಕೆಲವು ದ್ರಮ್ಮಗಳನ್ನು ದತ್ತಿ ಬಿಟ್ಟಿದ್ದಾರೆ.[520] ಬಾಳ್ಗುಳಿಯ ಐವತ್ತು ಮಹಾಜನರು ಅಲ್ಲಿನ ಆದಿತ್ಯ ದೇವರಿಗೆ ತೋಟವನ್ನು ದಾನ ಮಾಡುತ್ತಾರೆ. ಆ ತೋಟವನ್ನು ಗುತ್ತಿಗೆ ಪಡೆದ ಕನ್ನಯ್ಯ ಎಂಬುವವನು ಪ್ರತಿ ವರ್ಷ ಆಣೆಯ ಹೊನ್ನು ಆರು ಗದ್ಯಾಣಗಳನ್ನು ದೇವರಿಗೆ ನೀಡುತ್ತಾನೆ.[521] ಈಶ್ವರ ಸೆಟ್ಟಿ ಎಂಬುವವನು ಕುಕುನೂರಿನಲ್ಲಿ ತಾನು ಕಟ್ಟಿಸಿದ ಮಂಟಪದ ಪರಿಸೂತ್ರದ ನಿರ್ವಹಣೆಗಾಗಿ ೧೦೦ ಗದ್ಯಾಣಗಳನ್ನು ದಾನ ನೀಡಿದ್ದಾನೆ.[522] ಮಾಣಿಕಯ್ಯನೆಂಬಾತನು ತನ್ನ ತಂದೆ ಲೇಕಿಮಯ್ಯನಾಯಕನಿಗೆ ಪುಣ್ಯವಾಗಲೆಂದು ಮಾಳೆಯಗೇರಿಯ ಅರವಟ್ಟಿಗೆಗೆ ೪ ಗದ್ಯಾಣಗಳನ್ನು ದಾನ ಬಿಟ್ಟು, ಈ ಹಣದ ಬಡ್ಡಿಯಲ್ಲಿ

ಮೂರು ತಿಂಗಳು ಅರವಟ್ಟಿಗೆ ನಡೆಸಲು ವ್ಯವಸ್ಥೆ ಮಾಡಿದ್ದಾನೆ.[523] ಲೊಕ್ಕಿಗುಂಡಿಯ ನಾಣಿಮಯ್ಯನು ಕಪ್ಪಚರ ದೇವರ ಮಠದಲ್ಲಿನ ಸತ್ರಕ್ಕಾಗಿ ೧೦ ಗದ್ಯಾಣಗಳನ್ನು, ಆ ಮಠದಲ್ಲಿ ಪುರಾಣವನ್ನು ಕೇಳುವ ಮಹಾಜನಕ್ಕೆ ಗಂಧಕ್ಕಾಗಿ ೨ ಗದ್ಯಾಣಗಳನ್ನು ದಾನ ನೀಡುತ್ತಾನೆ.[524] ಮುದ್ಧಲದೇವಿ ಎಂಬಾಕೆ ಶಿವಪುರ ಎಂಬ ಅಗ್ರಹಾರದ ಮಹಾಜನಗಳ ಕೈಯ್ಯಲ್ಲಿ ೬ ಗದ್ಯಾಣಗಳನ್ನು ಅಗ್ಗಿಷ್ಟಿಗೆ ನೋಡಿಕೊಳ್ಳಲು ದಾನ ಬಿಡುತ್ತಾಳೆ.[525]

ಪಟ್ಟಣಸ್ವಾಮಿ ನೊಕ್ಕಯ್ಯ ಎಂಬಾತನು ಐದು ಕೆರೆಗಳನ್ನು ಕಟ್ಟಿಸಿ, ಈ ಐದು ಕೆರೆಗಳಿಗೆ ನೀರು ಪೂರೈಕೆ ಮಾಡಲು, 'ಉಗುರೆ' ಎಂಬ ಹಳ್ಳಕ್ಕೆ ತಟಾಕ ನಿರ್ಮಿಸಲು ೧೦೦ ಗದ್ಯಾಣಗಳನ್ನು ದಾನ ಮಾಡಿದ್ದಾನೆ.[526] ಬಾಳಂಬೀಡಿನಲ್ಲಿ ಬ್ರಹ್ಮೇಶ್ವರ ದೇವರ ಗರ್ಭಗೃಹ ಮತ್ತು ಸುಖನಾಸಿಯ ಜೀರ್ಣೋದ್ಧಾರಕ್ಕೆಂದು ಶಕ್ತಿದೇವ ಪಂಡಿತರ ಮಗಳು ಕುರುವರ ಬಾಗಿಯಕ್ಕ ಎಂಬುವಳು ೧೪ ಗದ್ಯಾಣಗಳನ್ನು ದತ್ತಿ ಬಿಟ್ಟಿದ್ದಾಳೆ.[527] ಕುಕ್ಕನೂರಿನ ಅಗ್ರಹಾರದಲ್ಲಿ ಶ್ರೀಪತಿನಾಯಕ ಎಂಬಾತನು ಸಾಸಿರ್ವ ವ್ಯಾಪಾರಿ ಸಂಘದಿಂದ ಭೂಮಿಯನ್ನು ಮತ್ತು ೧೦೦ ಗದ್ಯಾಣಗಳನ್ನು ಪಡೆದು, ೧೦೦ ಗದ್ಯಾಣಗಳಿಂದ ಬರುವ ಬಡ್ಡಿಯಿಂದ ದೇವರ ಅಂಗಭೋಗ, ರಂಗಭೋಗ, ಚೈತ್ರ, ಪವಿತ್ರ, ಪೂಜಾರಿ, ಹಾಡುವವರು, ಪರೆಕಾರರು, ದೇವರ ಹೂದೋಟವನ್ನು ಮಾಡುವ ಮಾಲೆಗಾರರು ಮುಂತಾದವರ ಜೀವಿತಕ್ಕೆ ವ್ಯವಸ್ಥೆ ಮಾಡುತ್ತಾನೆ.[528] ದೇಮಯ ಘೈಸಾಸನ ಮಗ ಹೊನ್ನವರ ಮದ್ದಿಮಯ್ಯನು ಶಂಕರ ನಾರಾಯಣ ದೇವಾಲಯದ ರಂಗಭೋಗಕ್ಕೆ ೧೪೦ ಗದ್ಯಾಣ, ಅರವಟ್ಟಿಗೆಗೆ ೧೦ ಗದ್ಯಾಣ, ಅನ್ನಸತ್ರಕ್ಕೆ ೨೪೦ ಗದ್ಯಾಣಗಳನ್ನು ದಾನ ನೀಡಿದ್ದಾನೆ.[529]

ಬನವಾಸಿ-೧೨೦೦೦ವನ್ನು ಆಳುತ್ತಿದ್ದ ಶೋಭನರಸನು ಶೋಭನೇಶ್ವರ ದೇವರಿಗೆ ೫ ಗದ್ಯಾಣಗಳನ್ನು ದಾನ ಮಾಡಿದ್ದಾನೆ[530] ಇಮ್ಮಡಿ ಜಯಸಿಂಹನ ರಾಣಿ ಪದ್ಮಲದೇವಿಯು ಗೋವಂತಿಗೆಯ ಸ್ವಯಂಭು ಕಲಿದೇವ ಸ್ವಾಮಿಯ ನೈವೇದ್ಯಕ್ಕೆ ೧೦ ವೀಸಗಳನ್ನು ಬಿಟ್ಟಿದ್ದಾಳೆ[531] ಚಿನ್ನತುಂಬಳ ಶಾಸನದ[532] ಪ್ರಕಾರ ಶ್ರೀಧರಯ್ಯ ದಂಡನಾಯಕನ ಬಿನ್ನಹದ ಮೇರೆಗೆ ತ್ರಿಭುವನ ಮಲ್ಲದೇವನ ಪಟ್ಟ ಮಹಾದೇವಿ ಮಲಯಮತೀ ದೇವಿಯು ತುಂಬಳ ಅಗ್ರಹಾರದ ಮಹಾಜನರಿಗೆ ಈ ಕೆಳಗಿನಂತೆ ಹಣದಾನ ಮಾಡಿದ್ದಾಳೆ.

| | |
|---|---|
| ವ್ಯಾಖ್ಯಾನ ಉಪಧ್ಯಾಯರಿಗೆ | – ೮ ಗದ್ಯಾಣ |
| ಪುರಾಣ ಭಟ್ಟರಿಗೆ | – ೮ ಗದ್ಯಾಣ |
| ಋಗ್ವೇದ ಮತ್ತು ಯಜರ್ವೇದಗಳನ್ನು ಭೋದಿಸುವ ಉಪಾಧ್ಯಾಯರಿಗೆ | – ೧೨ ಗದ್ಯಾಣ |
| ಅಗ್ಗಿಷ್ಟಿಗೆ ನೋಡಿಕೊಳ್ಳುವ ಬ್ರಾಹ್ಮಣನಿಗೆ | – ೨ ಗದ್ಯಾಣ |

ಹೀಗೆ ಅಂತೂ ಒಟ್ಟು ೩೦ ಗದ್ಯಾಣಗಳನ್ನು ನೀಡಿದ್ದಾಳೆ. ಬೆಳವಂತಿಯ ಹಿರಿಯ ಕೆರೆಯ ಜೀರ್ಣೋದ್ಧಾರಕ್ಕೆ ಶ್ರೀಧರಯ್ಯ ದಂಡನಾಯಕನು 'ಬೆಳವಂತಿಯ ಮುನ್ನೂರೈವರಿಗೆ'

೧೦೦ ಗದ್ಯಾಣಗಳನ್ನು ದಾನ ಮಾಡಿದ್ದಾನೆ.[533] ಮಹಾಮಂಡಳೇಶ್ವರ ಪ್ರಭುಮಾರಸಿಂಗನು ಆಯುವಡಕ ಗ್ರಾಮದ ಸಿದ್ದೇಶ್ವರ ದೇವಾಲಯದ ಜೀರ್ಣೋದ್ಧಾರಕ್ಕೆ ಮತ್ತು ಸುಣ್ಣ-ಬಣ್ಣ ಮಾಡಲು ೧೦೦೦ ಗದ್ಯಾಣಗಳನ್ನು ನೀಡಿದ್ದಾನೆ. ಅದೇ ರೀತಿ ಆ ಗ್ರಾಮದ ಐನೂರು ಮಹಾಜನರ ಕೈಯ್ಯಲ್ಲಿ ೧೦೦೦ ಸ್ವರ್ಣಗಳನ್ನಿಟ್ಟು, ಅದರಿಂದ ಬರುವ ೧೪೦ ಗದ್ಯಾಣ ಹಣದಲ್ಲಿ ವರ್ಷಂಪ್ರತಿ ೧೨ ಜನ ಬ್ರಾಹ್ಮಣರಿಗೆ ಭೋಜನಾರ್ಥ ಬಳಸಲು ಸೂಚಿಸುತ್ತಾನೆ. ಹಾಗೆ ೧೨ ಜನ ಬ್ರಾಹ್ಮಣರಿಗೆ ೨೦೦ ಗದ್ಯಾಣಗಳನ್ನು ದಾನ ಮಾಡಿ ಅದರ ಬಡ್ಡಿಯಿಂದ ಬರುವ ಹಣವನ್ನು ವೆಚ್ಚಕ್ಕೆ ಬಳಸಲು ವ್ಯವಸ್ಥೆ ಮಾಡಿದ್ದಾನೆ.[534]

ಹೀಗೆ ಅನೇಕರು ವಿವಿಧ ಉದ್ದೇಶಗಳಿಗೆ ಹಣದಾನವನ್ನು ಮಾಡಿದ್ದಾರೆ. ಅಷ್ಟೇ ಅಲ್ಲದೆ ಜನರು ಸಾಮೂಹಿಕವಾಗಿಯೂ ಹಣದಾನ ಮಾಡಿದ ಉದಾಹರಣೆಗಳು ಸಿಗುತ್ತವೆ. ನಾವಿಡ (ಹಡಪದ) ನಾದ ದಾಸಿಮಯ್ಯನು ದಾನೇಶ್ವರ ದೇವಾಲಯವನ್ನು ನಿರ್ಮಿಸಿದಾಗ, ಜನಗರಡೋಣಿಯ ಪ್ರತಿಯೊಬ್ಬರೂ ತಲಾ ಒಂದು ಪಣವನ್ನು ದೇವಾಲಯಕ್ಕೆ ದಾನವಾಗಿ ನೀಡಿದ್ದಾರೆ.[335] ಅದೇ ಪ್ರಕಾರವಾಗಿ ಆಯಿಜೆ-೨೦೦ ರ ಪ್ರತಿಯೊಂದು ಹಳ್ಳಿಯಿಂದ ಒಂದೊಂದು ಗದ್ಯಾಣ ಪೊನ್ನು ಆಲಂಪುರದ ಬ್ರಹ್ಮೇಶ್ವರ ದೇವಾಲಯಕ್ಕೆ ದಾನವಾಗಿ ನೀಡಲ್ಪಟ್ಟಿದೆ.[336]

### ೪.೬.೩ ಗ್ರಾಮದಾನ

ಭೂದಾನದ ಪರಮ ಉತ್ಕರ್ಷವೇ ಗ್ರಾಮದಾನ. ಗ್ರಾಮದಾನ ಅಂದು ಅತ್ಯಂತ ಪ್ರತಿಷ್ಠಿತ ದಾನವಾಗಿತ್ತು. ಗ್ರಾಮದಾನವೆಂದರೆ ಕೇವಲ ಗ್ರಾಮವಷ್ಟೇ ಅಲ್ಲ ; ಆ ಗ್ರಾಮಕ್ಕೆ ಸೇರಿದ್ದ ಎಲ್ಲ ಭೂಮಿ, ತೆರಿಗೆಗಳು ಮತ್ತು ಸಾರ್ವಜನಿಕ ಆಸ್ತಿಗಳೂ ಕೂಡ ಇದರಲ್ಲಿ ಸೇರುತ್ತಿದ್ದವು. ತಮ್ಮ ತಮ್ಮ ಅಂತಸ್ತಿಗೆ ತಕ್ಕಂತೆ ಹಲವಾರು ಜನರು ಭೂಮಿಯನ್ನೊ ಹಣವನ್ನೊ, ದಾನ ಮಾಡಿದ್ದರೆ. ಪ್ರಭು ವರ್ಗದ ಚಕ್ರವರ್ತಿ, ಮಹಾಮಂಡಳೇಶ್ವರ, ಸಾಮಂತರು ಇಡಿಯಾದ ಒಂದೊಂದು ಗ್ರಾಮವನ್ನೇ ದಾನ ಮಾಡಿದ್ದಾರೆ. ಇದನ್ನು ಭೂಮಿದಾನದ ಪರಾಕಾಷ್ಠೆ ಎಂದರೆ ತಪ್ಪಾಗಲಾರದು. ಗ್ರಾಮದಾನ ಅಧಿಕಾರ ವಿಕೇಂದ್ರಿಕರಣದ ಒಂದು ಮಾರ್ಗವೂ ಆಗಿತ್ತು . ಕಲ್ಯಾಣದ ಚಾಲುಕ್ಯರು ತಮ್ಮ ವಿಶಾಲವಾದ ಸಾಮ್ರಾಜ್ಯವನ್ನು ಮಂಡಲ, ವಿಷಯ, ದೇಶ, ನಾಡು, ಕಂಪಣ, ಗ್ರಾಮಗಳೆಂದು ವಿಂಗಡಿಸಿದ್ದರು. ವಿಸ್ತಾರವಾದ ಇಡೀ ಸಾಮ್ರಾಜ್ಯದ ಮೇಲೆ ಒಬ್ಬ ವ್ಯಕ್ತಿ ಆಡಳಿತ ನಡೆಸುವುದು ಕಷ್ಟದ ಕೆಲಸ. ಆದ್ದರಿಂದಲೇ ಇಂದಿನ ಆಧುನಿಕ ಯುಗದಲ್ಲೂ ಆಡಳಿತ ಸೌಕರ್ಯಕ್ಕಾಗಿ ರಾಷ್ಟ್ರವನ್ನು ರಾಜ್ಯ – ವಿಭಾಗ– ಜಿಲ್ಲೆ – ತಾಲೂಕು–ಹೋಬಳಿ– ಗ್ರಾಮ ಎಂದು ವಿಭಾಗಿಸಿರುವುದನ್ನು ಕಾಣುತ್ತೇವೆ. ಅತೀ ಪ್ರಾಚೀನ ಕಾಲದಿಂದಲೂ 'ಗ್ರಾಮ' ಅತ್ಯಂತ ಚಿಕ್ಕ ಆಡಳಿತ ವಿಭಾಗವಾಗಿತ್ತು. ಕಲ್ಯಾಣ ಚಾಲುಕ್ಯರ ಕಾಲದ ಒಂದು ವಿಶೇಷವೆಂದರೆ ತಮ್ಮ ಆಡಳಿತ ವಿಭಾಗಗಳನ್ನು, ಅವುಗಳಲ್ಲಿ ಒಳಗೊಂಡಿದ್ದ ಗ್ರಾಮಗಳ ಸಂಖ್ಯೆ ಮತ್ತು ಮುಖ್ಯ ಪಟ್ಟಣಗಳ ಹೆಸರುಗಳಿಂದಲೇ ಕರೆಯುತ್ತಿದ್ದರು. ಉದಾಹರಣೆಗೆ

– ಆಲಂದೆಸಾಸಿರ, ತರ್ದವಾಡಿ ಸಾಸಿರ, ಬೆಳವಲ ಮುನ್ನೂರು, ಬನವಾಸಿ ಹನ್ನೆರಡುಸಾವಿರ, ಅಟ್ಟಳೆನಾಡು ಮುನ್ನೂರು, ಪುಲಿಗೆರೆ ಮುನ್ನೂರು ಇತ್ಯಾದಿ. ಗ್ರಾಮಗಳು 'ಗಾವುಂಡ'ರೆಂಬ ಅಧಿಕಾರಿಗಳ ಮೇಲ್ವಿಚಾರಣೆಯಲ್ಲಿರುತ್ತಿದ್ದವು. ಇಂಥ ವಿಶೇಷತೆಗಳನ್ನು ಹೊಂದಿದ್ದ ಅನೇಕ ಗ್ರಾಮಗಳು ದಾನವಾಗಿ ನೀಡಲ್ಪಟ್ಟಿವೆ. ದೇವಾಲಯಗಳಿಗೆ, ವ್ಯಕ್ತಿಗಳಿಗೆ ಗ್ರಾಮದಾನ ಮಾಡಿರುವುದನ್ನು ಅನೇಕ ಶಾಸನಗಳು ಉಲ್ಲೇಖಿಸುತ್ತವೆ. ಗ್ರಾಮದಾನಕ್ಕೆ ಕೆಲವು ವಿಶೇಷತೆಗಳಿದ್ದು ಅವುಗಳನ್ನು ಈ ಕೆಳಗೆ ವಿವರಿಸಲಾಗಿದೆ.

**ಗ್ರಾಮದಾನದ ವಿಶೇಷತೆಗಳು :**

1 ಗ್ರಾಮದಾನಗಳನ್ನು ಆಡಳಿತ ವರ್ಗದವರಷ್ಟೇ ನೀಡಿದ್ದಾರೆ. ಅಂದರೆ–ಚಕ್ರವರ್ತಿ, ಮಹಾಮಂಡಳೇಶ್ವರ, ಸಾಮಂತ ಮುಂತಾದ ಪ್ರಭುವರ್ಗದವರು ಮಾತ್ರ ಗ್ರಾಮದಾನ ಮಾಡಿದ್ದಾರೆ. ಸಾಮನ್ಯ ಜನರಿಗೆ ಗ್ರಾಮದಾನ ನೀಡುವ ಅವಕಾಶವಿರಲಿಲ್ಲ. ಏಕೆಂದರೆ ಗ್ರಾಮ ಒಂದು ಆಡಳಿತ ವಿಭಾಗವಾಗಿದ್ದು, ಆಳುವ ಒಡೆಯರಿಗಷ್ಟೇ ನಾಡಿನ ಪ್ರದೇಶಗಳ ಮೇಲೆ ಸಾರ್ವಭೌಮಾಧಿಕಾರವಿತ್ತು.

1 ಬಹಳಷ್ಟು ಗ್ರಾಮದಾನಗಳು ಧಾರ್ಮಿಕ ಉದ್ದೇಶಗಳಿಗೆಂದು ದೇವಾಲಯಗಳಿಗೆ ನೀಡಲ್ಪಟ್ಟಿವೆ. ಅದರೊಂದಿಗೆ ವಿದ್ಯಾದಾನ, ಅನ್ನದಾನ ಮುಂತಾದ ಉದ್ದೇಶಗಳಿಗೂ ನೀಡಲಾಗಿದೆ. ಕೆಲವೊಂದು ದೇವಾಲಯಗಳಿಗೆ ಒಂದಕ್ಕಿಂತ ಹೆಚ್ಚು ಗ್ರಾಮಗಳನ್ನು ದತ್ತಿ ಬಿಡಲಾಗಿದೆ. ದೇವಸ್ಥಾನದ ಮುಖ್ಯಸ್ಥರಾಗಿದ್ದ ಸ್ಥಾನಪತಿ ಅಥವಾ ಆಚಾರ್ಯರ ಪ್ರಭಾವವೂ ಇದಕ್ಕೆ ಕಾರಣವಾಗಿದ್ದಿತು. ಬಂಕಾಪುರದ ಶಾಸನದ ಪ್ರಕಾರ ಅಲ್ಲಿನ ಇಂದ್ರೇಶ್ವರ ದೇವಸ್ಥಾನಕ್ಕೆ ಒಟ್ಟು ೧೨ ಗ್ರಾಮಗಳನ್ನು ದತ್ತಿ ಬಿಡಲಾಗಿತ್ತು.[537] ಅಂದಿನ ಕಾಲದಲ್ಲಿ ಇಂದ್ರೇಶ್ವರ ದೇವಸ್ಥಾನದ ಆಚಾರ್ಯ ವರುಣಶಿವ ಪಂಡಿತರು ಬಹಳ ಪ್ರಭಾವಶಾಲಿ ಪಂಡಿತರಾಗಿದ್ದರು. ಇವರು ಚಕ್ರವರ್ತಿ ತ್ರೈಲೋಕ್ಯಮಲ್ಲ, ಭುವನೈಕಮಲ್ಲ ಮತ್ತು ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯ ಈ ಮೂರೂ ಜನ ಅರಸರ ಸಮಕಾಲೀನರಾಗಿ ಆಚಾರ್ಯವಂತಿಕೆ ಕೈಗೊಂಡವರಾಗಿದ್ದರು.[538]

1 ಗ್ರಾಮದಾನಗಳ ಜೊತೆಗೆ ಆ ಗ್ರಾಮದ ಸುಂಕಗಳನ್ನು ಬಿಡಲಾಗುತ್ತಿತ್ತು. ದಾನದ ವಿಧಾನಕ್ಕೆ ಅನುಗುಣವಾಗಿ ಸರ್ವಸಮಸ್ಯವಾಗಿ, ಸರ್ವಬಾಧಾ ಪರಿಹಾರವಾಗಿ ದಾನ ಬಿಡಲಾಗುತ್ತಿತ್ತು. ದಾನ ನೀಡಲ್ಪಟ್ಟ ಗ್ರಾಮದ ಮೇಲಾಳ್ಕೆಯು ದಾನ ಪಡೆದವರಿಗೆ ಹಸ್ತಾಂತರವಾಗುತ್ತಿತ್ತು. ಆ ಗ್ರಾಮದಿಂದ ಬರುವ ತೆರಿಗೆಗಳು, ಅಲ್ಲಿನ ಭೂಮಿ, ಉತ್ಪನ್ನಗಳು ದಾನ ಪಡೆದವರಿಗೆ ಸೇರುತ್ತಿದ್ದವು. ಅಲ್ಲದೆ, ದಾನವಾಗಿ ನೀಡಲ್ಪಟ್ಟ ಗ್ರಾಮದ ಮೇಲ್ವಿಚಾರಣೆ, ಅದರ ನಿರ್ವಹಣೆಯ ಹೊಣೆಗಾರಿಕೆ ದಾನ ಪಡೆದವರಿಗೆ ಸೇರುತ್ತಿತ್ತು. ಗ್ರಾಮದ ಮೇಲ್ವಿಚಾರಣೆಯು ಅಧಿಕಾರಿಗಳ ಕೈಯ್ಯಲ್ಲಿದ್ದರೆ, ಅವರು ಆ ಗ್ರಾಮದ ತೆರಿಗೆಗಳನ್ನು ರಾಜನಿಗೆ ಸಲ್ಲಿಸಬೇಕಾಗಿತ್ತು. ಆದರೆ ಸರ್ವಾಭ್ಯಂತ್ಯರ ಸಿದ್ಧಿ ಸರ್ವನಮಸ್ಯವಾಗಿ ದಾನ ನೀಡಿದ ಗ್ರಾಮದ ತೆರಿಗೆಗಳನ್ನು ದಾನ ಪಡೆದ ದೇವಾಲಯ ಅಥವಾ

ವ್ಯಕ್ತಿಯೇ ಉಪಭೋಗಿಸಬಹುದಾಗಿತ್ತು. 'ಸರ್ವಾಭ್ಯಂತ್ಯರ ಸಿದ್ಧಿ ಸರ್ವನಮಸ್ಯವಾಗಿ' ಎಂಬ ಪದವು ತೆರಿಗೆ ಮುಕ್ತವಾಗಿ ದತ್ತಿ ನೀಡಿದ್ದನ್ನು ಸೂಚಿಸುತ್ತದೆ.[539]

1 ವಯಕ್ತಿಕ ಉಪಭೋಗಕ್ಕೆಂದು ಬ್ರಾಹ್ಮಣರು ಹಾಗೂ ಇತರ ವ್ಯಕ್ತಿಗಳಿಗೆ ಗ್ರಾಮದಾನ ಮಾಡಲಾಗಿದೆ. ಯಶ ಪ್ರತಿಷ್ಠೆಯಿಂದ, ಶ್ರೇಯಸ್ಸಾಗಲೆಂದು, ಪರೋಕ್ಷ ವಿನಯಕ್ಕೆಂದು ಗ್ರಾಮದಾನಗಳನ್ನು ನೀಡಲಾಗಿದೆ.

1 ಕೆಲವು ಸಂದರ್ಭಗಳಲ್ಲಿ ಸಾಮಾನ್ಯ ಗ್ರಾಮಗಳನ್ನು ಆಗ್ರಹಾರಗಳನ್ನಾಗಿ ಪರಿವರ್ತಿಸಿ ಬ್ರಾಹ್ಮಣರಿಗೆ ಅಥವಾ ದೇವಾಲಯಗಳಿಗೆ ದತ್ತಿ ಬಿಡಲಾಗಿದೆ. ಮಹಾಮಂಡಳೇಶ್ವರ ಚಿದ್ದಣಚೋಳ ಮಹಾರಾಜನು 'ಮುದಿವೇಮು' ಗ್ರಾಮವನ್ನು ಅಲ್ಲಿನ ಮಹಾರಾಜನರಿಗೆ ಅಗ್ರಹಾರವನ್ನಾಗಿಸಿ ಆಹೋಬಲ ನರಸಿಂಹದೇವರ ಸಮ್ಮುಖದಲ್ಲಿ ದತ್ತಿಬಿಟ್ಟಿದ್ದಾನೆ.[540]

1 ಚಕ್ರವರ್ತಿ ಹಾಗೂ ಮಹಾಮಂಡಳೇಶ್ವರರನ್ನು ಹೊರತುಪಡಿಸಿ ಉಳಿದ ಆಡಳಿತ ವರ್ಗದವರು ಗ್ರಾಮದಾನ ನೀಡಬೇಕಾದಾಗ ಚಕ್ರವರ್ತಿಯ ಇಲ್ಲವೆ ಮಹಾಮಂಡಳೇಶ್ವರರ ಅನುಮತಿಯನ್ನು ಸಾಮಾನ್ಯವಾಗಿ ಪಡೆಯಬೇಕಾಗಿತ್ತು. ಸೇನಾಪತಿ, ದಂಡನಾಯಕ, ಮನೆವೆರ್ಗ್ಗಡೆಯಾಗಿದ್ದ ಕನ್ನಪಯ್ಯನು ದಿಗ್ಗಾವಿಯನ್ನು ಚಕ್ರವರ್ತಿ ತ್ರಿಭುವನ ಮಲ್ಲದೇವನಿಂದ ಅನುಮತಿ ಪಡೆದು ೨೦೨ ಬ್ರಾಹ್ಮಣೋತ್ತಮರಿಗೆ ದಾನ ಮಾಡಿದ್ದಾನೆ.

ಹೀಗೆ ಗ್ರಾಮದಾನದ ಕೆಲವು ವಿಶೇಷ ಅಂಶಗಳನ್ನು ತಿಳಿಯಬಹುದು. ರಾಜರು ಮತ್ತು ಮಂಡಳೇಶ್ವರರು ವಿವಿಧ ಉದ್ದೇಶಗಳಿಗಾಗಿ ನೀಡಿದ ಗ್ರಾಮದಾನಗಳು ಈ ಕೆಳಗಿನಂತಿವೆ.

ಇಮ್ಮಡಿ ತೈಲಪನು ತನ್ನ ಆಳ್ವಿಕೆಯ ಪ್ರಥಮ ವರ್ಷದಲ್ಲಿ ಬ್ರಹ್ಮಾಂಡಕೃತು ಯಜ್ಞ ಮಾಡಿದ ಸಂದರ್ಭದಲ್ಲಿ ಯಜ್ಞವನ್ನು ಸಾಂಗವಾಗಿ ನೆರವೇರಿಸಿದ ಬ್ರಾಹ್ಮಣರಿಗೆ ಮೊದೆಯನೂರನ್ನು ದಾನವಾಗಿ ಕೊಟ್ಟಿದ್ದಾನೆ.[542] ಜಗದೇಕಮಲ್ಲ ಜಯಸಿಂಹನ ಕಾಲದಲ್ಲಿ ಆತನ ಅಕ್ಕ ಅಕ್ಕಾದೇವಿಯು ಕಿಸುಕಾಡು-೭೦ ನ್ನು ಆಳುತ್ತಿದ್ದಾಗ ತನ್ನ ಅಣ್ಣ ಐದನೆಯ ವಿಕ್ರಮಾದಿತ್ಯನಿಗೆ ಪರೋಕ್ಷ ವಿನಯವಾಗಿ ಪೆರೂರು ಆಗ್ರಹಾರವನ್ನು ಸರ್ವನಮಸ್ಯವಾಗಿ ತ್ರೈಪುರುಷ ಶಾಲೆಯ ೪೦೦ ವಿದ್ಯಾರ್ಥಿಗಳ ವಿದ್ಯಾದಾನಕ್ಕೆ ದತ್ತಿಬಿಟ್ಟಿದ್ದಾಳೆ.[543] ಬಂಕಾಪುರದ ಕಾದಂಬೇಶ್ವರ ದೇವಾಲಯಕ್ಕೆ ಮಹಾಮಂಡಳೇಶ್ವರ ಕದಂಬ ಹರಿಕೇಸರಿಯ ಪತ್ನಿ ಲಚ್ಚಲಬ್ಬೆ 'ಪಳ್ಳವುರ' ಎಂಬ ಗ್ರಾಮವನ್ನು ದಾನ ನೀಡುತ್ತಾಳೆ. ಅದರ ಜೊತೆಗೆ ಆ ಗ್ರಾಮದ ಸಿದ್ದಾಯ, ಕಿರುದೆರೆ, ಕಿರುಕುಳಾಯ ದ್ರಮ್ಮ, ಮನೆದಣ್ಣಾಯ ಮುಂತಾದ ತೆರಿಗೆಗಳನ್ನು ಮುಕ್ತಗೊಳಿಸುತ್ತಾಳೆ. ಇವಳ ಜೊತೆಗೆ ಸತ್ಯಾಶ್ರಯದೇವನು ತನಗೆ ಆ ಗ್ರಾಮದಿಂದ ಬರಬಹುದಾದ ಎಲ್ಲ ತರಿಗೆಗಳನ್ನು ದೇವರಿಗೆ ಬಿಟ್ಟುಕೊಡುತ್ತಾನೆ.[544] ಮಹಾಮಂಡಳೇಶ್ವರ ಬಚ್ಚಯ್ಯರಸನು ದಿಗ್ಗಾಂವದ ಸೋಮೇಶ್ವರ ದೇವರಿಗೆ 'ಇಟ್ಟಿಗೆ' ಊರನ್ನು ಸುಂಕ ಸಮೇತವಾಗಿ ದಾನ ನೀಡಿದ್ದಾನೆ.[545] ಚಕ್ರವರ್ತಿ ತ್ರೈಲೋಕ್ಯಮಲ್ಲದೇವನ ಪಿರಯರಸಿ ಮೈಳಲದೇವಿ ಮತ್ತು ಬಮ್ಮರಸ ಎಂಬುವವರು ಮಲ್ಲಿಕಾರ್ಜುನ ದೇವರ ಬಳಿಗೆ ದರ್ಶನಾರ್ಥವಾಗಿ

ಬಂದಾಗ, ಚಕ್ರವರ್ತಿಗೆ ಬಿನ್ನಹಗೈದದ್ದಕ್ಕಾಗಿ ತ್ರೈಲೋಕ್ಯಮಲ್ಲನು ಮಲ್ಲಿಕಾರ್ಜುನ ದೇವಾಲಯದಲ್ಲಿನ ತಪೋಧನರಿಗೆ, ವಿದ್ಯಾದಾನ ನಿಮಿತ್ಯವಾಗಿ ಕನ್ನೆನಾಡೊಳಗಿನ 'ಶಿವಪುರ' ಅದರ ಪಕ್ಕದಲ್ಲಿನ 'ಜಾವುಮಾರು' ಜಾವುಟೂರ ಬಳಿಯ 'ಕಲ್ಲೋಟು' ಹೀಗೆ ಮೂರು ಗ್ರಾಮಗಳನ್ನು ಅವುಗಳ ಸೀಮೆ ಸಮೇತವಾಗಿ ಧಾರಾಪೂರ್ವಕ ದಾನ ಮಾಡಿದ್ದಾನೆ.[546] ಇದೇ ತ್ರೈಲೋಕ್ಯಮಲ್ಲದೇವನು ಶ್ರೀಶೈಲ ಕೊಳ್ಳದ ಸ್ವಯಂಭು ಭೈರವೇಶ್ವರದೇವರಿಗೆ ಹಾಗೂ ಅಲ್ಲಿನ ಛತ್ರಕ್ಕೆ 'ದುದ್ದಿಯಾಲ' ಗ್ರಾಮವನ್ನು, ದುದ್ದಿಯಾಲ ಸಾರಂಗೇಶ್ವರ ದೇವರ ಹಾಗೂ ಅಲ್ಲಿನ ಛತ್ರಕ್ಕೆ 'ಸಿರಿಪುರ' ಗ್ರಾಮವನ್ನು, ಸಿರಿಪುರದ ಇಂದ್ರೇಶ್ವರದೇವರ ಸೇವೆಗೆ ಹಾಗೂ ಅಲ್ಲಿನ ಛತ್ರಕ್ಕೆ 'ಕುರುಕುನ್ದ' ಎಂಬ ಗ್ರಾಮವನ್ನು ದತ್ತಿಯಾಗಿ ನೀಡಿದ್ದಾನೆ.[547] ಚಾಳುಕ್ಯ ತ್ರೈಲೋಕ್ಯಮಲ್ಲನು ಬೋಧನದಲ್ಲಿ ಕೆಲವು ದಿನಗಳ ಪ್ರಯಾಣದಲ್ಲಿದ್ದಾಗ ಮಹಾಸಾಮಂತ ಉದಯಗಿರಿಯ ಅಲ್ಲಮ ಮಾಡಿಸಿದ ತೀರ್ಥಸ್ಥಾನದಲ್ಲಿ ತಮ್ಮ ತಂದೆ ಮಹಾಸಾಮಂತ ಬಿಜ್ಜರಸ, ತಾಯಿ ಮಲ್ಲಿಕಬ್ಬೆಯರಸಿಯರಿಗೆ ಧರ್ಮವಾಗಲಿ ಎಂದು ಬೀರಿಗೆ ೪೦ ರ ಬಳಿಯ ಲೆಂಬವಾಡವನ್ನು ಮನ್ನೆಯದ ತೆರಿಗೆಗಳಿಂದ ಮುಕ್ತಗೊಳಿಸಿ, ಪ್ರಭು ಚಾವುಂಡಯ್ಯನ ಕಾಲನ್ನು ತೊಳೆದು ಶಾಶ್ವತವಾಗಿ ಅಗ್ರಹಾರವನ್ನಾಗಿ ಪರಿವರ್ತಿಸಿ ದಾನ ಮಾಡುತ್ತಾನೆ.[548] ಮಾಂಡಳಿಕ ಪಟ್ಟಿಯರಸ ಹಾಗೂ ಮಲ್ಲಪ್ಪರಸರು ಪೂಲಿಕೆರೆಯ ಮನ್ನೆಯನ್ನು ಹೂವಿನ ಹಡಗಲಿಯ ಕಲಿದವೇರಿಗೆ ಬಿಟ್ಟುಕೊಟ್ಟರು. ಸ್ಥಳದ ಸ್ಥಾನಿಕ ಸಾಂತರಾಸಿ ಪಂಡಿತ, ಮಲ್ಲಪ್ಪರಸ ಮತ್ತು ಸ್ಥಳದ ಮಹಾಜನರು ಇದರ ಮೇಲ್ವಿಚಾರಣೆಗೆ ನೇಮಕಗೊಳ್ಳುತ್ತಾರೆ.[549] ತ್ರೈಲೋಕ್ಯಮಲ್ಲದೇವನು ದಕ್ಷಿಣ ದಿಗ್ಭಾಗದ ದಿಗ್ವಿಜಯಾರ್ಥವಾಗಿ ಅರಸಿಯಕೆರೆಯ ಬೀಡಿನಲ್ಲಿದ್ದಾಗ, ಸಾಮಂತ ಬಿಜ್ಜಲದೇವನೆಂಬುವನು ರಾಜನ ಅನುಮತಿ ಪಡೆದು ಮುತ್ತಿಗೆ – ೨೦೦ರ ಕಂಪಣದಲ್ಲಿದ 'ಕಡಕೋಳ' ಎಂಬ ಗ್ರಾಮವನ್ನು ನೊಳಂಬೇಶ್ವರದೇವರಿಗೆ ದಾನಸನ್ಮಾನಾದಿಗಳಿಂದ, ಸರ್ವಬಾಧಾ ಪರಿಹಾರವಾಗಿ ದಾನ ನೀಡಿದ್ದಾನೆ.[550] ಸಾಮಂತ ಕದಂಬವಂಶದ ನಾಗವರ್ಮರಸನು ಕರಡಿಕಲ್ಲೂನೂರರ ಬಳಿಯ ಕೃಷ್ಣಾನದಿ ತೀರದ ಪ್ರಸಿದ್ಧ ತೀರ್ಥವಾದ ಜಡೆಯ ಶಂಕರದೇವರಿಗೆ 'ನವಿಲೆ' ಗ್ರಾಮದ ಜಡೆಯ ಶಂಕರದೇವ ತಪೋಧನರ ಕಾಲನ್ನು ತೊಳೆದು ಸರ್ವನಮಸ್ಯವಾಗಿ ದಾನ ನೀಡಿದ್ದಾನೆ.[551]

ಚಾಳುಕ್ಯರಾಜ ತ್ರೈಲೋಕ್ಯಮಲ್ಲನ ಆಳ್ವಿಕೆಯಲ್ಲಿ ಮಹಾಮಂಡೇಳೇಶ್ವರನಾದ ವಿಜಯಾದಿತ್ಯದೇವನ ದಂಡನಾಯಕ ಪೆರ್ಗ್ಗಡೆ ದೇವಪ್ಪಯ್ಯ ಮತ್ತು ಇತರರು ಅರಹಟದ ಸ್ವಯಂಭೂ ಕಲಿದೇವದೇವರ ಸೇವೆಗಾಗಿ ಮಾಳ್ತಗೆ – ೨೦ ರಲ್ಲಿನ 'ನಿಲ್ಲಜಿಗೆ' ಗ್ರಾಮವನ್ನು ದಾನ ನೀಡಿದ್ದಾನೆ.[552] ತರ್ದವಾಡಿ ೧೦೦೦ವನ್ನು ಆಳುತ್ತಿದ್ದ ಮಹಾಮಂಡಳೇಶ್ವರ ಪಲ್ಲವ ಪೆರ್ಮಾಡಿ ಜಯಸಿಂಹದೇವನು ಎಳೆಮೇಲ ಉತ್ತರೇಶ್ವರ ದೇವರ ಮಠದಲ್ಲಿ ಓದುವ, ಕೇಳುವ ತಪೋಧನರಿಗೆ, ಛತ್ರ, ಶಯನ, ಪತ್ಯೌಷರ್ಥವಾಗಿ ವಿದ್ಯಾಸತ್ರಕ್ಕೆ ೩೬ ಬಾಡದ ಸಾಮಂತ ಬಲ್ಲವರಸನಿಂದ ಪಡೆದು 'ಮಾರಸಿಂಗನಹಳ್ಳಿ'ಯನ್ನು ದಾನ ಮಾಡಿದ್ದಾನೆ.[553] ಮಾಹಮಂಡಳೇಶ್ವರ ಗೊಗ್ಗರನು ಸಂಗವಳ್ಳಿಯ ಮುನೀಶ್ವರ ದೇವರಿಗೆ ಸಗರ ೨೦೦ರ ಬಳಿಯ 'ಗೋಬಾಳ' ಗ್ರಾಮವನ್ನು

ನಿಧಿ ನಿಧಾನ ನಿಕ್ಷೇಪಸಹಿತವಾಗಿ ದಾನ ಮಾಡಿದ್ದಾನೆ.[554] ಕ್ರಿ. ಶ. ೧೦೭೪ ರಲ್ಲಿ ಮಹಾಂಡೆಳೇಶ್ವರ ತ್ರೈಳೋಕ್ಯಮಲ್ಲ ಪೆರ್ಮಾಡಿ ಜಯಸಿಂಗದೇವನು ತನ್ನ ದಂಡನಾಯಕ ಚಾವುಂಡಯ್ಯನಿಗೆ ಕಲ್ಕುಂಟೆ ಎಂಬ ಗ್ರಾಮವನ್ನು ದತ್ತಿಯಾಗಿ ನೀಡಿದ್ದಾನೆ.[555] ಕಲ್ಗುಂಟೆ ಗ್ರಾಮವನ್ನು ದತ್ತಿಯಾಗಿ ಪಡೆದ ದಂಡನಾಯಕ ಚಾವುಂಡಯ್ಯನು ಅದನ್ನು ತಾನು ಮಾಡಿಸಿದ ವಿಷ್ಣುಗೃಹಕ್ಕೆ , ರಾಮೇಶ್ವರ ದೇವರಿಗೆ, ಭಗವತಿ ದೇವಿಯರ ಸೇವೆಗೆ ದತ್ತಿ ಹಾಕಿಕೊಡುತ್ತಾನೆ.[556] ತ್ರಿಭುವನಮಲ್ಲದೇವನ ಆಳ್ವಿಕೆಯಲ್ಲಿ ಬಲ್ಲವರಸನ ಬಿನ್ನಹದಂತೆ ಕುಮಾರ ಸೋಮೇಶ್ವರದೇವ ೨ನೇ ಸೋಮೇಶ್ವರನು ಅರಿಕೇಶ್ವರ ದೇವರ ಸೇವೆಗೆ ಹಾಗೂ ದೇವರ ಪೂಜೆ ಮಾಡುವ ಪೂಜಾರಿಗೆ ಸಬ್ಬಿ-೧೦೦೦ದ ವೇಣಿಸಾಲೆ-೭೦ ರಲ್ಲಿಯ 'ವೆರದವೆಡಂದಿ' ಎಂಬ ಗ್ರಾಮವನ್ನು ಮತ್ತು ಒಂದು ಹೂವಿನ ತೋಟವನ್ನು ದತ್ತಿಯಾಗಿ ನೀಡಿದ್ದಾನೆ.[557] ತ್ರಿಭುವನಮಲ್ಲದೇವನ ಅಂಕಕಾರನಾದ ಮಲ್ಲರಾಜನು ಅಲಂಪುರದ ಬ್ರಹ್ಮೇಶ್ವರ ದೇವರ ಸೇವೆಗೆ ಪರಮೇಶ್ವರದತ್ತಿಯಾಗಿ ಅಂಗನವಾಡಿ ಎಂಬ ಗ್ರಾಮವನ್ನು ನೀಡಿದ್ದಾನೆ.[558] ಹೂವಿನ ಹಡಗಲಿಯ ಕೆಲವು ಬ್ರಾಹ್ಮಣರು ಚಕ್ರವರ್ತಿ ತ್ರಿಭುವನಮಲ್ಲದೇವನನ್ನು ಹರಸಿದಾಗ ಅವನು ಬ್ರಾಹ್ಮಣರಿಗೆ ಮತ್ತು ಕಲಿದೇವಸ್ವಾಮಿಗೆ ಕೊಟ್ಟಿಗನೂರು ಎಂಬ ಗ್ರಾಮವನ್ನು ಬಿಟ್ಟುಕೊಡುತ್ತಾನೆ.[559] ತ್ರಿಭುವನ ಮಲ್ಲದೇವರು ಘಟ್ಟದ ಬೋರಿವಳದ ಬೀಡಿನಲ್ಲಿದ್ದಾಗ ಹಲವು ಯಜ್ಞಗಳನ್ನು ಮಾಡಿಸುತ್ತಾನೆ. ಅನೇಕ ಯಜ್ಞಗಳನ್ನು ವಿಶಿಷ್ಟವಾಗಿ ಮಾಡಸಿದ ರುದ್ರಮಿಶ್ರರು ರುದ್ರೇಶ್ವರ ದೇವರಿಗೆ ದಕ್ಷಿಣೆಯ ರೂಪದಲ್ಲಿ ಮೇಲ ಅಟ್ಟಳೆಯ ಕಂಪಣದ ಭಲ್ಲುಂಕೆ ೮೪ ರ ಬಳಿಯ ಹುಲಿಜೆರು ಗ್ರಾಮವನ್ನು ದಾನ ಮಾಡುತ್ತಾನೆ.[560]

ಮಹಾಮಂಡಳೇಶ್ವರ ಮಲ್ಲಮಹಾರಾಜನು ಅಲಂಪುರದ ಬ್ರಹ್ಮೇಶ್ವರ ದೇವರಂಗಭೋಗ, ಜೀರ್ಣೋದ್ಧಾರ, ಕರ್ಮಾದ್ಯುಪಭೋಗ, ಪಂಚಾಚಾರ ಪೂಜೆಗೆ ಮೊನೆಯೂರು ಹಾಗೂ ಆಲಂಪೂರ ಎಂಬ ಎರಡು ಗ್ರಾಮಗಳನ್ನು ಪರಮೇಶ್ವರದತ್ತಿಯಾಗಿ ನೀಡಿದ್ದಾನೆ.[561] ಅಂದಿನ ಕಾಲದಲ್ಲಿ ಆಂಧ್ರಪ್ರದೇಶದಲ್ಲಿನ ಆಲಂಪುರ ಬ್ರಹ್ಮೇರ ದೇವಾಲಯ ಬಹಳ ಪ್ರಸಿದ್ಧವಾಗಿತ್ತು. ಇದಕ್ಕೆ ಅನೇಕ ಗ್ರಾಮಗಳನ್ನು ದಾನ ನೀಡಿದ ನಿದರ್ಶಗಳು ಇವೆ. ಈಗಾಗಲೇ ಕೆಲವನ್ನು ಮೇಲೆ ಹೇಳಲಾಗಿದೆ. ಅದೇ ರೀತಿ ತ್ರಿಭುವಮಲ್ಲದೇವನ ಮಹಾಮಂಡಲೇಶ್ವರನೊಬ್ಬನು ಬ್ರಹ್ಮೇಶ್ವರ ದೇವರ ಸೇವೆಗೆ ಗ್ರಾಮವೊಂದನ್ನು ನೀಡಿದ್ದಾನೆ.[562] ತ್ರಿಭುವನಮಲ್ಲದೇವನ ರಾಣಿ ಅಭಿನವ ಸರಸ್ವತಿಯು ತುಂಗಭದ್ರಾನದಿಯ ದಡದಲ್ಲಿರುವ ಕನ್ನೆ ೨೦೦ರ 'ಬೆಲ್ಲೆರೆ' ಅದೇ ದೇವಾಲಯಕ್ಕೆ 'ದಾಮಗಟ್ಟಳೆ'[564] ಎಂಬ ಗ್ರಾಮಗಳನ್ನು ಪರಮೇಶ್ವರ ದತ್ತಿಯಾಗಿ ದಾನ ನೀಡಿದ್ದಾಳೆ. ಜಯಂತಿಪುರದಿಂದ ತ್ರಿಭುವನ ಮಲ್ಲ ಆಳುತ್ತಿದ್ದಾಗ ಕುಮಾರ ತೈಲಪದೇವ ಅವನ ರಾಣಿ ಲಕ್ಷ್ಮಾದೇವಿ, ಮಕ್ಕಳಾದ ಪೆರ್ಮಾಡಿದೇವ, ಚಿಕ್ಕದೇವ ಮೊದಲಾದವರು, ನೊಳಂಬಾಂಡಿಯ ರಾಮೇಶ್ವರ ದೇವಾಲಯಕ್ಕೆ ಭೇಟಿ ನೀಡಿದಾಗ ದೇವಾಲಯದ ಬ್ರಾಹ್ಮಣ ತಪೋಧನ ಮತ್ತು ಸೇವಕರ ಆಹಾರಕ್ಕೆಂದು ಕಂದೂರು ೭೦೦ ರ ಬಳಿಯ ಗ್ರಾಮ ಬಾದುಪೂರ ವನ್ನು ದತ್ತಿಯಾಗಿ ನೀಡಿದ್ದಾರೆ.[564] ಕೊಳ್ಳಿಪಾಕೆ-೭೦೦೦ ದ ಅಧಿಕಾರಿಯಾಗಿದ್ದ ಯುವರಾಜ ಸೋಮೇಶ್ವರದೇವನು ದಂಡನಾಯಕ ಸಾವಿಪಯ್ಯನ

ಬಿನ್ನಹದಂತೆ ಗುಮಡೂರಿನ ಮಲ್ಲೇಶ್ವರದೇವರ ಸೇವೆಗೆ ಮೇಲ್ಪುಗೊಂಡ – ೨೪ ರ ಬಳಿಯ 'ಉಮ್ಮರಿಗೆ' ಎಂಬ ಗ್ರಾಮವನ್ನು ದತ್ತಿ ಕೊಟ್ಟಿದ್ದಾನೆ.[565] ಮೂರನೆಯ ಸೋಮೇಶ್ವರನು ಚಕ್ರವರ್ತಿಯಾಗಿದ್ದಾಗ ಕಪ್ಲೇವಾಡ ಸ್ವಯಂಭು ಸೋಮನಾಥ ದೇವಾಲಯಕ್ಕೆ ಆಲಂದೆ ಸಾಸಿರದ ಕಂಪಣ ಬಾಗವಾಡಿ –೨೦ ರ ಬಳಿಯ 'ಹಿಂಚಗೇರಿ' ಗ್ರಾಮವನ್ನು ಬಿಟ್ಟು ಕೊಟ್ಟಿದ್ದಾನೆ.[566] ಚಕ್ರವರ್ತಿ ಇಮ್ಮಡಿ ಜಗದೇಕಮಲ್ಲನು ಮುತ್ತಗಿಯ ಶಿವಲಿಂಗ ದೇವರಿಗೆ ಹೆಬ್ಬಾಳ – ೧೨ ರೊಳಗಿನ 'ನಾಗವಾಡ'ವನ್ನು ಬಿಟ್ಟಿದ್ದಾನೆ.[567] ನಾಲ್ಕನೇ ವೀರಸೋಮೇಶ್ವರನು ಕಡ್ಲೇವಾಡದ ಸ್ವಯಂಭು ಸೋಮನಾಥದೇವರ ಅಂಗಭೋಗ, ರಂಗಭೋಗ, ಖಂಡಸ್ಫುಟಿತ ಜೀರ್ಣೋದ್ಧಾರ, ತಪೋಧನರ ಅಶನಾಚ್ಛಾದನಕ್ಕೆ, ತಪೋಧನರ ಚಂದನಲೇಪನಕ್ಕೆಂದು ತರ್ದವಾಡಿ ಸಾಸಿರದ ಕಂಪಣ ಕುಮ್ಮಸಿ–೨೦ರ ಬಾಡ 'ನಾವದಿಗೆ' ಗ್ರಾಮವನ್ನು, ಅದರ ಮೇಲಾಳ್ಕೆಯನ್ನು ಬಿಟ್ಟುಕೊಟ್ಟಿದ್ದಾನೆ.[568]

ರಾಜರು, ಮಹಾಮಂಡಳೇಶ್ವರರು, ಸಾಮಂತರು ಹೀಗೆ ಹಲವರು ಗ್ರಾಮದಾನ ಮಾಡಿರುವುದನ್ನು ಕಾಣಬಹುದು. ಇಂಥ ಇನ್ನೂ ಅನೇಕ ಗ್ರಾಮದಾನದ ನಿದರ್ಶನಗಳು ಸಿಗುತ್ತವೆ. ಗ್ರಾಮದಾನ ಪರಿಕಲ್ಪನೆಯೇ ಕಲ್ಯಾಣ ಚಾಲುಕ್ಯ ಅರಸರ ಔದಾರ್ಯತೆಗೆ ಸಾಕ್ಷಿಯಾಗಿದೆ.

### ೪.೬.೪ ಸುಂಕ ಅಥವಾ ತೆರಿಗೆದಾನ

ರಾಜನು ದೇಶವನ್ನು ರಕ್ಷಿಸುವುದಕ್ಕೆ ಪ್ರತಿಯಾಗಿ ಪ್ರಜೆಗಳು ಕೊಡುವ ಪ್ರತಿಫಲವೇ ತೆರಿಗೆ ಅಥವಾ ಸುಂಕ. ಇದು ರಾಜನಿಗೂ ಮತ್ತು ಪ್ರಜೆಗಳಿಗೂ ಮಧ್ಯ ಒಂದು ಒಪ್ಪಂದವಿದ್ದಂತೆ. ಪ್ರಜೆಗಳನ್ನು ಆಂತರಿಕ ಹಾಗೂ ಬಾಹ್ಯ ಶಕ್ತಿಗಳಿಂದ ರಕ್ಷಿಸಲು ರಾಜನಿಗೆ ಸಾಕಷ್ಟು ಅನುಕೂಲಗಳು, ವ್ಯವಸ್ಥೆಗಳು ಬೇಕು. ಸೈನ್ಯ, ಶಸ್ತ್ರಾಸ್ತ್ರ, ಆಡಳಿತ ಕೇಂದ್ರಗಳು ಹೀಗೆ ಇಂಥ ವ್ಯವಸ್ಥೆಗಳನ್ನು ಹೊಂದಲು ರಾಜನಿಗೆ ಸಾಕಷ್ಟು ಸಂಪತ್ತಿನ ಅವಶ್ಯಕತೆಯಿರುತ್ತದೆ. ಈ ಸಂಪತ್ತು ತೆರಿಗೆಗಳ ಮೂಲಕ ರಾಜನಲ್ಲಿ ಸೇರುತ್ತಿತ್ತು. ತೆರಿಗೆಗಳನ್ನು ಹೊರತುಪಡಿಸಿ ರಾಜನಿಗೆ ಇತರ ಆದಾಯಗಳಿದ್ದರೂ ಅವು ತೆರಿಗೆಗಳಿಗಿಂತ ಕಡಿಮೆಯೇ. ನಾಗರಿಕತೆ ಹುಟ್ಟಿಕೊಂಡಾಗಿನಿಂದಲೂ ತೆರಿಗೆ ಪದ್ಧತಿ ಅಸ್ತಿತ್ವಕ್ಕೆ ಬಂದಿದೆ. ವ್ಯಕ್ತಿಯ ಉತ್ಪಾದನೆ, ಸಂಪತ್ತು, ಯೋಗ್ಯತೆಗಳಿಗೆ ಅನುಗುಣವಾಗಿ ತೆರಿಗೆಗಳನ್ನು ಆಕರಿಸುವುದು ಹಿಂದಿನಿಂದ ಬಂದ ಕ್ರಮ. ಇದು ಕಲ್ಯಾಣ ಚಾಲುಕ್ಯರ ಕಾಲದಲ್ಲೂ ವ್ಯವಸ್ಥಿತವಾಗಿತ್ತು. ಸಾಮ್ರಾಜ್ಯದಲ್ಲಿ ಭೂಕಂದಾಯ, ಸಾರಿಗೆ, ವಸ್ತುಗಳ ಮಾರಾಟ, ಖರೀದಿ, ವೃತ್ತಿ, ಸಂಘ ಮತ್ತು ಸಾಮಾಜಿಕ ಸಂಸ್ಥೆಗಳ ಮೇಲೆ ತೆರಿಗೆ ಹಾಕಲಾಗುತ್ತಿತ್ತು. ಈ ಕೆಳಗೆ ಹೆಸರಿಸಿದ ಅನೇಕ ರೀತಿಯ ಸುಂಕಗಳನ್ನು ಚಾಲುಕ್ಯ ಸಾಮ್ರಾಟನಿಗೆ ಸಂದಾಯ ಮಾಡಲಾಗುತ್ತಿತ್ತು. ಅವುಗಳ ಸಂಕ್ಷಿಪ್ತ ಅರ್ಥ ತಿಳಿಯುವುದು ಇಲ್ಲಿ ಉಚಿತವೆನಿಸುತ್ತದೆ.

**ಭೂಮಿಯ ಮೇಲಿನ ಸುಂಕಗಳು**

| | | |
|---|---|---|
| ಸಿದ್ದಾಯ | – | ನಿಯಮಿತವಾಗಿ ಕೊಡಬೇಕಾದ ಹಣ ಅಥವಾ ಧಾನ್ಯ ರೂಪದ ಸುಂಕ |
| ದಸವಂದ | – | ಹತ್ತರಲ್ಲಿ ಒಂದು ಭಾಗ /ನೂರಕ್ಕೆ ಹತ್ತರ ದರದಂತೆ ಕೊಡುವ ತೆರಿಗೆ |
| ದಿವಸಾಯದ ಸುಂಕ | – | ಧಾನ್ಯಗಳ ವ್ಯಾಪಾರದಿಂದ ಬರುವ ಆದಾಯ ಅಥವಾ ಧಾನ್ಯರೂಪದ ಕರ. |
| ಭತ್ತಾದಾಯ | – | ಭತ್ತದ ರೂಪದಲ್ಲಿ ಕೊಡುವ ತೆರಿಗೆ |
| ನೀರುಣಿ ಸುಂಕ | – | ನೀರಾವರಿ ತೆರಿಗೆ |
| ಮೇಲಿವನ | – | ಹೆಚ್ಚಿನ ತೆರಿಗೆ / ಅವಶ್ಯಕತೆ ಇದ್ದಾಗ ಹೇರುತ್ತಿದ್ದ ಹೆಚ್ಚಿನ ತೆರಿಗೆ |
| ತಿಪ್ಪೆಸುಂಕ | – | ತಿಪ್ಪೆ ಅಥವಾ ಗೊಬ್ಬರದ ಗುಣಿಗಳ ಮೇಲಿನ ಸುಂಕ |

**ವಾಣಿಜ್ಯ ತೆರಿಗೆಗಳು**

| | | |
|---|---|---|
| ಪೆರ್ಜುಂಕ | – | ಹಿರಿಯ ಸುಂಕ, ಯಾವುದೊಂದು ಊರಿನ ಅಥವಾ ಪ್ರದೇಶದ ಒಟ್ಟು ಸುಂಕ |
| ಕಿರುದೆರೆ | – | ಸಣ್ಣ ಸುಂಕ, ಚಿಲ್ಲರೆ ತೆರಿಗೆ |
| ಸಂತೆವಣ | – | ಸಂತೆಯಲ್ಲಿ ಸಂಗ್ರಹಿಸುವ ಸುಂಕ |
| ಮನೆವಣ | – | ಮನೆಯ ಸುಂಕ, ಮನೆಗೆ ಹಾಕುತ್ತಿದ್ದ ತೆರಿಗೆ |
| ಹೊಸ್ತಿಲವಣ | – | ಮನೆ ಪಟ್ಟಿ, ಬಾಗಿಲ ಹಣ |
| ಹಂದರಹಣ | – | ಮದುವೆ ಮುಂತಾದ ಸಮಾರಂಭಗಳಲ್ಲಿ ಹಂದರ ಹಾಕಿದಾಗ ಕೊಡಬೇಕಾದ ಹಣ |
| ಸೊಳೆವಾಳ ಪಣ/ಸೂಳೆದೆರೆ | – | ದೇವಾಲಯಗಳ ನೃತ್ಯಗಾತಿಯ ಮೇಲಿನ ಕರ |
| ಕನ್ನಡಿ ವಣ | – | ನೃತ್ಯಗಾತಿಯರ ಮೇಲಿನ ಸುಂಕ |
| ಮದುವೆ ಸುಂಕ/ಮದುವೆ ತೆರೆ | – | ಮದುವೆಗಳ ಮೇಲಿನ ತೆರಿಗೆ |
| ಅಂಗಡಿದೆರೆ | – | ಅಂಗಡಿಗಳ ಮೇಲಿನ ಕರ |
| ಬಿಳ್ಕೊಡೆ | – | ಮಾರಾಟದ ಸರಕುಗಳ ಮೇಲಿನ ತೆರಿಗೆ |
| ಹೊರವಾರು | – | ಹೊರಗೆ ಹೋಗುವ ಮಾರಾಟದ ವಸ್ತುಗಳ ಮೇಲಿನ ಸುಂಕ |

| | | |
|---|---|---|
| ದಂಡಾಯ | – | ದಂಡದಿಂದ ಬರುವ ಉತ್ಪನ್ನ |
| ದೊಂಬದೆರೆ | – | ದೊಂಬ (ಡೊಂಬ)ರ ಮೇಲಿನ ತೆರಿಗೆ |
| ಗಾಣದೆರೆ | – | ಗಾಣಗಳ ಮೇಲಿನ ತೆರಿಗೆ |
| ನಾವಿದ ವಾರ | – | ಕ್ಷೌರಿಕರ ಮೇಲಿನ ತೆರಿಗೆ |

ಹೀಗೆ ಅನೇಕ ತೆರಿಗೆಯ ಅಥವಾ ಸುಂಕಗಳಿಂದ ಕಲ್ಯಾಣ ಚಾಲುಕ್ಯ ಸಾಮ್ರಾಜ್ಯಕ್ಕೆ ಆದಾಯ ಸಂದಾಯವಾಗುತ್ತಿತ್ತು. ಹೀಗೆ ಸಂಗ್ರಹವಾಗುವ ತೆರಿಗೆಗಳನ್ನು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ದತ್ತಿ ಬಿಡಲಾಗಿದೆ. ದೇವಾಲಯಗಳಿಗೆ, ದೇವಾಲಯದ ಸೇವಾವರ್ಗದವರಿಗೆ, ಸೇವೆಗಳ ವ್ಯವಸ್ಥೆಗೆ ತೆರಿಗೆಗಳನ್ನು ದಾನ ಮಾಡಲಾಗಿದೆ. ತೆರಿಗೆ ದಾನದಲ್ಲಿ ಕೆಲವು ವಿಶೇಷವಾದ ಅಂಶಗಳಿದ್ದವು. ಅವುಗಳನ್ನು ಈ ಕೆಳಗಿನಂತೆ ನೋಡಬಹುದು.

**ಸುಂಕದಾನದ ವಿಶೇಷತೆಗಳು**

ಸುಂಕದಾನಗಳನ್ನು ದೇವಾಲಯಗಳಿಗೆ ಸೇವಾವರ್ಗದವರಿಗೆ, ದೇವರ ಸೇವೆಗೆ, ಮಹಾಜನರಿಗೆ ಅಧಿಕಾರಿಗಳಿಗೆ ಹೀಗೆ ಅನೇಕರಿಗೆ ಸಂಬಳದ ರೂಪದಲ್ಲಿ ನೀಡಲಾಗಿದೆ.

1 ಸುಂಕದಾನಗಳನ್ನು ಚಕ್ರವರ್ತಿ, ಮಾಂಡಳಿಕರು, ಸಾಮಂತರು, ಅಧಿಕಾರಿಗಳು ಮುಂತಾದ ಪ್ರಭುವರ್ಗದವರು ಮಾತ್ರವೇ ನೀಡಿದ್ದಾರೆ. ಸಾಮಾನ್ಯ ಜನರು ಈ ದಾನವನ್ನು ನೀಡಲು ಸಾಧ್ಯವಿಲ್ಲ. ಏಕೆಂದರೆ ತೆರಿಗೆ ಸಂಗ್ರಹಿಸುವ ಅಧಿಕಾರ ಪ್ರಭುಗಳಿಗೆ ಮಾತ್ರ.

1 ಸುಂಕದಾನದಲ್ಲಿ ಮೂರು ವಿಧಾನಗಳನ್ನು ಕಾಣುತ್ತೇವೆ.

೧) ಸರ್ಕಾರಕ್ಕೆ ಕಟ್ಟಬೇಕಾಗಿದ್ದ ಸುಂಕವನ್ನು ಸುಂಕ ಕಟ್ಟುತ್ತಿದ್ದವರಿಗೆ ದಾನ ಬಿಡುವುದು.

೨) ಸರ್ಕಾರಕ್ಕೆ ಸಂಗ್ರಹವಾಗುತ್ತಿದ್ದ ಸುಂಕವನ್ನು ಬೇರೆಯವರಿಗೆ (ದೇವಾಲಯ, ವ್ಯಕ್ತಿ, ಸಂಘಗಳಿಗೆ) ನೀಡುವುದು.

೩) ಸಂಬಳದ ರೂಪದಲ್ಲಿ ತಮಗೆ ಬರಬೇಕಾಗಿದ್ದ ಸುಂಕದ ಒಂದು ಭಾಗವನ್ನು ಅಧಿಕಾರಿಗಳು ನೀಡುತ್ತಿದ್ದುದು.

ಸುಂಕದಾನವನ್ನು ಮಾಡುತ್ತಿದ್ದಾಗ ಯಾವ ಯಾವ ರೀತಿಯಲ್ಲಿ ಭೂಮಿ, ವಸ್ತುಗಳ ಮೇಲೆ ಎಷ್ಟೆಷ್ಟು ಪ್ರಮಾಣದಲ್ಲಿ ಸುಂಕವನ್ನು ಸಂಗ್ರಹಿಸಿಕೊಳ್ಳಬೇಕೆಂಬುದನ್ನು ಸ್ಪಷ್ಟವಾಗಿ ತಿಳಿಸಲಾಗುತ್ತಿತ್ತು.

ಸುಂಕವು ಸಾಮಾನ್ಯವಾಗಿ ಹಣದ ರೂಪದಲ್ಲಿ ಸಂದಾಯವಾಗುತ್ತಿತ್ತು. ಇದರಿಂದ ಪರೋಕ್ಷವಾಗಿ ಹಣದಾನವನ್ನು ಮಾಡಿದಂತೆಯೂ ಆಗುತ್ತಿತ್ತು.

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನೀಡಿದ ಕೆಲವು ಸುಂಕದಾನಗಳ ನಿದರ್ಶನಗಳನ್ನು ಈ ಕೆಳಗೆ ಹೇಳಲಾಗಿದೆ.

ಕ್ರಿ. ಶ. ೯೯೧ರಲ್ಲಿ ಬಾಗಳಿ ಶಾಸನದ ಉಲ್ಲೇಖದಂತೆ ಸಾಸಿರ ತುಂಬಲಿಗರು 'ಬಾರಿಕ ಏಚ' ಎಂಬುವವನಿಗೆ ತಲೆಯ ಮೇಲೆ ಹೊತ್ತುಯ್ಯುವ ಹೊಲಸು ಸಾಮಾನುಗಳು ಮೇಲೆ ವಿಧಿಸುವ ಸುಂಕವನ್ನು ದಾನ ನೀಡಿದ್ದಾರೆ.[569] ಇರಿವ ಬೆಡಂಗ ಸತ್ಯಾಶ್ರಯನ ಕಾಲದಲ್ಲಿ ಕಾಡಿಪಾಳು – ೭೦ ರ ವಿಭಾಗದ ಮಾದಿಗಾವುಂಡನು ಮಗ ಪೃಥುವಯ್ಯ ಎಂಬುವನ ಬೇಡಿಕೆಯ ಮೇರೆಗೆ ಅಲ್ಲಿನ ಸಿದ್ದಾಯವನ್ನು ಮಹಾಜನರಿಗೆ ದತ್ತಿಯಾಗಿ ನೀಡಿದ್ದಾನೆ.[570] ಕುಕ್ಕನೂರಿನ ಗವರೇಶ್ವರ ದೇವರ ಪ್ರತಿಷ್ಠೆ ಕಾಲದಲ್ಲಿ ಕುಕ್ಕನೂರಿನ ಸಮಸ್ತ ಜನರು ಸೇರಿ ವಸುಂಬೆರೆದಂಡ, ದೋಷ ಮುಂತಾದ ಕೆಲವು ತೆರಿಗೆಗಳನ್ನು ದಾನವಾಗಿ ನೀಡಿದ್ದಾರೆ.[571] ಮಹಾಪ್ರಚಂಡ ದಂಡನಾಯಕ ಘಟೆಯಂಕಕಾರ ಬ್ರಹಾದಿತ್ಯ ರಾಜನು ಪಾಪೆಕಲ್ಲನ್ನು ಆಳುತ್ತಿದ್ದಾಗ, ಪಾಪೆಕಲ್ಲೂರೊಡೆಯರಿಗೆ ವ್ಯವಸಾಯದ ಮೇಲಿನ ಕೆಲವು ತೆರಿಗೆಗಳನ್ನು ದಾನ ಮಾಡಿದ್ದಾನೆ.[572] ಏಮ್ಮಸೆಟ್ಟಿಯ ತಮ್ಮ ಅತ್ಯಪಸೆಟ್ಟಿ ಎಂಬುವನಿಗೆ ಪಾಡಿಗಾರ ಅಗ್ರಹಾರದ ಪ್ರಭು ಮಾದಿರಾಜ ಮತ್ತು ಇತರರು ದಸವಂದವಾಗಿ ಸುಂಕವನ್ನು ದತ್ತಿ ನೀಡಿದ್ದಾನೆ.[573]

ಬಂಕಾಪುರದ ಕಾದಂಬರೇಶ್ವರ ದೇವಾಲಯಕ್ಕೆ ಮಹಾಮಂಡಳೇಶ್ವರ ಕದಂಬ ಹರಿಕೇಸರಿಯ ಪತ್ನಿ ಲಚ್ಚಲಬ್ಬೆ 'ಪಳ್ಳವುರ' ಎಂಬ ಗ್ರಾಮವನ್ನು ದಾನ ನೀಡುವುದರ ಜೊತೆಗೆ ಆ ಗ್ರಾಮದ ಸಿದ್ದಾಯ, ಕಿರುದೆರೆ, ಕಿರುಕುಳಾಯ ದ್ರಮ್ಮ ಮನೆವಣ್ಣಾಯ ಮುಂತಾದ ತೆರಿಗೆಗಳನ್ನು ಬಿಟ್ಟು ಕೊಟ್ಟಿದ್ದಾಳೆ.[574] ಅವಳ ಜೊತೆಗೆ ಸತ್ಯಾಶ್ರಯದೇವನು 'ಪಳ್ಳವುರ' ಗ್ರಾಮದಿಂದ ತನಗೆ ಬರಬೇಕಾಗಿದ್ದ ಎಲ್ಲ ತೆರಿಗೆಗಳನ್ನು ದೇವರಿಗೆ ಬಿಟ್ಟಿದ್ದಾನೆ. ಮಹಾಮಂಡಳೇಶ್ವರ ಕೀರ್ತಿದೇವರಸನು ಬಂಕಾಪುರದ ಇಂದ್ರೇಶ್ವರ ದೇವರ ನಂದಾದೇವಿಗೆಗೆ ತೋಟದ ಸುಂಕವನ್ನು ಬಿಟ್ಟುಕೊಟ್ಟಿದ್ದಾನೆ.[575] ಈ ಸುಂಕವನ್ನು ಸುಂಕವೆರ್ಗ್ಗಡೆ ಮಲ್ಲಿಯಣ ದಂಡನಾಯಕನ ಬಿನ್ನಹದ ಮೇಲೆ ಬಿಡಲಾಗಿದೆ. ಇರುಗಣ ಚೋಳ ಮಹಾರಾಜನ ಅಪ್ಪಣೆಯಂತೆ ಅವನ ಸುಂಕವೆರ್ಗ್ಗಡೆ ಲೋಕ ಮಾಣಿಕಸೆಟ್ಟಿ ಎಂಬುವನು ಆಲಂಪುರದ ಬ್ರಹ್ಮೇಶ್ವರ ದೇವರ ನಂದಾದೀವಿಗೆಗೆ ನಾಲ್ಕು ನಾಡ ಸುಂಕವನ್ನು ದತ್ತಿಯಾಗಿ ಬಿಟ್ಟಿದ್ದಾನೆ.[576] ಆರನೆಯ ವಿಕ್ರಮಾದಿತ್ಯನು ಕುಮಾರ ವೃತ್ತಿಯಿಂದ ಆಳುತ್ತಿರುವಾಗ ಅವನ ದಂಡನಾಯಕ ಮಾಚಿದೇವನು ಹೂವಿನ ಹಡಗಲಿಯ ದೇಮೇಶ್ವರ ದೇವರಂಗಭೋಗಕ್ಕೆ ಮೂರು ಲಕ್ಷದಡಕೆ ಮರಗಳ ವಡ್ಡರಾವುಳ ಸುಂಕವನ್ನು ದಾನ ಮಾಡಿದ್ದಾನೆ. ಅದೇ ಸಂದರ್ಭವಲ್ಲಿ ದಂಡನಾಯಕ ಘಟ್ಟಮಾನರ ಪೆರ್ಗಡೆ ಅತ್ತಮರಸನು ಮೂರುಲಕ್ಷ ಅಡಕೆಯ ಪೆರ್ಜ್ಜುಂಕವನ್ನು ಬಿಟ್ಟಿದ್ದಾನೆ. ಹಡಗಲಿಯ ನೂರಿಪ್ಪತ್ತು ಜನರು ಮೂರು ಲಕ್ಷ ಅಡಕೆ ಮರಗಳ ಆಯವನ್ನು, ಇರ್ವ್ವರೊಕ್ಕಲು ಮಾನ್ಯವನ್ನು ದಾನ ಮಾಡಿದ್ದಾರೆ.[577] ಐದುನೂರು ಬಳಂಜಗಳು ಮತ್ತು ನೂರ ಇಪ್ಪತ್ತು ಮಹಾಜನರು ರಾಜನಿಗೆ ಸಲ್ಲಿಸಬೇಕಾಗಿದ್ದ ಎಣ್ಣೆಗಾಣ ಮತ್ತು ಒಕ್ಕಲುದೆರೆ ಬಿಟ್ಟುಕೊಟ್ಟರು.[578] ಮಹಾಮಂಡಳೇಶ್ವರ ಕೋಟೆ ಭೀಮರಸನು ಕೊಳ್ಳಿಪಾಕೆಯ ಸ್ವಯಂಭು ಸೋಮೇಶ್ವರ ದೇವರು ಹಾಗೂ ನನ್ನಿನಾರಾಯಣ ವಿಷ್ಣುದೇವರಿಗೆ ಮಾಂಧಿನೇಪುರ – ೭೦ರ 'ಗಾಡಿಚೆರುವು' ಗ್ರಾಮದ ದೇವಭೋಗದಲ್ಲಿ ಎಲ್ಲ ಬಗೆಯ ಕಿರುದೆರೆಗಳನ್ನು ದತ್ತಿಯಾಗಿ

ನೀಡಿದ್ದಾನೆ.[579] ನೊಳಂಬವಾಡಿ-೩೨೦೦೦ ಪೆರ್ಜ್ಜುಂಕದ ಅಧಿಕಾರಿ ಮಹಾಮಂಡಳೇಶ್ವರ ಅಣುಕ ಪಲ್ಲವರಾಯನ ಅನುಮತಿಯಂತೆ ಕಾಳಿಮರಸ ಹಾಗೂ ಕೇಶಿರಾಜ ಎಲೆ ಹೇರಿನ ಮೇಲಿನ ಸುಂಕವನ್ನು ಹಿರಿಯಕೆರೆಯ ಜೀರ್ಣೋದ್ಧಾರಕ್ಕೆ ದಾನ ಮಾಡಿದ್ದಾನೆ.[580] ದಂಡನಾಯಕ ಬಿಮ್ಮರಸನು ಬಾಗಳಿಯ ಹಿರಿಯ ಕೆರೆಯ ಕೆಲಸಕ್ಕೆ ಪನ್ನಾಯದ ಸುಂಕದಲ್ಲಿ ಪ್ರತಿ ತಿಂಗಳಿಗೆ ಒಂದು ಗದ್ಯಾಣದಂತೆ ಹೊನ್ನನ್ನು ಬಾಗಳಿಯ ಮಹಾಜನರ ಕಾಲನ್ನು ತೊಳೆದು ದಾನಮಾಡಿದ್ದಾನೆ.[581]

ಪ್ರಚಂಡದಂಡನಾಯಕ ಭಾನಸವೆರ್ಗ್ಗಡೆ ಅನನ್ತಪಾಳನಿಗೆ ಭಿನ್ನವಿಸಿ ಮಹಾಪ್ರಧಾನ ದಂಡನಾಯಕ ಮಾಧವಭಟ್ಟನು ರಾಜಧಾನಿ ವಿಕ್ರಮಪುರದ ವಿಷ್ಣುಗೃಹದಲ್ಲಿನ ಸತ್ರಕ್ಕೆ ಕೊಪ್ಪಿದೆಲೆಯ ಹೇರಿಂಗೆ ತಮ್ಮ ಪನ್ನಾಯದ ಸುಂಕದೊಳಗೆ ವೀಸ ೧೦, ಹೊರಗೆ-ವೀಸ ೫, ಪಣವಿನೆಲೆಗೆ-ವೀಸ ೧ರಂತೆ ಸುಂಕಗಳನ್ನು ದಾನ ಮಾಡಿದ್ದಾನೆ.[582] ಮಹಾಮಂಡಳೇಶ್ವರ ಮಲ್ಲರಸನು ಆಲಂಪುರದ ಬ್ರಹ್ಮೇಶ್ವರ ದೇವರ ಸೇವೆಗಾಗಿ ತುಂಗಭದ್ರಾದಡದ ಕಂದನವೊಳಲು (ಕರ್ನೂಲು) ಗ್ರಾಮದಿಂದ ಸಲ್ಲಬೇಕಾದ ಎಲ್ಲ ಸುಂಕಗಳನ್ನು ಕೊಡುತ್ತಾನೆ.[563] ಅಗ್ರಹಾರ ಹಿರಿಯ ಗೊಬ್ಬೂರ ನಖರಗಳು, ಕಮ್ಮಟದ (ಟಂಕಶಾಲೆ) ಅಧಿಕಾರಿಗಳು, ಕಮ್ಮಟಕಾರರು, ಬ್ರಹ್ಮಜಿನಾಲಯಕ್ಕೆ ತಾವು ಮಾರಿದ ವಿವಿಧ ವಸ್ತುಗಳ ಮೇಲಿನ ತೆರಿಗೆಗಳನ್ನು ದತ್ತಿಬಿಡುತ್ತಾರೆ.[584] ಮಾಂಡಳಿಕ ಮುದ್ದರಸನು ನೊಳಂಬವಾಡಿ-೩೫೦೦೦ದ ತೆರಿಗೆ ಅಧಿಕಾರಿಯಾಗಿದ್ದಾಗ ಪೂವಿನ ಪಡಂಗಿಲಿಯ ೧೨೦ ಮಹಾಜನಗಳ ಮುಂದೆ ಕಲಿದೇವರ ಸ್ಥಾನಿಕ ಖಳೇಶ್ವರಪಂಡಿತರ ಕಾಲು ತೊಳೆದು ಸೋಮೇಶ್ವರ ದೇವರಿಗೆ ಪನ್ನಾಯದ ತೆರಿಗೆಯನ್ನು ದಾನ ಮಾಡುತ್ತಾನೆ.[585] ಮಹಾಪ್ರಧಾನ ಅಂತಃಪುರವೆರ್ಗಡೆ ಕಾಳಿಮಯ್ಯನು ಕೊಳ್ಳಿಪಾಕೆ-೭೦೦೦ದ ದಂಡನಾಯಕ ತಿಕ್ಕಪಯ್ಯನ ಬೇಡಿಕೆಯಂತೆ, ಸೋಮನಾಥ ಭಟ್ಟರ ಪ್ರಭುತ್ವದ ಅಗ್ರಹಾರವಾಗಿದ್ದ ಕಲ್ವಚೇರು - ೪೦ರ 'ತಾಂಡಿಪಾಮುಲಂಕ' ಗ್ರಾಮದ ತಳವೃತ್ತಿಯ ೧/೩ ಭಾಗದ ರಾಜಸುಂಕವನ್ನು ಅಲ್ಲಿನ ಸೋಮೇಶ್ವರ ದೇವರಿಗೆ ದತ್ತಿ ಬಿಡುತ್ತಾನೆ.[586] ಇಲ್ಲಿ ದಾಖಲಾದ ದತ್ತಿಯ ಭಾಗವಾಗಿದ್ದ ತಳವೃತ್ತಿಯನ್ನು ಹಿಂದೆ ಅದೇ ಅಗ್ರಹಾರದ ಚೇನಿಂಚೆ ಬಸದಿಗೆ ನೀಡಿತ್ತೆಂದೂ ಈ ಶಾಸನದಲ್ಲಿ ಹೇಳಿದೆ.

ದೇವಾಲಯಗಳಲ್ಲಿ ಪ್ರತಿನಿತ್ಯದ ಸೇವೆ, ವಿಶೇಷ ಪರ್ವ, ಉತ್ಸವಗಳು, ರಂಗಭೋಗ, ಅಂಗಭೋಗ, ಪಾತ್ರ, ಪಾದ ಮೂಲ ಪರಿವಾರ, ಪೂಜಾರಿವರ್ಗದವರ ಜೀವಿತ, ಮಠಗಳ, ಅನ್ನಸತ್ರಗಳ ಮತ್ತು ವಿದ್ಯಾಕೇಂದ್ರಗಳ ನಿರ್ವಹಣೆ, ತಪೋಧನರ, ಛಾತ್ರದ ಆಶನಾಚ್ಛಾದನ-ಇತ್ಯಾದಿಗಳಿಗೆ ಹೇರಳವಾದ ಸಂಪತ್ತಿನ ಅವಶ್ಯಕತೆಯಿತ್ತು. ದೇವಾಲಯಗಳ ಆರ್ಥಿಕ ಪರಿಸ್ಥಿತಿಯನ್ನು ಸಮರ್ಪಕವಾಗಿಡಲು ಎಲ್ಲಾ ರೀತಿಯ ಪ್ರಯತ್ನಗಳನ್ನು ಪ್ರಭುವರ್ಗದವರು ಮಾಡುತ್ತಿದ್ದರು. ಆದ್ದರಿಂದಲೇ ಸುಂಕಗಳನ್ನು ವಿಧಿಸುವ ಮತ್ತು ರದ್ದು ಮಾಡುವ ಅಧಿಕಾರವಿದ್ದ ಅಧಿಕಾರಿಗಳು ಸಾಮಾನ್ಯವಾಗಿ ದಾನ-ದತ್ತಿಗಳನ್ನು ನೀಡುವಾಗ ತಮ್ಮ ಅಧಿಕಾರದ ವ್ಯಾಪ್ತಿಯಲ್ಲಿದ್ದ ಸುಂಕ, ಸಿದ್ಧಾಯ, ಸೇಸೆ, ತೆರೆ ಇತ್ಯಾದಿಗಳನ್ನು ರದ್ದು ಮಾಡುತ್ತಿದ್ದರು; ಇಲ್ಲವೆ ಸಂಬಂಧಿತ ಸುಂಕ, ತೆರಿಗೆ ಇತ್ಯಾದಿಗಳನ್ನು ದೇವಾಲಯದ ನಿರ್ವಹಣೆಗಾಗಿಯೇ ವರ್ಗಾಯಿಸಿ ಆಜ್ಞೆ ಹೊರಡಿಸುತ್ತಿದ್ದರು.

ದಿನಸಿಗಳ ಮೇಲಿನ ಸುಂಕ, ಉದ್ಯಮಗಳ ಮೇಲಿನ ಸುಂಕ, ಅಧಿಕಾರಿಗಳ ಮೇಲಿನ ಸುಂಕ, ವೃತ್ತಿಗಳ ಮೇಲಿನ ಸುಂಕ, ಬೀರವಣ, ಕಿರುಕುಳ, ಸಿದ್ಧಾಯಗಳೇ ಅಲ್ಲದೆ ಕೊಟ್ಟಿಗೆದೆರೆ, ಜೆಡೆದೆರೆ, ಕುಮಾರಗಾಣಿಕೆ, ಕನ್ನಡಿವಣ, ಸೂಳೆದೆರೆ ಇತ್ಯಾದಿ ತೆರಿಗೆ, ಕಾಣಿಕೆಗಳೂ ದೇವಾಲಯದ ನಿರ್ವಹಣೆ, ವ್ಯಕ್ತಿಗಳ ಉಪಭೋಗಕ್ಕೆ ದಾನ-ದತ್ತಿಯ ರೂಪದಲ್ಲಿ ನೀಡಲ್ಪಡುತ್ತಿದ್ದವು. ವರ್ತಕ ವರ್ಗದವರು, ಬಣಂಜುಗಳು, ಎಕ್ಕಟಿಗರು, ಗವರೆಗಳು ಅಯ್ಯಾವೊಳೆ ಐನೂರ್ವರು, ಮುಂಮರಿದಂಡಗಳು ಮೊದಲಾದ ವೃತ್ತಿಪರ ಸಂಸ್ಥೆಗಳು ತಾವು ಕಟ್ಟಬೇಕಾಗಿದ್ದ ಅನೇಕ ಸುಂಕಗಳನ್ನು ದೇವಾಲಯಗಳಿಗೆ ಸಲ್ಲಿಸಿದ್ದಾರೆ. ಕ್ರಿ.ಶ. ೧೦೩೩ರ ಶಾಸನವೊಂದು[587] ವಿವಿಧ ವೃತ್ತಿ ಹಾಗೂ ವರ್ತಕ ಸಂಘದವರು ಪ್ರತಿವರ್ಷ ಕಟ್ಟಬೇಕಾಗಿದ್ದ ಸುಂಕಗಳನ್ನು ವಿವರವಾಗಿ ರಾಜೂರಿನ ಜೋಗೇಶ್ವರ/ಗವರೇಶ್ವರ ದೇವರಿಗೆ ಅದನ್ನು ದಾನ ಮಾಡಿದ್ದು, ಯಾರು ಯಾರು ಎಷ್ಟೆಷ್ಟು ಪ್ರಮಾಣದಲ್ಲಿ ತೆರಿಗೆ ಸಲ್ಲಿಸಬೇಕೆಂಬುದನ್ನು ಸಾಧ್ಯಂತವಾಗಿ ಹೇಳಿದೆ. ಅದರ ವಿವರ ಹೀಗಿದೆ -

ಶ್ರೀನಗರಗಳು (ನಖರರು) ಗಡಿಗಳಲ್ಲಿ ವರ್ಷಕ್ಕೆ ಪ್ರತ್ಯೇಕ - ೧೦ ವೀಸ

ಚಿನ್ನಗೆಯಿಕದ ಬೆವಹಾರಿಗಳು ವರ್ಷಕ್ಕೆ ಪ್ರತ್ಯೇಕ - ೧೦ ವೀಸ

ಸ್ಥಳ ಗವರೆಗಳು ವರ್ಷಕ್ಕೆ ಹಸುಂಬೆಗೆ - ಒಂದು ಪಣ

ನಾನಾದೇಶಿ ಗವರೆಗಳು ವರ್ಷಕ್ಕೆ ಹಸುಂಬೆಗೆ - ಹಾಗ ಒಂದು

ಕರ್ಪೂರ, ಕಸ್ತೂರಿ, ಕುಂಕುಮ, ಶ್ರೀಖಂಡ ಇತ್ಯಾದಿ ತೂಕದ ಭಂಡ ಎಲ್ಲಕ್ಕೂ - ಪೊಂಗೆ ಕಾಣಿ ಎರಡು

ಸ್ಥಳದ ಮತ್ತು ನಾನಾದೇಶಿದೂಸಿಗ ವ್ಯವಹಾರಗಳಲ್ಲಿ - ಪೊಂಗೆ ಕಾಣಿ ಎರಡು

ಮೆಣಸು, ಜೀರಿಗೆ, ಸಾಸಿವೆ... ವೊವ(ಓಮು), ಕೊತ್ತುಂಬರಿ ಇತ್ಯಾದಿಗಳಿಗೆ-ಪೊಲಗೆ ವೀಸ ಒಂದು

ಸಕ್ಕರೆ, ಇಂಗು, ಶುಂಠಿ, ಹಿಪ್ಪಲಿ, ಎಲೆಯಕ್ಕಿ (ಏಲಕ್ಕಿ) ಅರಿಸಿನ ಇತ್ಯಾದಿ ನಾರು, ಬೇರು, ಸಮಸ್ತ ತೂಕದ ಭಂಡ(ಸರಕು)ಕ್ಕೆ- ಪೊಂಗೆ ವೀಸ ಒಂದು ಹೆಜ್ಜುಂಕ ವಡ್ಡರಾವುಳಕೆ ನಡೆದ ದಂಡನಾಯಕರ- ಹತ್ತಕೊಂದು ಹೇರಿನ ಸುಂಕ

ಸ್ಥಳದ ಹೇರುವ ಬಣಂಜಿಗರು ಮತ್ತು ಹೊರಗಿನಿಂದ ಬಂದ ಸಮಸ್ತ ಬಣಜಿಗರು – ಹೇರಿಗೆ ಮಾನ ಒಂದು

ಮಾಲಗಾರ ನಾಲ್ವತ್ತೊಕ್ಕಲಿನಲ್ಲಿ ತಮ್ಮ ಕರಂಡಗೆಗಳಲ್ಲಿ ಪ್ರತ್ಯೇಕ ಹೂವಿನ - ಸರ ಒಂದು

ತಂಬುಲಿಗ ಸಾಸಿರ್ವ್ವರಲ್ಲಿ ಚೈತ್ರ ಪವಿತ್ರದ ಪರ್ವ್ವಬಿಯಕ್ಕೆ - ವೊಕ್ಕಲಲು ಎಲೆ ಒಂದು ಸಾವಿರ

ತೆಲ್ಲಿಗರು (ಗಾಣಿಗರು) ಆಯ್ವತ್ತೊಕ್ಕಲಿನಲ್ಲಿ ದೇವರ ನಂದಾದೀವಿಗೆಗೆ ಗಾಣಗಳಲ್ಲಿ ಪ್ರತ್ಯೇಕ - ಎಣ್ಣೆ ಸೊಂಟಿಗೆ ಒಂದು

ಅನೇಕ ಪ್ರಭುಗಾವುಂಡುಗಳು ತಮ್ಮ ಊರುಗಳಲ್ಲಿ ವರ್ಷಂಪ್ರತಿ ದೇವರಿಗೆ ಕೊಟ್ಟ ಪಣ (ಹಣ) ಪ್ರತಿ ಊರುಗಳಿಂದ – ಐದು ಪಣ

ಮುಂಮುರಿದಂಡ, ಹೆಗಲಗವರಿ, ಪಟ್ಟಣ ಮತ್ತು ನಾಡೊಳಗಿನ ಬಣಜಿಗರಲ್ಲಿ – ಅಪುತ್ರಿಕ ಧನ

ಪಟ್ಟಣದಕ್ಕಸಾಲೆಗಳು ಪ್ರತ್ಯೇಕ ಪ್ರತಿಕಮ್ಮಟದಿಂದ – ವರ್ಷಕ್ಕೆ ಪಣ ಒಂದು

ಪಟ್ಟಣದ ಅಸಗರು ವರ್ಷಕ್ಕೆ ಪ್ರತ್ಯೇಕ – ಹತ್ತು ವೀಸ

ಪಟ್ಟಣದ ಮೇದರು ವರ್ಷಕ್ಕೆ ಪ್ರತ್ಯೇಕ – ಕತ್ತಿಗೆಗೆ ಐದು ವೀಸ

ಜೇಡರು ವರ್ಷಕ್ಕೆ ಪ್ರತ್ಯೇಕ – ಕೂಟಿಗೆ ಐದು ವೀಸ

ಹೀಗೆ ಹಲವರಿಂದ ಸಂದಾಯವಾಗುತ್ತಿದ್ದ ಬೇರೆ ಬೇರೆ ರೀತಿಯ ತೆರಿಗೆಗಳನ್ನು ರಾಜೂರಿನ ಗವರೇಶ್ವರ ದೇವಾಲಯಕ್ಕೆ ದಾನ ಬಿಡಲಾಗಿದೆ. ಈ ಮೇಲಿನ ಪಟ್ಟಿಯಿಂದ ಜನರು ಸಾಮೂಹಿಕವಾಗಿ ತಮ್ಮ ಯೋಗ್ಯತಾನುಸಾರ ದಾನ ಮಾಡುತ್ತಿದ್ದ ಬಗೆಯೂ ತಿಳಿದು ಬರುತ್ತದೆ. ಮತ್ತು ಚಾಲುಕ್ಯರ ಕಾಲದಲ್ಲಿ ಯಾವ ಯಾವ ವೃತ್ತಿಯವರಿಗೆ ಯಾವ ಯಾವ ಕಾರ್ಯಗಳಿಗಾಗಿ ಎಷ್ಟೆಷ್ಟು ತೆರಿಗೆಗಳನ್ನು ವಿಧಿಸುತ್ತಿದ್ದರೆಂಬುದೂ ಇದರಿಂದ ಮನವರಿಕೆಯಾಗುತ್ತದೆ. ಹೀಗೆ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಭೂಮಿ, ಹಣ, ಧಾನ್ಯರೂಪದಲ್ಲಿ ಮಾತ್ರವಲ್ಲದೆ ತೆರಿಗೆ/ಸುಂಕಗಳ ರೂಪದಲ್ಲಿಯೂ ದಾನ ನೀಡುತ್ತಿದ್ದುದನ್ನು ಕಾಣಬಹುದು. ಇಂಥ ಇನ್ನೂ ಅನೇಕ ಸುಂಕದಾನಗಳ ಉಲ್ಲೇಖಗಳು ಲಭಿಸುತ್ತವೆ. ಅಧ್ಯಯನದ ಸೀಮಿತ ವ್ಯಾಪ್ತಿಯನ್ನು ಗಮನದಲ್ಲಿಟ್ಟುಕೊಂಡು ಕೆಲವನ್ನು ಮಾತ್ರ ಇಲ್ಲಿ ವಿವರಿಸಲಾಗಿದೆ.

### ೪.೬.೫ ತೋಟದಾನ :

ದಾನ ನೀಡುತ್ತಿದ್ದ ವಿಧಗಳಲ್ಲಿ ತೋಟವೂ ಒಂದು. ತೋಟ ಭೂಮಿಯ ಒಂದು ವಿಧವೇ ಆಗಿದೆ. ಆದರೆ, ಖಾಲಿ ಇರುವ ಭೂಮಿಗಿಂತ ಹೆಚ್ಚಿನ ಉತ್ಪನ್ನ ನೀಡುವ, ನೀರಾವರಿಯಿಂದ ವೀಳ್ಯದೆಲೆ, ಅಡಕೆ, ತೆಂಗು, ಮಾವು ಮುಂತಾದ ಬೆಳೆಗಳನ್ನು ಬೆಳೆಯುವ ನೆಲ ತೋಟವೆನಿಸುತ್ತದೆ. ತೋಟವನ್ನು ದೇವಾಲಯಗಳಿಗೆ ಹಾಗೂ ವ್ಯಕ್ತಿಗಳಿಗೆ ದಾನ ಬಿಡುತ್ತಿದ್ದುದುಂಟು. ದೇವಾಲಯ ಕಾಲಕಳೆದಂತೆ ಒಂದು ಸಂಕೀರ್ಣ ವ್ಯವಸ್ಥೆಯಾಗುತ್ತ ಬಂದಂತೆ ಅದರ ಅವಶ್ಯಕತೆಗಳೂ ಹೆಚ್ಚಾದವು. ದೇವಾಲಯದ ಪರಿವಾರವೂ ಹೆಚ್ಚಿದಂತೆ ದೇವಾಲಯಕ್ಕೆ ಹೆಚ್ಚಿನ ಉತ್ಪಾದನೆಯ ಅಗತ್ಯವೂ ಬೆಳೆಯಿತು. ದೇವಾಲಯಗಳು ಹೆಚ್ಚಾಗಿ ನದಿ, ತಟಾಕ, ಕೆರೆಗಳ ತಡಿಗಳಲ್ಲಿ ನಿರ್ಮಾಣವಾಗಿ ಒಂದು ಒಳ್ಳೆಯ ಪರಿಸರವನ್ನು ಹೊಂದುವುದು ಅಷ್ಟೇ ಮುಖ್ಯವಾಗಿತ್ತು. ದೇವಾಲಯಕ್ಕೆ ಅಕ್ಕಪಕ್ಕಗಳಲ್ಲಿ ಸಾಕಷ್ಟು ಭೂಮಿ, ತೋಟ, ಉದ್ಯಾನಗಳು ಹೊಂದಿಕೊಂಡು ಇರುತ್ತಿದ್ದವು. ಹೀಗೆ ಇಲ್ಲದೇ ಇದ್ದ ಸಂದರ್ಭದಲ್ಲಿ ಜನರು ದೇವಾಲಯಕ್ಕೆ

ಬೇಕಾದ ಎಲ್ಲ ಅವಶ್ಯಕತೆಗಳನ್ನು ಪೂರೈಸಲು ಸಿದ್ಧರಿದ್ದರು. ದೇವಾಲಯಕ್ಕೆ ಬೇಕಾದ ವ್ಯವಸ್ಥೆಗಳನ್ನು ದೇವಾಲಯವೇ ನೋಡಿಕೊಳ್ಳಲು ಫಲವತ್ತಾದ, ಹೆಚ್ಚು ಇಳುವರಿಯನ್ನು ಕೊಡುವಂಥ ಭೂಮಿಗಳನ್ನು ದಾನ ನೀಡುತ್ತಿದ್ದರು. ಅದರ ಫಲವಾಗಿಯೇ ಸಾಕಷ್ಟು ತೋಟಗಳನ್ನು ದಾನ ಮಾಡಲಾಗಿದೆ.

ತೋಟದಾನದಲ್ಲಿ ಎರಡು ಬಗೆಯ ಅಂಶಗಳನ್ನು ಕಾಣುತ್ತೇವೆ. ಒಂದು ದೇವಾಲಯದ ತೋಟಕ್ಕಾಗಿ ಭೂಮಿ, ಹಣವನ್ನು ದಾನ ಮಾಡುವುದು; ಎರಡು ಈಗಾಗಲೇ ಸಿದ್ಧ ಸ್ಥಿತಿಯಲ್ಲಿರುವ ತೋಟಗಳನ್ನೇ ದಾನ ಮಾಡುವದು. ಭೂದಾನ ಮತ್ತು ಹಣದಾನಗಳ ಕುರಿತಾದ ಚರ್ಚೆಯಲ್ಲಿ ತೋಟಗಳಿಗಾಗಿ ನೀಡಿದ ದಾನಗಳನ್ನು ಈಗಾಗಲೇ ಚರ್ಚಿಸಲಾಗಿದೆ. ಆದ್ದರಿಂದ ತೋಟಗಳನ್ನೇ ದಾನ ನೀಡಿದ ಕೆಲವು ಉದಾಹರಣೆಗಳನ್ನು ಈ ಕೆಳಗೆ ನೋಡಬಹುದು. ಕೆಲವು ಶಾಸನಗಳಲ್ಲಿ ಅಡಕೆ ತೋಟ, ಹೂವಿನ ತೋಟ, ಎಲೆ ಬಳ್ಳಿಯ ತೋಟ, ಮಾವಿನ ತೋಟ ಎಂದು ಹೆಸರಿಸಿದ್ದರೆ ಇನ್ನೂ ಅನೇಕ ಶಾಸನಗಳಲ್ಲಿ ಬರೀ ತೋಟ ಎಂದಷ್ಟೇ ಹೇಳಲಾಗಿದೆ.

ಅಹವಮಲ್ಲನ ಆಳ್ವಿಕೆಯಲ್ಲಿ ಅವನ ಮಹಾಸಾಮಂತ ಆಯ್ತವರ್ಮನು ಕಿಸುಕಾಡು-೭೦ ಕೋಗಳಿ-೫೦೦ನ್ನು ಆಳುತ್ತಿರಲು ಬಾಗಳಿಯ ೫೦ ಮಹಾಜನರು ದುಗ್ಗಿಮಯ್ಯನೆಂಬುವನು ಪ್ರತಿಷ್ಠಾಪಿಸಿದ್ದ ಆದಿತ್ಯ ದೇವರಿಗೆ ಅರವತ್ತು ಕಮ್ಮ ತೋಟವನ್ನು ದಾನ ಮಾಡಿದ್ದಾರೆ.[588] ಮಹಾಸಾಮಂತ ಸೋಭನರಸು ತಳಕಲ್ಲು ಅಗ್ರಹಾರದ ನಾಗಲೇಶ್ವರ ದೇವಾಲಯಕ್ಕೆ ಹೂದೋಟವನ್ನು ದಾನ ಮಾಡಿದ್ದಾನೆ.[589] ಸೇನಾಪತಿಯೊಬ್ಬನು ಮಲ್ಲಿಕಾರ್ಜುನ ದೇವಾಲಯಕ್ಕೆ ಭೇಟಿ ನೀಡಿದಾಗ ದೇವರ ಸೇವೆಗೆಂದು ಒಂದು ಮತ್ತರು ಗದ್ದೆ ಹಾಗೂ ಹೂವಿನ ತೋಟವೊಂದನ್ನು ದತ್ತಿ ನೀಡಿದ್ದಾನೆ.[590] ಕುಡಿತಿನಿ ಶಾಸನದ ಪ್ರಕಾರ ಅಹವಮಲ್ಲ ತೈಲಪನು ಕುಡತಿನಿಯ ಶ್ರೀ ಸ್ವಾಮಿದೇವರ ತಪೋವನಾಧಿ ಪತಿಗಳು, ಸ್ಥಾನದ ಐದುವರ್ಗ ಸಂಮುಖದಲ್ಲಿ ತೋಟವೊಂದನ್ನು ದಾನವಾಗಿ ನೀಡಿದ್ದಾನೆ.[591] ಮಹಾಸಾಮಂತ ದೇವನರಸನು ನಗರೇಶ್ವರದೇವರ ಸೇವೆಗೆ ೨ ತೋಟಗಳನ್ನು ದಾನವಾಗಿ ಬಿಟ್ಟಿದ್ದಾನೆ.[592] ಜಗದೇಕಮಲ್ಲ ಜಯಸಿಂಹನ ಅಕ್ಕ ಅಕ್ಕದೇವಿಯು ಪೆರೂರು ಅಗ್ರಹಾರದ ವಿದ್ಯಾರ್ಥಿಗಳ ವಿದ್ಯಾದಾನಕ್ಕೆ ೨ ಮತ್ತರು ಹೂದೋಟವನ್ನು ಬಿಟ್ಟಿದ್ದಾಳೆ.[593] ಜಗದೇಕಮಲ್ಲ ಜಯಸಿಂಹನ ರಾಣಿ ಪದ್ಮಲದೇವಿಯು ಕರಡಿಕಲ್ಲು ೨೦೦ರ ಬಿಳಿಯ ಗೋವನ್ತಿಗೆಯ ಸ್ವಯಂಭು ಕಲಿದೇವಸ್ವಾಮಿಗೆ ೪೫೦ ಕಮ್ಮ ತೋಟವನ್ನು ನೀಡಿದ್ದಾಳೆ.[594] ಇಮ್ಮಡಿ ಜಯಸಿಂಹದೇವನ ಮಗಳು ಸೋಮಲದೇವಿಯು ಪುಲಿಪೊದರ ಬಸದಿಯ ಭೋಗಕ್ಕೆಂದು ಒಂದು ಹೂವಿನ ತೋಟವನ್ನು ದಾನ ನೀಡಿದ್ದಾನೆ.[595]

ಸಾಮಂತ ನರಸಿಂಹದೇವನು ಸಿರಿವೆಡೆಯ ಮೂಲಸ್ಥಾನದ ಶಂಕರದೇವರ ಸೇವೆಗೆ ಒಂದು ಹೂವಿನ ತೋಟವನ್ನು ದಾನ ನೀಡಿದ್ದಾನೆ.[596] ಪೆರ್ಗ್ಗಡೆ ನಾರಣಯ್ಯನು ಬೆಂಗೇರಿಯ ಸೋಮೇಶ್ವರ ದೇವರ ಸೇವೆಗೆ ೧೦೦ ಅಡಕೆ ಮರಗಳ ತೋಟವನ್ನು ದಾನ ಮಾಡಿದ್ದಾನೆ.[597] ಸೂಳೆವಾಳ ಮಾರಮಯ್ಯನು ಮಹಾಮಂಡಳೇಶ್ವರ ಬಿಜ್ಜಲದೇವನಿಗೆ ಬಿನ್ನಪಗೈಯ್ಯು ಮಾರೇಶ್ವರದೇವರಿಗೆ ಉಚ್ಚಂಗಿಯ ಕೋಟೆಯ ನೈರುತ್ಯ ದಿಕ್ಕಿನ ಪಡವಳಗೆರೆಯ ಕೆಳಗಿನ ನಿತ್ಯ

ನೀರು ಹರಿಯುವ ಗದ್ದೆ ಮತ್ತು ತೋಟವನ್ನು ಕೊಡಿಸಿದ್ದಾನೆ.[598] ಬಲ್ಲಹದೇವಿ ಎಂಬುವವಳು ತಮ್ಮ ಊರಿನ ಬೇವ್ವವಂತಿಮರರಿಗೆ ಮತ್ತು ದೇವಿಯ ಪೂಜೆಗೆಂದು ಒಂದು ಹೂವಿನ ತೋಟವನ್ನು ಬಿಟ್ಟು ಕೊಟ್ಟಿದ್ದಾಳೆ.[599] ಭುವನಗಿರಿಯ ದಂಡನಾಯಕ ಬೀರಮರೆಡ್ಡಿ ಮತ್ತು ಬೆಕ್ಕಲಿಗ ಇಬ್ಬರು ಶರಣರು ಋಷಿಗಳ ಆಹಾರದಾನಕ್ಕೆ ಒಂದು ಮಾವಿನ ತೋಟವನ್ನು ದತ್ತಿಯಾಗಿ ನೀಡಿದ್ದಾರೆ.[600] ಮಹಾಮಂಡಳೇಶ್ವರ ರೇಚರಸನು ಭಟ್ಟವೃತ್ತಿಯ ಸೋಮನಾಥಯ್ಯನಿಗೆ ೧೨ ಮತ್ತರು ತೋಟವನ್ನು ನೀಡಿದ್ದಾನೆ.[601] ಮಹಾಸಾಮಂತ ನಾಯಿಮರಸನು ಸಿಂಧಿಗೆ - ೧೨ರ ಬಳಿಯ ಬೆನಕನ ತವಿಟ್ಟಿಗೆಯ ಮೂಲಸ್ಥಾನದ ಮಹಾದೇವರ ಹೂವಿನ ಮಾಲೆಗೆ ಒಂದು ತೋಟವನ್ನು ಬಿಟ್ಟಿದ್ದಾನೆ.[602] ಕಪ್ಪೆಕಲ್ಲ ಮಹಾದೇವರಿಗೆ ಅಲ್ಲಿನ ಮುಖ್ಯಸ್ಥ ಪುಲಿಯಣ ಎಂಬಾತನು ಒಂದು ಮತ್ತಾರು ತೋಟವನ್ನು ದಾನ ನೀಡಿದ್ದಾನೆ.[603] ದಂಡನಾಯಕ ನಾಗವರ್ಮನು ತಡಖೇಲದಲ್ಲಿ ಅನೇಕ ದೇವಾಲಯಗಳನ್ನು ಕಟ್ಟಿಸಿ ಸಾಕಷ್ಟು ದಾನಗಳನ್ನು ಮಾಡುತ್ತಿದ್ದಾಗ, ೨ ಮತ್ತರು ಹೂದೋಟವನ್ನು ನೀಡಿದ್ದಾನೆ.[604] ಸಾಮಂತ ತ್ರೈಲೋಕ್ಯಮಲ್ಲ ಇರಿವನೊಳಂಬ ಪಲ್ಲವ ಪೆರ್ಮಾಡಿ ನಾರಸಿಂಗದೇವನ ರಾಣಿ ನೊಳಂಬ ಮಹಾದೇವಿಯು ಹೊಸಗೆರೆಯ ಮಹಾದೇವರ ಪೂಜೆಗಾಗಿ ಒಂದು ಹೂವಿನ ತೋಟವನ್ನು ದಾನ ಮಾಡಿದ್ದಾಳೆ.[605] ಸಾಮಂತ ಸಿಂಧವಂಶದ ನೆಲಗುತ್ತಿಗ ಕಣ್ಣರಸನು ದಿಗ್ಗಿಗೆರೆಯ ಕರ್ಣೇಶ್ವರ ದೇವರಿಗೆ ಒಂದು ತೋಟವನ್ನು ನೀಡಿದ್ದಾನೆ.[606]

ಹೀಗೆ ಅನೇಕರು ತೋಟದಾನಗಳನ್ನು ನೀಡಿರುವುದನ್ನು ಶಾಸನಗಳು ಉಲ್ಲೇಖಿಸುತ್ತವೆ. ಇನ್ನೂ ಇಂಥ ಅನೇಕ ತೋಟದಾನಗಳ ಉಲ್ಲೇಖಗಳಿವೆ.

## ೪.೬.೬ ಗಾಣದಾನ ಮತ್ತು ಎಣ್ಣೆದಾನ :

'ಗಾಣ' ಎಂದರೆ ಎಣ್ಣೆಯನ್ನು ತೆಗೆಯುವ ಒಂದು ಸಾಧನ ಪ್ರಾಚೀನ ಕಾಲದಲ್ಲಿ ದೇವಾಲಯಕ್ಕೆ ದೀಪಾಲಂಕಾರವೇ ವಿಶೇಷವಾಗಿತ್ತು. ಧೂಪ, ದೀಪ, ನೈವೇದ್ಯ, ಶ್ರೀಗಂಧ- ದೇವಭೋಗದ ಭಾಗಗಳೇ ಆಗಿದ್ದವು. ಇಂದಿಗೂ ಸಹ ಇವುಗಳನ್ನು ಹೊರತು ಪಡಿಸಿ ದೇವರ ಪೂಜೆ ಪೂರ್ಣವಾಗಲಾರದು. ದೇವಾಲಯ ಸಮುದಾಯದ ಕೇಂದ್ರಬಿಂದುವಾದಂತೆ ಜನ ಸಂದಣಿಯೂ ಹೆಚ್ಚಾಗಿತ್ತು. ಇಂದಿನಂತೆ ವಿದ್ಯುತ್ ಸೌಲಭ್ಯವಿಲ್ಲದ ಆ ಕಾಲದಲ್ಲೂ ದೇವಸ್ಥಾನದಲ್ಲಿ ಅಂಧಕಾರಕ್ಕೆ ಆಸ್ಪದವಿರಲಿಲ್ಲ. 'ದೇವರ ಗರ್ಭಗೃಹ ಬೆಳಕಿನಿಂದ ಝಗಮಗಿಸುತ್ತಿರಬೇಕು. ದೇವಾಲಯಲದಲ್ಲಿ ಹಚ್ಚಿದ ದೀಪಗಳ ಬೆಳಕು ಸುತ್ತೆಲ್ಲ ಹರಡಬೇಕು' ಎಂಬ ಭಾವನೆಯಿಂದ ದೇವಾಲಯಗಳಲ್ಲಿ ಸಾಕಷ್ಟು ದೀಪಗಳು ಬೆಳಗುತ್ತಿದ್ದವು. ಇಂದಿಗೂ ಸಹ ಅನೇಕ ದೇವಾಲಯಗಳಲ್ಲಿ ಲಕ್ಷದೀಪೋತ್ಸವ ಮಾಡುವುದನ್ನು ನಾವು ಕಾಣುತ್ತೇವೆ. ಸದಾಕಾಲ ದೇವರ ಮುಂದೆ ಬೆಳಗುವ ದೀಪಕ್ಕೆ ನಿರಂತರವಾಗಿ ಎಣ್ಣೆಯ ಅವಶ್ಯಕತೆಯಿತ್ತು. ಇದಕ್ಕಾಗಿ ಅನೇಕರು ಸೊಡರೆಣ್ಣೆಯನ್ನು, ಸೊಂಡಿಗೆ ಎಣ್ಣೆಯನ್ನು ದಾನ ಮಾಡಿದ್ದರೆ, ಹಲವಾರು ಗಾಣಗಳನ್ನೇ ದಾನ ಮಾಡಿದ್ದಾರೆ. ದೇವಾಲಯ ನಿರ್ಮಾಣದ ಸಂದರ್ಭದಲ್ಲಿಯೇ

ನಂದಾದೀವಿಗೆಗೆ ವ್ಯವಸ್ಥೆ ಮಾಡಲಾಗುತ್ತಿತ್ತು. ಕಾಲಕ್ರಮದಲ್ಲಿ ದೇವಾಲಯಕ್ಕೆ ಎಣ್ಣೆಯ ಅವಶ್ಯಕತೆ ಹೆಚ್ಚಿದಂತೆ ಮತ್ತೆ ಮತ್ತೆ ಗಾಣಗಳನ್ನು ದಾನ ಮಾಡಿದ್ದಾರೆ. ದೇವಾಲಯಕ್ಕೆ ಬಿಡುತ್ತಿದ್ದ ಗಾಣಗಳಿಗೆ 'ಗಾಣದೆರೆ' (ಗಾಣದ ಮೇಲಿನ ಸುಂಕ)ಯನ್ನು ದಾನಬಿಟ್ಟ ಉದಾಹರಣೆಗಳಿವೆ.[607]

ಗಾಣದಾನಗಳನ್ನು ದೇವರ ನಂದಾದೀವಿಗೆಗಾಗಿಯೇ ನೀಡಲಾಗಿದೆ. ನಂದಾದೀವಿಗೆಗೆ ಕೇವಲ ಗಾಣಗಳನ್ನಷ್ಟೇ ನೀಡಿಲ್ಲ. ಗಾಣದಾನಗಳ ಜೊತೆಗೆ ಭೂಮಿ, ಹಣ, ಸೂಂಕ, ತೋಟ ಮುಂತಾದವುಗಳನ್ನು ನೀಡಲಾಗಿದೆ. ಭೂಮಿ, ಹಣ, ಸುಂಕ, ತೋಟ, ಗ್ರಾಮದಾನಗಳನ್ನು ವಿವಿಧ ಉದ್ದೇಶಗಳಾಗಿ ನೀಡಿದ್ದರೆ, ಗಾಣಗಳನ್ನು ನಂದಾದೀವಿಗೆಗೆ, ಸೊಡರೆಣ್ಣೆಗೆಗಾಗಿ ಮಾತ್ರ ನೀಡಲಾಗಿದೆ ಎಂದು ಭಾವಿಸಬಹುದಾಗಿದೆ. ಗಾಣದಾನಗಳನ್ನು ದೇವರ ನಂದಾದೀವಿಗೆಂದು ನೀಡಿದ ಉದ್ದೇಶವನ್ನು ಬಿಟ್ಟರೆ ಬೇರೆ ಉದ್ದೇಶಗಳಿಗೆ ನೀಡಿದ ಉಲ್ಲೇಖಗಳು ದೊರೆಯುವುದಿಲ್ಲ. ಅದೇ ರೀತಿ ದೀಪ ಅಥವಾ ನಂದಾದೀವಿಗೆಗೆಂದು ಎಣ್ಣೆಯನ್ನೂ ದಾನವಾಗಿ ನೀಡಿಲಾಗಿದೆ ಅಂಥ ಕೆಲವು ನಿದರ್ಶನಗಳನ್ನು ಈ ಕೆಳಗೆ ಹೇಳಲಾಗಿದೆ.

ಮಹಾಮಂಡಳೇಶ್ವರ ಶಾಂತಿವರ್ಮರಸನು ಬಾಹುಬಲಿ ಜಿನಾಲಯಕ್ಕೆ ದೀಪಾವಳಿ ಪರ್ವ್ವದ ದೇವರ ದೀಪಕ್ಕೆಂದು ಗಾಣದೆಣ್ಣೆಯನ್ನು ದಾನ ನೀಡಿದ್ದಾನೆ.[608] ಮಹಾಸಾಮಂತ ದೇವರಸನು ನಗರೇಶ್ವರದೇವರ ನಂದಾದೀವಿಗೆಗೆ ಒಂದು ಗಾಣವನ್ನು ನೀಡಿದ್ದಾನೆ.[609] ಜಗದೇಕಮಲ್ಲ ಜಯಸಿಂಹನ ರಾಣಿ ಪದ್ಮಲದೇವಿಯು ದೇವಪುರದ ಶ್ರೀ ಮಾರಸಿಂಘೇಶ್ವರ ದೇವರ ದೀವಿಗೆಗೆಂದು ೨ ಗಾಣಗಳನ್ನು ದಾನ ಬಿಟ್ಟಿದ್ದಾಳೆ.[610] ಇನ್ನೊಬ್ಬ ರಾಣಿ ಸೋಮಲದೇವಿಯು ಬಳ್ಳನಿಟ್ಟಿಗೆಯ ಬಸದಿಗೆ ೧ ಗಾಣವನ್ನು ನೀಡಿದ್ದಾಳೆ.[611] ಇಮ್ಮಡಿ ಜಯಸಿಂಹದೇವನು ಪಿರಿಯ ಮೊಸಂಗಿಯ ದೇಸಿಗಣದ ಶ್ರೀ ಜಗದೇಕಮಲ್ಲ ಜಿನಾಲಯ ಭೋಗಕ್ಕಾಗಿ ೧೦೦ ಮತ್ತರು ಕರಿಯನೆಲ, ೨ ಮತ್ತರು ಗದ್ದೆ, ಒಂದು ಹೂವಿನ ತೋಟಗಳ ಜೊತೆಗೆ ದೀಪಕ್ಕೆಂದು ಒಂದು ಗಾಣವನ್ನು ದಾನ ಮಾಡಿದ್ದಾನೆ.[612] ಮಹಾಮಂಡಳೇಶ್ವರ ಜಗದೇಕಮಲ್ಲ ನೊಳಂಬಪಲ್ಲವನ ಮನೆವೆರ್ಗ್ಗಡೆ ಕೇತಯನಾಯಕನು ನೆಲ್ಕುದುರೆಯ ಕಲಿದೇವರ ಸೇವೆಗೆ ಭೂಮಿ, ಹಣದೋಟದ ಜೊತೆಗೆ ನಂದಾದೀವಿಗೆಗೆ ೧ ಗಾಣವನ್ನು ನೀಡಿದ್ದಾನೆ.[613] ವಿಜಯಲಕ್ಷ್ಮೀ ಕಾಂತನೆಂದು ಪ್ರಶಸ್ತಿ ಧರಿಸಿದ್ದ ಮಹಾಸಾಮಂತ ನಾಯಿಮರಸನು ಸಿಂದಿಗೆ-೧೨ರ ಬಳಿಯ ಬೆನಕನತವಿಟ್ಟಿಗೆಯ ಮೂಲಸ್ಥಾನದ ಮಹಾದೇವರಿ ಭೂಮಿ, ನಿವೇಶನಗಳ ಜೊತೆಗೆ ನಂದಾದೀವಿಗೆ, ಸೊಡರೆಣ್ಣೆಗೆಂದು ಒಂದು ಗಾಣವನ್ನು ದತ್ತಿ ಬಿಟ್ಟಿದ್ದಾನೆ.[614] ದಂಡನಾಯಕ ನಾಗವರ್ಮನು ಸಕ್ಕರಗೆ-೮೦ರೊಳಗಿನ ತಡಕಲ್ಲ ಪ್ರಭುತ್ವವನ್ನು ವಹಿಸಿಕೊಂಡಾಗ ಅಲ್ಲಿನ ದೇವಾಲಯಗಳಿಗೆ ಅನೇಕ ವಿಧದ ದಾನಗಳನ್ನು ಮಾಡುವುದರ ಜೊತೆಗೆ ೨ ಗಾಣಗಳನ್ನು ನೀಡಿದ್ದಾನೆ.[615] ಮಹಾಸಾಮಂತ ಕಾಕತೀಯ ಪೊಳಲರಸನು ಖಂಡಿಸಣಗರದಲ್ಲಿ ಪೆರ್ಗ್ಗಡೆ ಮಧುವಪ್ಪಯ್ಯಗಳು ಮಾಡಿಸಿದ ಮಧುಪೇಶ್ವರದೇವರಿಗೆ ಭೂಮಿ, ನಿವೇಶನ, ರಾಟಣ, ಗಾಣಗಳನ್ನು ದಾನ ನೀಡಿದ್ದಾನೆ.[616] ಸಾಮಂತ ಸಿಂಧವಂಶದ ನೆಲಗುತ್ತಿ ಕಣ್ಣರಸನು ದಿಗ್ಗಿಗೆರೆಯ ದೇವರಿಗೆ ಒಂದು ದೇವಗಾಣವನ್ನು ದತ್ತಿ ಬಿಟ್ಟಿದ್ದಾನೆ.[617]

ತೆಲ್ಲಿಗ ಗೋಕಯ್ಯ, ಚಟ್ಟಯ್ಯ, ಕೇತಯ್ಯ, ಹುಲಿಯಮ್ಮ, ಆಯ್ಚಮಯ್ಯ, ಸೋಮಯ್ಯ ಮೊದಲಾದ ತೆಲ್ಲಿಗರಯ್ವತ್ತೊಕ್ಕಲ ಜನರೆಲ್ಲರೂ ಸೇರಿ ರೂಗಿಯ ಕೇದಾರದೇವರ ನಂದಾದೀವಿಗೆಗೆ ಒಂದೊಂದು ಸೊಳಸ ಎಣ್ಣೆಯನ್ನು ಕಾಲಕಾಲಕ್ಕೆ ನಡೆವಂತಾಗಿ ದಾನ ಬಿಟ್ಟಿದ್ದಾರೆ.[618] ಚಕ್ರವರ್ತಿ ಭುವನೈಕಮಲ್ಲನ ರಾಣಿ ಪಂಪಾದೇವಿಯು ಗೋರಿಕಲ್ಲ-೧೨ರ ಕಂಪಣದ ಗ್ರಾಮವಾದ ಕಪ್ಪಕಲ್ಲ ಭೋಗೇಶ್ವರ ದೇವರಿಗೆ ಒಂದು ಗಾಣವನ್ನು ಭೂಮಿದಾನದ ಜೊತೆಗೆ ನೀಡಿದ್ದಾಳೆ.[619] ಸಾಮಂತ ಮಳೆಯಮರಸನು ಪೊನ್ನಪಾಳಿನ ಗಿರಿಗೋಟೆಮಲ್ಲ ಜಿನಾಲಯಕ್ಕೆ ೧ ಗಾಣ, ೫ ನಿವೇಶನ, ತೋಟದ ಭೂಮಿ ಮುಂತಾದವುಗಳನ್ನು ದತ್ತಿ ಬಿಟ್ಟಿದ್ದಾನೆ.[620] ತ್ರಿಭುವನಮಲ್ಲದೇವನ ರಾಣಿ ಕೇತಲದೇವಿಯು ತುಂಬಿಟ್ಟಗೆಯ ಚಂಡೇಶ್ವರದೇವರ ನಂದಾದೀವಿಗೆಗೆ 'ಗಾಣವೆಯಿಲೆ' ಎಣ್ಣೆಯನ್ನು ದಾನ ನೀಡಿದ್ದಾಳೆ.[621] ಮಹಾಮಂಡಳೇಶ್ವರ ಜೋಯಿಮರಸಯ್ಯನು ಕೊಂಡಕುಂದೆಯ ಚಟ್ಟಜಿನಾಲಯಕ್ಕೆ ಒಂದು ಗಾಣವನ್ನು ನೀಡಿದ್ದಾನೆ.[622]

ಹೀಗೆ ಗಾಣದಾನ ಮತ್ತು ಎಣ್ಣೆದಾನ ನೀಡಿದ ಅನೇಕ ಉಲ್ಲೇಖಗಳನ್ನು ಕಾಣಬಹುದಾಗಿದೆ. ಗಾಣದಾನ ಇಲ್ಲವೆ ಎಣ್ಣೆದಾನವನ್ನು ಪ್ರತ್ಯೇಕವಾಗಿ ನೀಡಿರುವುದು ಅಪರೂಪ. ಭೂಮಿದಾನ, ಹಣದಾನ, ಗ್ರಾಮದಾನ ತೋಟದಾನ ಮುಂತಾದವುಗಳ ಜೊತೆಗೆ ಗಾಣವನ್ನು ಅಥವಾ ಎಣ್ಣೆಯನ್ನು ದಾನವಾಗಿ ಕೊಟ್ಟಿರುವುದು ಸಾಮಾನ್ಯವಾಗಿ ಕಂಡುಬರುತ್ತದೆ.

## ೪.೬.೭ ಮನೆ ಮತ್ತು ನಿವೇಶನ ದಾನ

'ಮನೆ' ಎಂದರೆ ಆಶ್ರಯಸ್ಥಾನ ಅಥವಾ ವಾಸಸ್ಥಳ. ಮನುಷ್ಯರು ವಾಸಿಸಲು ಸಿದ್ಧಸ್ಥಿತಿಯಲ್ಲಿರುವ ಯೋಗ್ಯವಾದ ಸ್ಥಳವನ್ನು ಮನೆ ಎನ್ನುವರು. 'ನಿವೇಶನ' ಎಂದರೆ ಮನೆ ಮುಂತಾದ ಕಟ್ಟಡಗಳನ್ನು ಕಟ್ಟುವ ಖಾಲಿ ಸ್ಥಳ. ನಿವೇಶನಕ್ಕೆ 'ಸೈಟು' ಎಂತಲೂ ಕರೆಯುವರು. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ದೇವಾಲಯಗಳಿಗೆ, ಮಹಾಜನರಿಗೆ, ವಿದ್ಯಾರ್ಥಿ - ಉಪಾಧ್ಯಾಯರಿಗೆ ದಾನ ನೀಡಿದ ವಿವರಗಳು ಲಭಿಸುತ್ತವೆ. ದೇವಾಲಯಕ್ಕೆ ಬಂದ ಭಕ್ತರಿಗೆ, ದೇವಾಲಯದ ಪರಿವಾರದವರಿಗೆ ವಾಸಿಸಲು ಅವಶ್ಯವಾಗಿದ್ದ ಮನೆಗಳನ್ನು ಹಾಗೂ ಮನೆಗಳನ್ನು ಕಟ್ಟಿಕೊಳ್ಳಲು ನಿವೇಶನಗಳನ್ನು ನೀಡಲಾಗಿದೆ. ಅದೇ ರೀತಿ ವಿದ್ಯಾಭ್ಯಾಸ ಮಾಡಲು ಉಳಿದುಕೊಳ್ಳುತ್ತಿದ್ದ ವಿದ್ಯಾರ್ಥಿಗಳ ಶಯನಕ್ಕಾಗಿ, ಉಪಾಧ್ಯಾಯರ ಶಯನಾಚ್ಛದನಕ್ಕಾಗಿಯೂ ಮನೆಗಳನ್ನು ಮತ್ತು ನಿವೇಶನಗಳನ್ನು ದಾನ ನೀಡಲಾಗಿದೆ. ದೇವಾಲಯಗಳಿಗೆ ಹೊಂದಿಕೊಂಡಂತೆ, ಅದರ ಸುತ್ತ-ಮುತ್ತ ಸಮೀಪದಲ್ಲಿ ವಾಸಿಸಲು ಪಾತ್ರ ಪಾವುಳದವರಿಗೆ, ಪೂಜಾರಿಗಳಿಗೆ ಅನುಕೂಲವಾಗಲೆಂದು ದತ್ತಿ ಬಿಡಲಾಗಿದೆ. ಅದೇ ರೀತಿ ದೇವಾಲಯಗಳ ಅವಶ್ಯಕತೆಗೆ ತಕ್ಕಂತೆ ಬೇರೆ ಯಾವುದಾದರೂ ಕಟ್ಟಡಗಳನ್ನು ಹೊಂದಲಿ; ಎಂಬ ಉದ್ದೇಶಕ್ಕಾಗಿ ನಿವೇಶನಗಳನ್ನು ನೀಡಲಾಗಿದೆ. ಇದು ಅಂದಿನ ಜನರ ಸೂಕ್ಷ್ಮ ದೃಷ್ಟಿಕೋನಕ್ಕೆ ಹಿಡಿದ ಕನ್ನಡಿಯಾಗಿದೆ. ಕೆಲವರು ಮನೆ. ನಿವೇಶನಗಳನ್ನೇ ದಾನ ನೀಡಿದ್ದರೆ: ಇನ್ನೂ ಕೆಲವರು ಮನೆ ಅಥವಾ ನಿವೇಶನಗಳಿಗಾಗಿ ಭೂಮಿದಾನವನ್ನು, ಹಣದಾನವನ್ನು ಮಾಡಿದ್ದಾರೆ. ಉದಾಹರಣೆಗೆ ಆಳಂದೆ

ಸಾಸಿರವನ್ನಾಳುತ್ತಿದ್ದ ಮಹಾಸಾಮಂತ ರಾಜರಸನು ಮೊರಂಬದಲ್ಲಿನ ರಾಜ ಜಿನಾಲಯದ ನಿವೇಶನಕ್ಕಾಗಿ ಭೂಮಿಯನ್ನು ದಾನ ಮಾಡಿದ್ದಾನೆ.[623] ಮನೆ ಮತ್ತು ನಿವೇಶನಗಳನ್ನು ನೀಡಿದ ದಾನ-ದತ್ತಿಗಳನ್ನು ಈ ಕೆಳಗೆ ಉದಾಹರಿಸಲಾಗಿದೆ.

ಒಂದನೆಯ ಜಗದೇಕಮಲ್ಲನ ಅಕ್ಕ ಅಕ್ಕಾದೇವಿಯು ಪೆರೂರು ಅಗ್ರಹಾರದ ೫೦೦ ಜನ ವಿದ್ಯಾರ್ಥಿಗಳ ಶಯನಕ್ಕಾಗಿ ೫೦ ಮನೆಗಳನ್ನು ದಾನ ನೀಡಿದ್ದಾಳೆ.[624] ಒಂದನೆಯ ಜಗದೇಕಮಲ್ಲನ ರಾಣಿ ಸೋಮಲದೇವಿಯು ಒಳ್ಳನಿಟ್ಟಿಗೆಯ ಬಸದಿಗೆ ೫ ಮನೆಗಳನ್ನು ನೀಡಿದ್ದಾಳೆ.[625] ಮಹಾಸಾಮಂತ ಕಾಕತೀಯ ಪೊಳಲರಸನು ಖಂಡಿ ಸಣಗರದಲ್ಲಿ ಪೆರ್ಗಡೆ ಮಧುವಪ್ಪಯ್ಯಗಳು ಮಾಡಿಸಿದ ಮಧುಪೇಶ್ವರ ದೇವರಿಗೆ ಅಲ್ಲಿನ ಗಾವುಂಡರನ್ನು ಒಪ್ಪಿಸಿ ೧೨ ಮನೆ ನಿವೇಶನಗಳನ್ನು ಮತ್ತಿತರ ಕೆಲವು ದಾನಗಳನ್ನು ಮಾಡುತ್ತಾನೆ.[626] ಸಾಮಂತ ಸಿಂಧವಂಶದ ನೆಲಗುತ್ತಿಗ ಕಣ್ಣರಸನೆಂಬುವನು ರೇವಡಿಕುಂದೆಯ ಮಹಾಬ್ರತಿ ದವನಸೋವಭಳಾರರಿಗೆ ಒಂದು ನಿವೇಶನವನ್ನು ನೀಡಿದ್ದಾನೆ.[627] ಮಹಾಸಾಮಂತಾಧಿಪತಿ ಭೋಗದೇವರಸನ ಮೈದುನ ಸುಪ್ಪರಸನು ಕೆಳವಾಡಿಯ ಕೆರೆಗೆ ೨೦ ಮತ್ತರು ಭೂಮಿ ಮತ್ತು ಒಂದು ಮನೆಯ ನಿವೇಶನವನ್ನು ದಾನ ಮಾಡಿದ್ದಾನೆ.[628] ರಾಣಿ ಕೇತಲದೇವಿಯರ ವಿಜ್ಞಾಪನೆಯ ಮೇರೆಗೆ ತ್ರೈಲೋಕ್ಯಮಲ್ಲದೇವನು ಶ್ರೀ ಶಾಂತಿನಾಥದೇವರ ತ್ರಿಭುವನತಿಲಕ ಚೈತ್ಯಾಲಯದಲ್ಲಿದ್ದ ಋಷಿಗಳು, ಅಜ್ಜಿಯರ ಆಹಾರದಾನಕ್ಕೆಂದು ತ್ರಿಭುವನತಿಲಕ ಚೈತ್ಯಾಲಯದಲ್ಲಿದ್ದ ಋಷಿಗಳು, ಅಜ್ಜಿಯರ ಆಹಾರದಾನಕ್ಕೆಂದು ಮೂವತ್ತು ಗೇಣ ಗಳೆಯೊಳು ೨೫ ಮತ್ತರು ತೋಟ, ೪ ಗೇಣು ಗಳೆಯಿಂದ ಅಳೆದ ೧೭ ನೀಳಗಳೆ ಬಳಂಬೆ ನಿವೇಶನ ನೀಡಿದ್ದಾನೆ. ಆ ಚೈತ್ಯಾಲಯದಲ್ಲಿದ್ದ ಕಲ್ಲುಟಿಗರಿಗೆ ಒಂದು ಮನೆ, ಸೇವಕರಿಗೆ ಒಂದು ಹೊಲೆಮನೆಯನ್ನು ದಾನ ಮಾಡಿದ್ದಾನೆ.[629]

ಪೆರ್ಗಡೆ ಜೋಗಪಯ್ಯನು ಬೋಧನದಲ್ಲಿ ವಿಷ್ಣುದೇವರನ್ನು ಪ್ರತಿಷ್ಠಾಪನೆ ಮಾಡಿ ಅದರ ಸೇವೆಗೆ ಭೂಮಿಯನ್ನು ನೀಡಿ ಗೀತವಾದ್ಯ ನೃತ್ಯಕ್ಕೆಂದು ಒಂಬತ್ತು ಕೈಯ್ಯಗಲದ ೭೦ ನಿವೇಶನಗಳನ್ನು ದಾನ ಮಾಡಿದ್ದಾನೆ.[630] ಮಾಂಡಳಿಕ ದೇಮರಸನು ಹಿರೇಹಡಗಲಿಯ ದೇಮೇಶ್ವರ ದೇವರ ಸೇವೆಗೆ ಅಡಕೆತೋಟ ಮತ್ತು ಒಂದು ತಳಬಾಗಿಲು ಮನೆಯನ್ನು ದಾನಮಾಡಿದ್ದಾನೆ.[631] ಮಹಾಸಾಮಂತ ಕರ್ಕರಸನು ಒಕ್ಕಲುಗಾವಿಯ ಮಲ್ಲೇಶ್ವರ ದೇವರಿಗೆ ಒಂದು ನಿವೇಶನವನ್ನು ದತ್ತಿ ಬಿಟ್ಟಿದ್ದಾನೆ.[632] ಸಾಮಂತ ಮಳೆಯಮರಸನು ಪೊನ್ನಪಾಳಿನಲ್ಲಿ ಗಿರಿಗೋಟೆಮಲ್ಲ ಎಂಬ ಹೆಸರಿನ ಜಿನಾಲಯವನ್ನು ಕಟ್ಟಿಸಿ, ಇದಕ್ಕೆ ೫ ಮನೆಯ ನಿವೇಶನಗಳನ್ನು ದಾನ ನೀಡಿದ್ದಾನೆ.[633] ಮಹಾಸಾಮಂತ ಅಗ್ಗಳರಸನು ಮಹಾಪ್ರಧಾನ ಅಗ್ಗಳಯ್ಯ ಹಾಗೂ ಬಾಹುಬಲಿಯರ ಬಿನ್ನಹದಂತೆ ಋಷಿಗಳ ಆಹಾರದಾನಕ್ಕೆಂದು ಸಿರೂರನಲ್ಲಿ ಭೂಮಿ, ತೋಟ ಮತ್ತು ೧೫ ಕೈಯಳತೆಯ ನಿವೇಶನವನ್ನು ದಾನ ಮಾಡಿದ್ದಾನೆ.[634] ಭುವನೈಕಮಲ್ಲದೇವನು ವಿಕ್ರಮಪುರದ ಸ್ವಯಂಭು ನಗರೇಶ್ವರ ದೇವರ ಮಠದಲ್ಲಿನ ವಕ್ಖಾಣಭಟ್ಟರಿಗೆ ಮನೆಯೊಂದನ್ನು ದಾನ ಮಾಡಿದ್ದಾನೆ.[635] ಮಾಂಡಳಿಕ ಕದಂಬ ವಂಶದ ಬಾಚರಸ ಮತ್ತು ಅಬವಮೂಲಿಗರಾದ ಹಂಪೆಯ ನಾಯಕ, ಬಾಚೆಯ ನಾಯಕ, ರಾಜನಾಯಕರು ಸೇರಿ ಕೆಳವಾಡಿ-೨೦೦ರಲ್ಲಿನ

ಭೇರಿಗೆಯ ಕಲಿದೇವರ ಆರಾಧಕನಾದ ಕವಡಿಯ ಕೇತಿಸೆಟ್ಟಿಗೆ ದೇವಾಲಯದ ದಕ್ಷಿಣಕ್ಕೆ ನಾಲ್ಕು ನಿವೇಶನಗಳನ್ನು ದಾನ ಮಾಡಿದ್ದಾರೆ.[636] ಮಾಂಡಳಿಕ ಅಯ್ಯನಸಿಂಗ ಸೋಮರಸನು ಕೆಲ್ಲೂರ ತಿಕೇಶ್ವರ ದೇವರ ಪೂಜೆ ಪುನಸ್ಕಾರಕ್ಕೆಂದು ೧೨ x ೩೨ ಕೈ ಉದ್ದಗಲದ ಮತ್ತು ೧೨ x ೨೪ ಕೈ ಉದ್ದಗಲದ ಎರಡು ನಿವೇಶನಗಳನ್ನು ದಾನ ಮಾಡಿದ್ದಾನೆ.[637] ದಂಡನಾಯಕ ವಾಮದೇವಯ್ಯನು ಶ್ರೀ ವಾಮೇಶ್ವರದೇವರ ಪೂಜಾರಿಗೆ ೧೯ x ೨೦ ಕೈ ಉದ್ದಗಲದ ನಿವೇಶನವನ್ನು ನೀಡಿದ್ದಾನೆ.[638] ಚಂದಲದೇವಿ ಎಂಬಾಕೆಯು ಬಲ್ಲಟಗಿ ಬ್ರಹ್ಮಪುರಿಯ ಮಲ್ಲಯ್ಯನಿಗೆ ಒಂದು ನಿವೇಶನ ನೀಡಿದ್ದಾಳೆ.[639] ತ್ರಿಭುವನಮಲ್ಲದೇವನ ಪಟ್ಟಮಹಾದೇವಿ ಅಭಿನವ ಸರಸ್ವತಿಯು ಆಲಂಪುರದ ಬ್ರಹ್ಮೇಶ್ವರದೇವರ ಸೇವೆಗೆ, ಜೀರ್ಣೋದ್ಧಾರಕ್ಕೆ, ಪಂಚೋಪಚಾರಕ್ಕೆಂದು ೧೨ ಮನೆಗಳನ್ನು ದಾನವಾಗಿ ನೀಡಿದ್ದಾಳೆ.[640]

ಹೀಗೆ ಇನ್ನೂ ಅನೇಕರು ದೇವಾಲಯಗಳಿಗೆ, ವ್ಯಕ್ತಿಗಳಿಗೆ, ವಿದ್ಯಾದಾನಕ್ಕೆಂದು ಬೇರೆ ಬೇರೆ ಉದ್ದೇಶಗಳಿಗೆ ಮನೆ ಹಾಗೂ ನಿವೇಶನಗಳನ್ನು ದಾನ ಮಾಡಿದ್ದಾರೆ.

### ೪.೬.೮ ಕನ್ಯಾದಾನ ಅಥವಾ ಹೆಣ್ಣುದಾನ :

ಷೋಡಶದಾನಗಳಲ್ಲಿ ಕನ್ಯಾದಾನವೂ ಒಂದು. ಆದರಲ್ಲೂ ದೇವರ ಸನ್ನಿಧಾನದಲ್ಲಿ ಕೈಕೊಳ್ಳುವ ಈ ಕನ್ಯಾದಾನ ಹೆಚ್ಚು ಪುಣ್ಯದಾಯಿಯೆಂದು ಪ್ರಾಚೀನರ ಭಾವನೆಯಾಗಿತ್ತು. ಅಲ್ಲದೇ ದೇವಾಲಯಗಳಿಗೂ ಕನ್ಯಾದಾನ ಮಾಡಿದ ಕೆಲವು ಉಲ್ಲೇಖಗಳು ಸಿಗುತ್ತವೆ. "ಕನ್ಯಾದಾನ" ಎಂದರೆ ಸರ್ವಾಲಂಕಾರ ಭೂಷಿತಳಾದ ಕನ್ಯೆಯನ್ನು ತಕ್ಕವರನಿಗೆ ಮದುವೆ ಮಾಡಿಕೊಡುವುದು. ಆದರೆ ದೇವಾಲಯಗಳಿಗೆ ನೃತ್ಯ ಗೀತೆಗಳಿಗೆಂದು ಹೆಣ್ಣು ಮಕ್ಕಳನ್ನು ಬಿಡುವಿಕೆಯನ್ನು "ಕನ್ಯಾದಾನ"ವೆಂದು ಕೆಲವು ಶಾಸನಗಳು ಕರೆದಿವೆ ಎನಿಸುತ್ತದೆ. ಉದಾಹರಣೆಗೆ ನೆಲ್ಮಬ್ಬೆಯ ಕಮ್ಮಾರಬೇಡಿ ಎಂಬುವನು ಇಬ್ಬರು ಕನ್ಯೆಯರನ್ನು, ೧೨ ಗೋವುಗಳನ್ನು ದೇವಾಲಯವೊಂದಕ್ಕೆ ನೀಡಿರುವ ವಿಷಯ ನ್ಯಾಮತಿ ಶಾಸನದಲ್ಲಿದೆ.[645] ಬಿಚ್ಚುರಕೊಂಡನೆಂಬುವವನು "ಕನ್ಯೆದಾನ ಮಂಸೂಳಾಗಿಯಂ" ದೇವಾಲಯಕ್ಕೆ ದಾನಮಾಡಿರುವನು.[642]

ದೇವಾಲಯಗಳಿಗೆ ಹೆಣ್ಣುಗಳನ್ನು ಬಿಡುವ ಸಂಪ್ರದಾಯ ಬಹಳ ಹಿಂದಿನಿಂದ ನಡೆದುಕೊಂಡು ಬಂದಿದೆ. ಈಗ ತಿಳದಿರುವಂತೆ ಕರ್ನಾಟಕದಲ್ಲಿ ಬದಾಮಿ ಚಾಲುಕ್ಯ ಅರಸು ವಿಜಯಾದಿತ್ಯನ ಪ್ರಾಣವಲ್ಲಭೆ ವಿನಾಪೋಟಿ ಮತ್ತು ಆವಳ ತಾಯಿ ಕಂಚಿಪೊಟಿ, ಆಜ್ಜಿ ರೇವಕಮಂಚಳರು ಕರ್ನಾಟಕದ ಶಾಸನಗಳಲ್ಲಿ ಉಕ್ತಗೊಂಡ ಪ್ರಥಮ ದೇವದಾಸಿಯರಾಗಿದ್ದಾರೆ.[643] ದೇವಾಲಯದ ಅಂಗಭೋಗ, ರಂಗಭೋಗಗಳ ಕಾರ್ಯಕ್ಕಾಗಿ ಹೆಣ್ಣುಗಳನ್ನು ದಾನ ಮಾಡಲಾಗುತ್ತಿತ್ತು. ದೇವಾಲಯಗಳಲ್ಲಿ ನೃತ್ಯ, ಗೀತೆಗಳ ಮೂಲಕ ದೇವರ ಸೇವೆಯನ್ನು ಮಾಡಿಕೊಂಡು ಇವರು ಬದುಕಬೇಕಾಗಿತ್ತು. ಅದಕ್ಕಾಗಿ ಅವರಿಗೆ ಹಣ, ಭೂಮಿಯನ್ನು ಬಿಟ್ಟುಕೊಡಲಾಗುತ್ತಿತ್ತು. ಚಾಲುಕ್ಯರ ಅವಧಿಯಲ್ಲಿ ದೇವಾಲಯಗಳಿಗೆ ಹೆಣ್ಣು ಬಿಡುವ

ಈ ಸಂಪ್ರದಾಯ "ಪಾತ್ರ" ಮತ್ತು "ಸೂಳೆ" ಎಂದು ವಿಭಾಗಗೊಂಡಿತು. ನೃತ್ಯ, ಗೀತಾದಿಗಳಲ್ಲಿ ಪರಿಣಿತಳಾದವಳನ್ನು "ಪಾತ್ರ"ವೆಂದು ಉಳಿದ ಸೇವಾಕಾರ್ಯಗಳಲ್ಲಿ ಭಾಗವಹಿಸುತ್ತಿದ್ದವರನ್ನು 'ಸೂಳೆ' ಎಂದು ಸೂಚಿಸಬಹುದಾಗಿದೆ" ಎಂಬುದಾಗಿ ಡಾ. ಚಿದಾನಂದಮೂರ್ತಿ ಅಭಿಪ್ರಾಯ ಪಡುತ್ತಾರೆ.[644] 'ಇಂದು ಪಾತ್ರದವರು ವೇಶ್ಯೆಯರಾಗಿ (ಪಾತ್ರ > ಪಾತರ > ಪಾದರ > ಹಾದರ) ಕಂಡುಬಂದರೂ ಹಿಂದೆ ಅದು ದೇವಾಲಯಗಳ ನೃತ್ಯ-ಗೀತೆಗಳಲ್ಲಿ ಪರಿಣಿತಿಯನ್ನು ಪಡೆದವರ ಗೌರವದ ಸ್ಥಾನವಾಗಿ ಬಳಕೆಯಾಗುತ್ತಿತ್ತು. ಪೂಜಾ ಸಮಯದಲ್ಲಿ ವಿವಿಧ ಸೇವಾ ಕಾರ್ಯಗಳನ್ನು ಹೊತ್ತು ನಿಲ್ಲುತ್ತಿದ್ದವಳನ್ನು "ಸೂಳೆ' ಎನ್ನಲಾಗುತ್ತಿತ್ತು. ಅನೇಕ ಶಾಸನಗಳಲ್ಲಿ ನಾಲ್ವರು ಕಂಬದ ಸೂಳೆಯರ ಪ್ರಸ್ತಾಪ ಬಂದಿದೆ. ಈ ಹಿಂದೆಯೇ ಸೂಳೆಯರಿಗೆ ನೀಡಿದ ದಾನ-ದತ್ತಿಗಳನ್ನು ತಿಳಿಯಲಾಗಿದೆ. ದೇವಾಲಯದ ರಂಗಭೋಗಕ್ಕಾಗಿಯೇ ಹೆಣ್ಣುಗಳನ್ನು ಅಥವಾ ಕನ್ನೆಯರನ್ನು ದಾನ ಮಾಡುತ್ತಿದ್ದರೆಂದು ಸ್ಪಷ್ಟವಾಗಿದೆ. ಕ್ರಿ.ಶ. ೨ನೇಯ ಶತಮಾನದಿಂದಲೇ ಈ ಪದ್ಧತಿಯಿತ್ತೆಂಬುದನ್ನು ಹಲವು ವಿದ್ವಾಂಸರು ಗುರುತಿಸಿದ್ದಾರೆ.[645] ದೇವಾಲಯದಲ್ಲಿ ಸೇವಾಕಾರ್ಯಗಳನ್ನು ಮಾಡುವ ಇಂಥಹ ಹೆಣ್ಣುಗಳನ್ನು ದಾನ ಮಾಡುವ ರೂಢಿಯೂ ಇತ್ತು. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಇದು ಸ್ಪಷ್ಟವಾಗಿ ರೂಢಿಗೆ ಬಂದುದನ್ನು ಕಾಣಬಹುದಾಗಿದೆ. ದೇವಾಲಯಗಳಿಗೆ ಬರುತ್ತಿದ್ದ ಹೆಣ್ಣುಗಳು ಸಾಮಾನ್ಯವಾಗಿ ಕನ್ಯೆಯರೇ ಆಗಿರುತ್ತಿದ್ದರು. ಆದ್ದರಿಂದ ಇದನ್ನು ಕನ್ಯಾದಾನವೆಂದೂ ಹೇಳಬಹುದು.

ಮಹಾಮಂಡಳೇಶ್ವರ ವೀರಶಾಂತರಸನ ಮನೋವಲ್ಲಭೆ ಚಾಗಲದೇವಿ 'ಪಲಬರುಂ ಬ್ರಾಹ್ಮಣರ ಕನ್ಯಾದಾನಮಂ ಮಾಡಿಸಿ'ದ ವಿಷಯ ಹುಂಚಶಾಸನದಲ್ಲಿದೆ.[646] ಕೇಶವನೆಂಬವನು ಕೈಕೊಂಡ 'ಕನ್ಯಾದಾನ'ದ ಉಲ್ಲೇಖ ಹೊಟ್ಟೂರಿನ ಶಾಸನದಲ್ಲಿದೆ.[647] ಪಲ್ಲವ ಪೆರ್ಮಾನಡಿ ಜಯಸಿಂಹದೇವನ ಮಹಾಮಂಡಳೇಶ್ವರ ಚೆನ್ನರಸ 'ಭೂದಾನಮನ್ನದಾನ ಗೋದಾನ ಸುವರ್ಣದಾನ ಕನ್ಯಾದಾನ'ಗಳನ್ನು ಮಾಡಿದ್ದಾನೆ.[648] ಬ್ರಾಹ್ಮಣಿ ಸೋರಿಕಯ್ವೆ ಎಂಬುವಳು ಅಗ್ನಿಯ ಬ್ರಾಹ್ಮಣರ ಸಮ್ಮುಖದಲ್ಲಿ 'ಕನ್ಯಾದಾನದೊಡನೆ ಭೂಮಿದಾನ'ವಾಗಿ ೬೦೦ ಕಮ್ಮಗದ್ದೆಯನ್ನು ಬಿಟ್ಟಿರುವಳು.'[49] ದೇವಾಲಯ ನಿರ್ಮಾಣದಂತಹ ಶುಭಪ್ರಸಂಗ ಮತ್ತು ಪ್ರಿಯವ್ಯಕ್ತಿಗಳ ಮರಣ ನಂತರದ ಪರೋಕ್ಷವಿನಯ ಪ್ರಸಂಗಗಳಲ್ಲಿಯೂ ಈ ಕನ್ಯಾದಾನ ಕೈಗೊಳ್ಳುತ್ತಿದ್ದಂತೆ ಕಂಡು ಬರುತ್ತಿದೆ. ಚಾಗಲದೇವಿಯು ಬಳ್ಳಿಗಾವೆಯಲ್ಲಿ ಚಾಗಲೇಶ್ವರ ದೇವಾಲಯ ನಿರ್ಮಿಸಿದ ಸಂದರ್ಭದಲ್ಲಿ ಕನ್ಯಾದಾನ ಕೈಗೊಂಡಿದ್ದಾಳೆ.[650] ರೆಬ್ಬಕಬ್ಬೆ ಎಂಬಾಕೆ ತನ್ನ ತೊತ್ತು ಮಾಚಬ್ಬೆಯನ್ನು ಸಕಳೇಶ್ವರ ದೇವರಿಗೆ ದಾನ ಮಾಡಿದ್ದಾಳೆ.[651] 'ತೊತ್ತು' ಎಂಬುದು ಸೂಳೆಗಾರಿಕೆಯಂತಹ ಮತ್ತೊಂದು ಅನಿಷ್ಠ ಸಂಪ್ರದಾಯ. ಒಮ್ಮೆ ಒಂದು ಹೆಣ್ಣನ್ನು ತೊತ್ತಾಗಿ ಪಡೆದರೆ ಅವಳನ್ನು ಕೊಂಡ ಒಡೆಯರಿಗೆ ಅವಳ ಮೇಲೆ ಸಂಪೂರ್ಣ ಅಧಿಕಾರವಿರುತ್ತಿತ್ತು. ಅವರು ತಮ್ಮ ತೊತ್ತನ್ನು ಇನ್ನೊಬ್ಬರಿಗೆ ಕಾಣಿಕೆಯಾಗಿಯೂ ಕೊಡಬಹುದಿತ್ತು. ಇಲ್ಲವೆ ಮಾರಬಹುದಿತ್ತು. ಅಂತೆಯೇ ರೆಬ್ಬಕಬ್ಬೆ ತನ್ನ ಪೂರ್ಣ

ಸ್ವಾಮ್ಯವನ್ನು ಬಳಸಿ ದೇವಸ್ಥಾನದ ಕೆಲಸ ಕಾರ್ಯಗಳಿಗೆ ಮಾಚಬ್ಬೆಯನ್ನು ದಾನವಾಗಿ ಒಪ್ಪಿಸಿದ್ದಾಳೆ.

ಪತಿ ಯಾವುದೋ ಸಂತೋಷದ ಸಂದರ್ಭದಲ್ಲಿ ತನ್ನ ಪತ್ನಿಗೆ (ಕನ್ಯೆಗೆ) ಕೊಡುವ ದಾನವನ್ನು 'ಕನ್ಯಾದಾನ'ವೆಂದು ತಳಂಗೆರೆಯ ಶಾಸನ ಕರೆದಂತಿದೆ. ಇದರಲ್ಲಿ ಗಂಡ ಚಾಲುಕ್ಯ ಚಕ್ರವರ್ತಿ ಜಯಸಿಂಹನಿಂದ ರಾಣಿ ಮೊಚಬ್ಬರಸಿ 'ಕನ್ಯಾದಾನ'ವಾಗಿ ಪುತ್ತೂರು ನೆರೆಯ ಭೂಮಿಯನ್ನು ಪಡೆದ ವಿಷಯವಿದೆ.[652]

ಮದುವೆ ಸಂದರ್ಭದಲ್ಲಿ ವರನಿಗೆ ಕನ್ಯಾದಾನ ಮಾಡುವುದು ಸಾಮಾನ್ಯ ವಿಷಯ. ಪ್ರಾಚೀನ ಕಾಲದಿಂದಲೂ ಇಂದಿನವರೆಗೂ ಈ ಪದ್ಧತಿ ಅವಿಚ್ಛಿನ್ನವಾಗಿ ನಡೆದುಕೊಂಡು ಬಂದಿದೆ. ದೇವಾಲಯಕ್ಕೆ ಸ್ಥಾನಪತಿಗಳ ಪಾದಗಳನ್ನು ತೊಳೆದು ದಾನ ಬಿಡುವುದು ದಾನ ಪದ್ಧತಿಯಲ್ಲಿನ ಒಂದು ಕ್ರಮ. ಅಂತೆಯೇ ಕನ್ಯಾದಾನ ಮಾಡುವಾಗ ಕನ್ಯೆಯ ತಂದೆ ಎಷ್ಟೇ ದೊಡ್ಡವನಾಗಿದ್ದರೂ ಕನ್ಯಾದಾನ ಸ್ವೀಕರಿಸುವ ಅಳಿಯನ ಪಾದತೊಳೆದು ಧಾರೆಯೆರೆಯುವುದನ್ನು ಇಂದಿಗೂ ಕಾಣುತ್ತೇವೆ. ಇದು ದಾನಿ ಎಷ್ಟೇ ದೊಡ್ಡವನಾಗಿದ್ದರೂ ಪ್ರತಿಗ್ರಹಿಯನ್ನು ಭಕ್ತಿಗೌರವಗಳಿಂದ ಕಂಡು ಅವನನ್ನು ಪೂಜಿಸಿ, ದಾನ ನೀಡುವ ವಿಶೇಷತೆಯನ್ನು ಪ್ರತಿಬಿಂಬಿಸುತ್ತದೆ. ಕಲ್ಯಾಣ ಚಾಲುಕ್ಯ ಚಕ್ರೇಶ್ವರ ಆರನೆಯ ವಿಕ್ರಮಾದಿತ್ಯನು ತನ್ನ ಮಾಂಡಳಿಕ ಕದಂಬ ಎರಡನೆಯ ಜಯಕೇಶಿಗೆ ತನ್ನ ಮಗಳಾದ ಮೈಳಲದೇವಿಯನ್ನು ಧಾರೆಯೆರೆಯುವಾಗಿನ ಈ ಸನ್ನಿವೇಶನವನ್ನು ಶಾಸನವೊಂದು ಹೀಗೆ ವರ್ಣಿಸಿದೆ.

**"ವಿಭೂತಿಯಂ ಧರಿಸಿ ಹೇಮನಗೇಂದ್ರಮೆ ಮುಂದೆ ಬಂದು ನಿಂ**
**ವಂದದಿನಪ್ಪುಕೆಯ್ದು ಮಣಿಮಂಡಪದೊಳ್ಪದ ಪದ್ಮಮಂನಿಜಾ**
**ನಂದದೆ ಕರ್ಚ್ಚಿ ಪೂರ್ಣಕಳಶೋಜ್ಜಳಧಾರೆ ವಿರಾಜಿಸಲ್ಕೆ ತಾಂ**
**ನನ್ದನೆಯಂ ಕುಮಾರಕ ಶಿಖಾಮಣಿಗಿತ್ತನಿಳಾತಳೇಶ್ವರಂ ॥"[653]**

'ಮಾವನಾದ ವಿಕ್ರಮಾದಿತ್ಯನು ವಿಭೂತಿಯನ್ನು ಧರಿಸಿಕೊಂಡು ಹೇಮಪರ್ವತದಂತೆ ನಡೆದುಬಂದು, ವಿವಾಹ ಮಂಟಪದಲ್ಲಿ ಕುಳಿತ ಅಳಿಯನ ಪಾದಗಳನ್ನು ತೊಳೆದು, ಮಗಳನ್ನು ಸಂತೋಷದಿಂದ ಧಾರೆಯೆರೆದನೆಂದು' ಈ ಪದ್ಯ ಹೇಳುತ್ತದೆ. ಇದೇ ರೀತಿ "ನಿಜ ಪ್ರಧಾನ ದಂಡನಾಥ ಪುತ್ರಿಯಂ ಕನ್ಯಾರತ್ನಮಂ ತಂದು ವಿಷ್ಣುವರ್ಧನದೇವಂ ತಾನೆ ಕನಕಳಶನನೆತ್ತಿ ಕೈನೀರೆರೆದು ಕನ್ಯಾದಾನ" ಮಾಡುವುದರ ಮೂಲಕ ಬಿಟ್ಟಿಯಣ್ಣನ ವಿವಾಹವನ್ನು ನೆರವೇರಿಸಿದನೆಂಬ ಸಂಗತಿಯನ್ನು ಬೇಲೂರಿನ ಶಾಸನ ತಿಳಿಸುತ್ತದೆ.[654] ಚಕ್ರವರ್ತಿಯಾದವನು ಮಾಂಡಳಿಕನಾದವನ ಕಾಲನ್ನು ತೊಳೆಯುವುದೆಂದರೆ ಅದು ಬೇರೆ ಸಂದರ್ಭದಲ್ಲಿ ಸಾಧ್ಯವೇ ? ಹಿರಿಯವನಾದ ಮಾವನು ಅಳಿಯನ ಪಾದಪೂಜೆ ಮಾಡುವುದು ಬೇರೆ ಇನ್ನಾವುದೇ ಸಂದರ್ಭದಲ್ಲಿ ಸಾಧ್ಯವೇ ? ಅಂಥ ಒಂದೇ ಒಂದು

ಸಂದರ್ಭ ಎಂದರೆ, ಕನ್ಯಾದಾನ ಮಾಡುವಂಥಹ ಕಾಲ ಮಾತ್ರ. ಪ್ರಾಚೀನರ ದೃಷ್ಟಿಯಲ್ಲಿ ದಾನದ ವಿಶೇಷವೇ ಅಂಥದ್ದು! ದಾನ ಮಾಡುವವನು ಎಂಥವನೇ ಆಗಿದ್ದರೂ ದಾನ ಸ್ವೀಕರಿಸುವವನು ವಾಸ್ತವದಲ್ಲಿ ದಾನಿಗಿಂತ ಶ್ರೇಷ್ಠ ಎಂಬ ಭಾವನೆ.

## ೪.೬.೯ ಮಹಾದಾನಗಳು :

ಕಲ್ಯಾಣ ಚಾಲುಕ್ಯರ ಕೆಲವು ಶಾಸನಗಳು ಮಹಾದಾನಗಳನ್ನು ಮಾಡಿದ್ದನ್ನು ಉಲ್ಲೇಖಿಸುತ್ತವೆ. ಯಜ್ಞಯಾಗಗಳನ್ನು ಮಾಡಿದಾಗ, ಯುದ್ಧಗಳಲ್ಲಿ ವಿಜಯಿಗಳಾದಾಗ ಮತ್ತು ಇತರ ವಿಶೇಷ ಸಂದರ್ಭಗಳಲ್ಲಿ ಚಕ್ರವರ್ತಿಗಳು ಮಹಾದಾನಗಳನ್ನು ಮಾಡುತ್ತಿದ್ದರೆಂದು ಕಾಣಿಸುತ್ತದೆ. ಮಹಾದಾನ ಎಂದರೆ ಷೋಡಷದಾನಗಳನ್ನು ನೀಡುವುದೇ ಆಗಿದೆ. ಅಂದರೆ ಹದಿನಾರು ವಿಧದ ಎಲ್ಲ ದಾನಗಳನ್ನು ನೀಡುವುದು. ಕೆಲವು ಮಹಾದಾನಗಳನ್ನು ಮಾಡಿದ್ದನ್ನು ಹೇಳುವಾಗ ಬೇರೆ ಬೇರೆ ಉದ್ದೇಶಗಳಿಗೆ ಬೇರೆ ಬೇರೆ ದಾನಗಳನ್ನು ನೀಡಿದ ವಿವರ ಹೇಳಲಾಗಿದೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಯಜ್ಞ ಯಾಗಗಳನ್ನು ಮಾಡುತ್ತಿದ್ದರೆಂಬುದಕ್ಕೆ ಉಲ್ಲೇಖಗಳಿವೆ. ಇಮ್ಮಡಿತೈಲಪನು ಅಧಿಕಾರವಹಿಸಿಕೊಂಡ ಮೊದಲವರ್ಷದಲ್ಲಿಯೇ ಬ್ರಹ್ಮಾಂಡಕೃತು ಯಜ್ಞವನ್ನು ಮಾಡಿ ಹಲವು ಬ್ರಾಹ್ಮಣರಿಗೆ ದಾನಗಳನ್ನು ನೀಡಿದ್ದಾನೆ.[655] ಆರನೆಯ ವಿಕ್ರಮಾದಿತ್ಯನು ಸೋಮಯಾಗವನ್ನು ಮಾಡಿದ್ದ ಉಲ್ಲೇಖ ಕವಲೂರು ಶಾಸನದಲ್ಲಿದೆ.[656]

ಆರನೆಯ ವಿಕ್ರಮಾದಿತ್ಯನು ಕ್ರಿ.ಶ. ೧೧೦೨ರ ಉತ್ತರಾಯಣ ಸಂಕ್ರಮಣದಲ್ಲಿ ಹಲವು ಮಹಾದಾನಗಳನ್ನು ಮಾಡುತ್ತಿರುವಾಗ ಪಿರಿಯರಸಿ ಚಂದಲ ದೇವಿಯರ ಬಿನ್ನಹದ ಮೇರೆಗೆ ಮೊರಂಬ ೯೪ರ ಬಳಿಯ ಅಗ್ರಹಾರ ರುದ್ರವಾಡಿಯನ್ನು ಅಲ್ಲಿನ ಕೇಶವದೇವರಿಗೆ ತ್ರಿಭೋಗಾಭ್ಯಂತರಸಿದ್ಧಿ ಸರ್ವನಮಸ್ಯವಾಗಿ 'ಉಭಯ ಸಾಮ್ಯಕ್ಕಂ ಕಾಣಿ ವಿಶುದ್ಧಿಯೊಳಗಾಗಿ ಸರ್ವ್ವಾಯಶುದ್ಧಿ ಖಂಡದಾನ'ವಾಗಿ ದಾನ ಮಾಡಿದ್ದಾನೆ.[657] ಅದರ ಜೊತೆಗೆ ೧೦೨೦ ಗದ್ಯಾಣ ಪೊನ್ನನ್ನು ನೀಡಿದ್ದಾನೆ. ಇದೇ ಸಂದರ್ಭದಲ್ಲಿ ವಿಕ್ರಮಾದಿತ್ಯನ ಮಹಾಮಂಡಳೇಶ್ವರ ಮಾಗರಸರ ಮಗ ಕಂಬರಸ, ದುಮ್ಮರಸ ಮತ್ತು ಅವನ ಮಕ್ಕಳು ಸೇರಿ ರುದ್ರವಾಡಿಯ ಪ್ರಭು ವಾಸುದೇವ ಭಟ್ಟೋಪಾಧ್ಯಾಯರಿಗೆ, ಅಲ್ಲಿಯ ಐವತ್ತೆರಡು ಮಹಾಜನರಿಗೆ ಕೇಶವದೇವರಿಗೆ ತನ್ನ ಕೊಡಗೆಯ ಖುಜ್ಜರಿಗೆಯ ಸೀಮೆಯ ೩೦೦ ಮತ್ತರು ಭೂಮಿಯನ್ನು ಮಾಣಿಕೇಶ್ವರನ ಕೋಲಿನಿಂದ ಅಳೆದು ನೀಡಿದ್ದಾನೆ. ಅದರ ಜೊತೆಗೆ ಒಂದು ಮನೆಯನ್ನು, ಮನೆಯೂರ ಸಾಮ್ಯವನ್ನು ಐದುನೂರು ಗದ್ಯಾಣ ಪೊನ್ನ ಕ್ರಯದಾನವಾಗಿ ಕೊಂಡು ದಾನಮಾಡಿದ್ದಾನೆ. ಕುಳಗೇರಿ ಶಾಸನವು ಕ್ರಿ.ಶ. ೧೧೦೫ರಲ್ಲಿ ತ್ರಿಭುವನ ಮಲ್ಲದೇವನ ರಾಣಿ ದಾನವಿನೋದೆ ಮಾಳಲದೇವಿಯು ತುಲಾಪುರ ತಡಿಯಲ್ಲಿ ಮಹಾದಾನಗಳನ್ನು ಮಾಡಿದಳೆಂದು ಉಲ್ಲೇಖಿಸಿದೆ.[658] ಮುದಗಡ ಶಾಸನವು ಆರನೆಯ ವಿಕ್ರಮಾದಿತ್ಯನು ಮಹಾದಾನಗಳನ್ನು

ಮಾಡಿದನೆಂದು ಹೇಳಿದೆ.[659] ರಾಜಕುಮಾರ ಸೋಮೇಶ್ವರನು (೨ನೇ ಸೋಮಶ್ವರ) ಗುಡಪರ್ವತ, ಶರ್ಕರಪರ್ವತ, ಲವಣಪರ್ವತ ಮತ್ತು ಗೋಸಹಸ್ರ ಮೊದಲಾದ ಮಹಾದಾನಗಳನ್ನು ಮಾಡಿದ ವಿಷಯ ಕ್ರಿ.ಶ. ೧೧೧೦ರ ಕೊಲನಪಾಕ ಶಾಸನದಲ್ಲಿದೆ.[660] ಅದೇ ರೀತಿಯಾಗಿ ಇನ್ನೂ ಹಲವು ಮಹಾದಾನಗಳಾದ ಗೋಸಹಸ್ರದಾನ[661] (ಸಾವಿರ ಆಕಳುಗಳನ್ನು ದಾನವಾಗಿ ಕೊಡುವುದು), ತುಲಾಪುರಷದಾನ[662] (ಒಬ್ಬ ವ್ಯಕ್ತಿಯನ್ನು ಮುತ್ತುರತ್ನಗಳು ಅಥವಾ ಇತರ ಬೆಲೆ ಬಾಳುವ ವಸ್ತುಗಳೊಡನೆ ತೂಗಿ ಅವನ ಭಾರದ ಆ ವಸ್ತುಗಳನ್ನು ದಾನವುದು), ಹಿರಿಣ್ಯಗರ್ಭದಾನ[663]– (ಚಿನ್ನದಿಂದ ಮಾಡಿದ ಗರ್ಭವನ್ನು ಸಕಲ ಸಂಸ್ಕಾರದೊಂದಿಗೆ ದಾನ ಮಾಡುವುದು).

ಮುಂತಾದ ಮಹಾದಾನಗಳನ್ನು ಮಾಡಿದ ವಿಷಯಗಳು ಶಾಸನಗಳಲ್ಲಿ ಉಕ್ತವಾಗಿವೆ. ಆದರೆ ಅವುಗಳ ಪೂರ್ಣವಿವರಗಳು ಲಭ್ಯವಾಗುವುದಿಲ್ಲ. ಚಕ್ರವರ್ತಿಗಳು ಮತ್ತು ಅವರ ಸಂಬಂಧಿಕರು ನೀಡಿದ ದಾನಗಳನ್ನು ಹೇಳುವಾಗ ಮಾತ್ರ 'ಪಲವು ಮಹಾದಾನಂಗಳಂ ಮಾಡುವ ಕಾಲದಲ್ಲಿ' ಎಂದು ಬಳಸಲಾಗಿದೆ.[664] ಮಾಂಡಳಿಕರಾಗಲಿ, ಸಾಮಂತರಾಗಲಿ ಎಷ್ಟೇ ಪ್ರಮಾಣದಲ್ಲಿ ದಾನಗಳನ್ನು ನೀಡಿದ್ದರೂ ಅವುಗಳಿಗೆ ಮಹಾದಾನಗಳೆಂದು ಹೆಸರಿಸುವುದು ಅಧ್ಯಯನದ ವ್ಯಾಪ್ತಿಯಲ್ಲಿ ಕಂಡುಬರುವುದಿಲ್ಲ.

## ೪.೬.೧೦ ಇತರ ದಾನಗಳು

ಮೇಲೆ ವಿವರಿಸಿದ ದಾನಗಳಲ್ಲದೆ ಕಲ್ಯಾಣಚಾಲುಕ್ಯರ ಕಾಲದಲ್ಲಿ ಇನ್ನೂ ಕೆಲವು ದಾನಗಳನ್ನು ನೀಡಿದ ವಿಷಯಗಳು ಶಾಸನಗಳಲ್ಲಿವೆ. ಆದರೆ ಉಳಿದವುಗಳಿಗೆ ಹೋಲಿಸಿದಾಗ ಅವುಗಳ ಸಂಖ್ಯಾಪ್ರಮಾಣ ಕಡಿಮೆ ಎಂದೇ ಹೇಳಬೇಕು. ಅಪರೂಪಕ್ಕೊಂದು ಕೆಲವು ಶಾಸನಗಳಲ್ಲಿ ಸಿಗುತ್ತವೆ. ಇತರ ದಾನಗಳಲ್ಲಿ ಗೋದಾನ, ವಸ್ತ್ರದಾನ, ಆಭರಣದಾನ, ಶಾಸ್ತ್ರದಾನ, ಔಷಧದಾನ, ಜೋಳದಾನ, ಪದಾರ್ಥ ಹಾಗೂ ಪಾನೀಯಗಳದಾನ, ಎಲೆದಾನ, ಅಂಗಡಿದಾನ, ಸುವರ್ಣದಾನ, ಡೋಣಿದಾನ, ಅಶ್ವದಾನ ಇತ್ಯಾದಿಗಳ ಕೆಲವು ಉಲ್ಲೇಖಗಳನ್ನು ಕಾಣುತ್ತೇವೆ.

ಉಳ್ಳವರು ಕೆರೆಕಟ್ಟಿಸಿದ್ದಾರೆ; ದೇವಾಲಯ ನಿರ್ಮಿಸಿದ್ದಾರೆ; ಸಾಕಷ್ಟು ಭೂಮಿ, ಹಣವನ್ನು ದಾನಮಾಡಿದ್ದಾರೆ. ಆದರೆ ಅದೆಲ್ಲವೂ ಶಕ್ಯವಾಗದ ಸಾಮಾನ್ಯ ಜನರು ಪಡಿಯಷ್ಟು ಅಕ್ಕಿಯನ್ನೋ, ಹಿಡಿಯಷ್ಟು ಸಾಸಿವೆಯನ್ನೋ ದಾನ ಮಾಡಿದ್ದಾರೆ. ಯಾರು ಎಷ್ಟೇ ದಾನ ಮಾಡಿದರೂ ದಾನ ಪದ್ಧತಿಯಲ್ಲಿ, ಯಾವುದೇ ರೀತಿಯ ದಾನ ತುಚ್ಛವೆನಿಸಲಾರದು. ಬದಲಾಗಿ ಆ ಜನರ ಕೊಡುವ ಔದಾರ್ಯ, ಸಮಾಜಕ್ಕೆ ತನ್ನನ್ನು, ತನ್ನದನ್ನು ವಿನಿಯೋಗಿಸಬೇಕೆಂಬ ಹಂಬಲ ಇದರಿಂದ ಪ್ರಕಟವಾಗಿದೆ.

**ಗೋದಾನ** : ನೂರಾರು ಶಾಸನಗಳಲ್ಲಿ ಶಾಪಾಶ್ರಯವನ್ನು ಹೇಳುವಾಗ ದನಗಳನ್ನು, ದಾನಶಾಸನಗಳನ್ನು ರಕ್ಷಿಸುವವರಿಗೆ 'ಸಾವಿರ ಕವಿಲೆಗಳ ದಾನ ಮಾಡಿದ ಪುಣ್ಯಮಕ್ಕುಂ' ಎಂದು ಗೋದಾನದ ಮಹತ್ವವನ್ನು ಹೇಳಲಾಗಿದೆ. ರಾಷ್ಟ್ರಕೂಟರ ಕಾಲಕ್ಕೆ ಸಂಬಂಧಿಸಿದ 'ಗೋಸಾಸ' (ಗೋಸಹಸ್ರ) ದಾನಶಾಸನಗಳು ತಕ್ಕ ಮಟ್ಟಿಗೆ ಲಭಿಸುತ್ತವೆ. ಆದರೆ ಕಲ್ಯಾಣ ಚಾಲುಕ್ಯರ ಕಾಲದಲ್ಲಿನ ಶಾಸನಗಳು ಬಹಳ ಸಂಖ್ಯೆಯಲ್ಲಿ ಗೋದಾನ ಮಾಡಿದ್ದನ್ನು ಹೇಳುವುದಿಲ್ಲ. ಕೆಲವು ಶಾಸನಗಳು 'ಹೇಮದಾನ, ಗೋದಾನ ಕನ್ಯಾದಾನಗಳನ್ನು ಮಾಡಿದರೆಂಬುದನ್ನಷ್ಟೇ ಹೇಳುತ್ತವೆ.[665]

**ಸುವರ್ಣದಾನ** : ಸುವರ್ಣದಾನ ಕುರಿತಾಗಿಯೂ ಉಲ್ಲೇಖಗಳು ಕಡಿಮೆ ಇವೆ. ಆದರೆ ಕಲ್ಯಾಣ ಚಾಲುಕ್ಯರ ಕಾಲದಲ್ಲಿನ 'ಗದ್ಯಾಣ' ನಾಣ್ಯಗಳು ಚಿನ್ನದ್ದು ಆಗಿದ್ದರಿಂದ ಪೊನ್ನಗದ್ಯಾಣ ನೀಡಿದ ಅನೇಕ ವಿವರಗಳು ಲಭಿಸುತ್ತವೆ. ಅವುಗಳನ್ನು ಹಣದಾನದಲ್ಲಿ ಚರ್ಚಿಸಲಾಗಿದೆ. ಆದಾಗ್ಯೂ ಕ್ರಿ.ಶ. ೧೧೦೩ರ ಸೂಡಿಯ ಶಾಸನ ಆರನೆಯ ವಿಕ್ರಮಾದಿತ್ಯನ ಅಕ್ಕಸಾಲಿಗನಾದ ಉತ್ತವೋಜನು ಸೂಡಿಯ ಕಮ್ಮಟೇಶ್ವರ ದೇವರ ಸೊಡರೆಣ್ಣೆಗೆ ಸುವರ್ಣದಾನ ಮಾಡಿದ್ದನ್ನು ತಿಳಿಸುತ್ತದೆ.[666] ಮುಳಗುಂದ ಪ್ರದೇಶದ ಸುಂಕವೆರ್ಗಡೆ ಮೇದಿಮಯ್ಯನು ಅಲ್ಲಿನ ಭೀಮೇಶ್ವರ ದೇವರಿಗೆ ಸುವರ್ಣದಾನ ಮಾಡಿದ್ದಾನೆ.[667] ಯಲಿಶಿರೂರಿನ ಭೋಗೇಶ್ವರ ದೇವರಿಗೆ ೮ ಜನ ಗೌಡರು, ೬೦ ಕುಟುಂಬಗಳು, ೫೦೦ ನಖರರು ಅಲ್ಲದೇ ಡೋಣಿ ಸಾಸಿರ್ವರು, ಉಗುರ ಮುನ್ನೂರ್ವರು ಕೂಡಿ ಭೂಮಿ, ಸುವರ್ಣ ಮತ್ತು ಸುಂಕದಿಂದ ಬಂದ ಆದಾಯವನ್ನು ದಾನ ನೀಡಿದ್ದಾರೆ.[668] ಆಲಂಪುರದ ಬ್ರಹ್ಮೇಶ್ವರ ದೇವರ ತಳಾರ ಬಮ್ಮೆಯನಾಯಕನ ಮಗಳು ಚಾಕನು ಎಂಬುವಳು ಬ್ರಹ್ಮಪುರಿಗೆರೆಯ ಚಿನ್ನಮಾಧವದೇವರಿಗೆ ಸೇವೆಗಾಗಿ ಸುವರ್ಣಾಭರಣ ದಾನ ಮಾಡಿದ್ದಾಳೆ.[669]

**ಜೋಳದಾನ** : ಕ್ರಿ.ಶ. ೧೧೧೨ರ ಗೋಟ್ರ್ಯಾ ಶಾಸನವು ಹೆಗ್ಗಡೆ ಸಾವಾಸಿ ಮಾಣಿಭಟ್ಟನು ಭತ್ತುವೇಂಟೆಯ ಕುಂಬೇಶ್ವರ ದೇವರ ನೈವೇದ್ಯಕ್ಕೆ ಮತ್ತು ಸೊಡರೆಣ್ಣೆಗೆ ದೇವಸವಳ ಮಂಡವದಲ್ಲಿ ಒಂದುಹೇರು ಜೋಳವನ್ನು ದಾನ ನೀಡಿದ ವಿಷಯವನ್ನು ಪ್ರಸ್ತಾಪಿಸುತ್ತದೆ.[670]

**ಹಟ್ಟಿದಾನ** : ದಂಡನಾಯಕ ಕೇಶಿಮಯ್ಯ ಎಂಬುವವನು ಬಳ್ಳಿಗಾವೆಯ ಕೇದಾರೇಶ್ವರ ದೇವಾಲಯಕ್ಕೆ ಕೆಲವು ಹಟ್ಟಿಗಳನ್ನು ದಾನ ಮಾಡಿದ್ದಾನೆ.[671]

**ಭತ್ತದಾನ** : ಬರದೂರ ನಗರದ (ಬೀದರ) ಬಸದಿಯ ಶಾಂತನಾಥ ದೇವರಿಗೆ ವಿವಿಧ ಉದ್ದೇಶಗಳಿಗಾಗಿ ಅಲ್ಲಿನ ವ್ಯಾಪಾರಿಗಳು ತಾವು ಮಾರುವ ವಸ್ತುಗಳಾದ ಧಾನ್ಯ, ಉಪ್ಪು, ಎರಡು ಬಳ್ಳ ಭತ್ತಗಳನ್ನು ದಾನಮಾಡಿದ್ದಾರೆ.[672] ಹೊಸೂರಿನ ಬಡಿಗ ಕಲ್ಲೋಜನು ಮಾರಕೇಶ್ವರ ದೇವರ ಪೂಜೆಗಾಗಿ ತನ್ನ ವೃತ್ತಿಯ ಕೂಲಿಯಿಂದ ಬಂದ ಅಕ್ಕಿಯನ್ನು ದಾನ ನೀಡಿದ್ದಾನೆ.[673]

**ಎಲೆದಾನ :** ಎಲೆದಾನಕ್ಕೆ ಸಂಬಂಧಿಸಿದಂತೆ ಅನೇಕ ಉಲ್ಲೇಖಗಳು ಸಿಗುತ್ತವೆ. ವ್ಯಾಪರಸ್ಥರು ದೇವಾಲಯಗಳಿಗೆ ಎಲೆ ದಾನ ಬಿಟ್ಟಿದ್ದಾರೆ. ಉದಾಹರಣೆಗೆ ಅಯ್ವತ್ತೊಕ್ಕಲುಶೆಟ್ಟಿಯರು ಶ್ರೀ ಸ್ವಯಂಭೂ ಕಾಳಕಾಳೇಶ್ವರ ದೇವರಿಗೆ ಎಲೆದಾನವನ್ನು ಮಾಡಿದ್ದಾರೆ.[674] ಎಲೆಬಳ್ಳಿಗಳ ತೋಟಗಳನ್ನೇ ದಾನನೀಡಿದ ಬಗ್ಗೆ ತೋಟದಾನದಲ್ಲಿ ಚರ್ಚಿಸಲಾಗಿದೆ.

**ವಸ್ತ್ರದಾನ :** ಕ್ರಿ.ಶ. ೧೧೧೦ಳರ ಲಕ್ಕುಂಡಿ ಶಾಸನದಲ್ಲಿ ಸಂಕಮಯ್ಯ ಮತ್ತು ಮಹಾದೇವಭಟ್ಟರು ತಾವು ಅಕ್ಕಸಾಲಿಗರಿಗೆ ದೀಪಾವಳಿ ಸಮಯದಲ್ಲಿ ಉಡಲು ಬಟ್ಟೆಗಳನ್ನು ದಾನ ನೀಡಿದ್ದಾರೆ.[675] ಬೆಳ್ಳಿಗಮ್ಮಟದವರು ಅಜ್ಜಿಯರ ವಸ್ತ್ರದಾನಕ್ಕೆ ಕೆಲವು ಹಣವನ್ನು ದಾನ ಮಾಡಿದ್ದಾರೆ.[676]

**ಡೋಣಿದಾನ :** ತ್ರಿಭುವನಮಲ್ಲದೇವನು ಆರಾಧಿಸುತ್ತಿದ್ದ ಸಕಲ ಪ್ರಕಾಶ ಭಟ್ಟಾರಕರ ಅನುಯಾಯಿ ನರಸಿಂಘಭಟ್ಟರು ಪೋಸವೂರಿನ ನಾರಾಯಣ ದೇವರ ರಂಗಭೋಗಕ್ಕೆ ಮೂರು ಡೋಣಿಗಳನ್ನು ದಾನ ನೀಡಿದ್ದಾರೆ. ಶಾಸನದಲ್ಲಿ 'ಡೋಣಿ' ಎಂಬುದಕ್ಕೆ ವಿವರಣೆ ನೀಡಲಾಗಿಲ್ಲ. ಬಹುಶಃ ಹೊಸೂರ ಕೆರೆಗೆ ಈ ಡೋಣಿಗಳನ್ನು ನೀಡಿರಬಹುದು. ಅವುಗಳಿಂದ ಬಂದ ಆದಾಯವನ್ನು ರಂಗಭೋಗಕ್ಕೆ ಉಪಯೋಗಿಸಿಕೊಂಡಿರಬಹುದೆನಿಸುತ್ತದೆ.[677]

**ಅಂಗಡಿದಾನ :** ಕೆಲವು ಶಾಸನಗಳು ದೇವಾಲಯಗಳಿಗೆ ಅಂಗಡಿಗಳನ್ನು ದಾನ ಮಾಡಿದ ವಿಷಯವನ್ನು ತಿಳಿಸುತ್ತವೆ. ದೇವಾಲಯಗಳಿಗೆ ಹೊಂದಿಕೊಂಡು ವ್ಯಾಪಾರಿ ಮಳಿಗೆಗಳು ಇರುತ್ತಿದ್ದವು. ಅವುಗಳಿಂದ ದೇವಾಲಯಕ್ಕೆ ಆದಾಯ ಬರುತ್ತಿತ್ತು. ಅಲ್ಲದೇ ದೇವತಾರ್ಚನೆಗೆ ಬೇಕಾದ ಕುಂಕುಮ, ವಿಭೂತಿ, ಪುಷ್ಪ, ಗಂಧ, ಅರಿಷಿಣ, ಕಾಯಿ, ಕರ್ಪುರ ಮುಂತಾದ ಸಾಮಗ್ರಿಗಳನ್ನು ಮಾರಲು ದೇವಾಲಯಕ್ಕೆ ಹೊಂದಿಕೊಂಡು ಅಂಗಡಿಗಳಿರುವುದನ್ನು ಇಂದಿಗೂ ಕಾಣುತ್ತೇವೆ. ಈ ಉದ್ದೇಶಕ್ಕಾಗಿ ದೇವಾಲಯಗಳಿಗೆ ಅಂಗಡಿಗಳನ್ನು ದಾನ ಮಾಡಿರಬಹುದು. ಲಕ್ಕುಂಡಿಯ ಸಾಸಿರ ಮಹಾಜನರು ಸರ್ವ ಸುಂಕಗಳನ್ನು ತೆಗೆದು ಹಾಕಿ ಅಲ್ಲಿಯ ನನ್ನೇಶ್ವರ ದೇವರಿಗೆ ೨ ಅಂಗಡಿಗಳನ್ನು ದಾನ ಮಾಡಿದ್ದಾರೆ.[678] ಮಹಾಸಾಮಂತ ದೇವನರಸನು ರೂಗಿಯ ನಗರೇಶ್ವರದೇವರ ಸೇವೆಗೆ ೨ ಅಂಗಡಿಗಳನ್ನು, ೨ ತೋಟ, ೬೦ ಮತ್ತರು ಭೂಮಿ, ಒಂದು ಗಾಣವನ್ನು ದಾನ ಮಾಡಿದ್ದಾನೆ.[679] ಭುವನೈಕಮಲ್ಲದೇವನು ಕ್ರಿ.ಶ. ೧೦೭೫ರಲ್ಲಿ ಮಹಾದಾನಗಳನ್ನು ಮಾಡುವಾಗ ವಿಕ್ರಮಪುರದ ಶ್ರೀ ಸ್ವಯಂಭು ನಗರೇಶ್ವರ ದೇವರ ಮಠದ ಕಾಳಾಮುಖಯತಿ ತತ್ಪುರುಷಪಂಡಿತದೇವರಿಗೆ ಒಂದು ಅಂಗಡಿಯನ್ನು ದಾನಮಾಡಿದ್ದಾನೆ.[680] ಪೆರ್ಗ್ಗಡೆ ಕಾಳಿಮಯ್ಯನು ಮೈಲಾರದ ಸ್ವಯಂಭುದೇವರು ಮತ್ತು ಮೂಲಸ್ಥಾನ ದೇವರಿಗೆ ಭೂಮಿ, ೨ ಮನೆ, ೧ ಅಂಗಡಿಯನ್ನು ನೀಡಿದ್ದಾನೆ.[681]

**ಔಷಧದಾನ :** ಹಲವು ಜೈನ ಶಾಸನಗಳು 'ಅಭಯಾಹಾರ ಬೈಷಜ್ಯ ಶಾಸ್ತ್ರದಾನ' ಎಂದು ಆಹಾರ, ಅಭಯ, ಔಷಧ, ಶಾಸ್ತ್ರ ಮೊದಲಾದ ಚತುರ್ದಾನಗಳನ್ನು ಮಾಡಿದ ಶ್ರಾವಕರನ್ನು ಹೆಸರಿಸುತ್ತವೆ. ಆದರೆ ಇವುಗಳನ್ನು ಯಾರಿಗೆ ಮಾಡಲಾಯಿತು ಎಂಬುದನ್ನು ಸ್ಪಷ್ಟ ಪಡಿಸುವುದಿಲ್ಲ. ಆಹಾರ, ಔಷಧ, ಶಾಸ್ತ್ರದಾನಗಳಿಗೆ ಭೂಮಿಯನ್ನು, ಹಣವನ್ನು ದಾನ ಮಾಡಲಾಗಿದೆ. ದೇವಾಲಯಗಳು ಅನ್ನದಾನ ಕೇಂದ್ರಗಳಾಗಿ, ಸತ್ರಗಳಾಗಿ, ಅರವಂಟಿಗೆಗಳಾಗಿ, ವಿದ್ಯಾಕೇಂದ್ರಗಳಾಗಿ ಮಾತ್ರವೇ ಅಲ್ಲದೇ ಔಷಧ, ಸ್ಥಾನಗಳಾಗಿಯೂ ಕಾರ್ಯ ನಿರ್ವಹಿಸುತ್ತಿದ್ದವು. ದೇವಾಲಯಗಳಲ್ಲಿಯೇ ವೈದ್ಯರು ಇರುತ್ತಿದ್ದರು. ಔಷಧಿಗಳನ್ನು ಅಲ್ಲಿಯೇ ದೊರಕಿಸಲಾಗುತ್ತಿತ್ತು. ಹಲವು ದೇವಾಲಯಗಳನ್ನು ಶಾಸನಗಳು ಭೈಷಜ್ಯಸ್ಥಾನಗಳೆಂದು ಉಲ್ಲೇಖಿಸಿವೆ.[682] ಒಂದನೆಯ ಜಗದೇಕಮಲ್ಲದೇವನ ಮಗ ದಾಸರಸನು ರೂವಿಗೆ ಅಗ್ರಹಾರದ ನಗರೇಶ್ವರ ದೇವಾಲಯದ ತಪೋಧನರ ಆಹಾರ ಮತ್ತು ಔಷಧಿಗಳಿಗಾಗಿ ಭೂಮಿದಾನ ಮಾಡಿದ್ದಾನೆ.[683] ಎಳಮೇಲ ಉತ್ತರೇಶ್ವರ ದೇವರ ಮಠದಲ್ಲಿ ಓದುವ ಮತ್ತು ಕೇಳುವ ತಪೋಧನರಿಗೆ, ವಿದ್ಯಾರ್ಥಿಗಳಿಗೆ ಊಟ, ಬಟ್ಟೆ, ಪಥ್ಯ ಮತ್ತು ಔಷಧಿಗಳಿಗಾಗಿ ಜಯಸಿಂಹದೇವನು ದಾನ ಮಾಡಿದ್ದನ್ನು ಮಾರಸನಹಳ್ಳಿಯ ಶಾಸನ ದಾಖಲಿಸುತ್ತದೆ.[684]

**ಶಾಸ್ತ್ರದಾನ :** ಜೈನರ ಚುತುರ್ವಿಧ ದಾನಗಳಲ್ಲಿ ಶಾಸ್ತ್ರದಾನವೂ ಒಂದು. ಶಾಸ್ತ್ರದಾನ ಎಂದರೆ, ಪುಸ್ತಕಗಳನ್ನು (ಹಸ್ತ ಪ್ರತಿಗಳನ್ನು) ಪ್ರತಿ ಮಾಡಿಸಿ ದಾನ ಮಾಡುವುದು. 'ದಾನ ಚಿಂತಾಮಣಿ' ಎಂದು ಪ್ರಸಿದ್ಧಳಾಗಿದ್ದ ಅತ್ತಿಮಬ್ಬೆಯು ಶಾಸ್ತ್ರದಾನಕ್ಕೆ ಹೆಸರಾಗಿದ್ದಾಳೆ. ರನ್ನನ ಪ್ರಕಾರ, ಅತ್ತಿಮಬ್ಬೆಯ ತಂದೆ ನಾಗಮಯ್ಯನು ಪೊನ್ನನಿಂದ ಶಾಂತಿಪುರಾಣವನ್ನು ಬರೆಯಿಸುತ್ತಾನೆ. ಅತ್ತಿಮಬ್ಬೆಯ ಕಾಲಕ್ಕೆ ಶಾಂತಿಪುರಾಣದ ಪ್ರತಿಗಳು ದುರ್ಲಭವಾಗಿ, ನಾಶವಾಗುವ ಸ್ಥಿತಿಗೆ ಬಂದಾಗ ಅತ್ತಿಮಬ್ಬೆಯು ಶಾಂತಿಪುರಾಣದ ಸಾವಿರ ಪ್ರತಿಗಳನ್ನು ಮಾಡಿಸಿ ದಾನ ಮಾಡುತ್ತಾಳೆ.[685]

**ಪಾದರಕ್ಷೆದಾನ :** ಕೆಲವು ಶಾಸನಗಳು ಪಾದರಕ್ಷೆಗಳನ್ನು ದಾನ ಮಾಡಿದ ವಿಷಯವನ್ನು ತಿಳಿಸುತ್ತವೆ. ಅಳವಂಡಿ ಶಾಸನ ಕರುವ ಗುಬ್ಬಿಮಯ್ಯನು 'ಪಡಲ್ದಾನಂ। ಕನ್ಯಾದಾನಂ। ಕವಿಲೆದಾನಂ। ಬ್ರಾಹ್ಮಣರ್ಗ್ಗೆ ಸಾವಿಯಕಪ್ಪಡಿಗ್ಗಳಂ॥ ನಾನಾದೇಸಿಗಳ್ಗಂ। ಅನಿವಾರಿತಂ ಪಾದರಕ್ಷೆಯಂ ದಾನಂಗೊಟ್ಟಂ।' ಎಂದು ಕನ್ಯಾದಾನ, ಗೋದಾನ, ಪಾದರಕ್ಷೆಗಳದಾನ ಮಾಡಿದ್ದನ್ನು ಉಲ್ಲೇಖಿಸುತ್ತದೆ.[686]

ಹೀಗೆ ಕಲ್ಯಾಣ ಚಾಲುಕ್ಯರ ಕಾಲದಲ್ಲಿನ ಪ್ರಮುಖ ದಾನಗಳನ್ನು ತಿಳಿಯಬಹುದಾಗಿದೆ. ನಾಲ್ಕನೆಯದಾದ ಈ ಅಧ್ಯಾಯದಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ದಾನ ದತ್ತಿಗಳಿಗೆ ಪ್ರೇರಣೆಗಳು, ಉದ್ದೇಶಗಳು, ಪ್ರಮುಖ ದಾನಗಳನ್ನು ಸಾದ್ಯಂತವಾಗಿ ವಿವರಿಸಲಾಗಿದೆ. ಕಲ್ಯಾಣ ಚಾಲುಕ್ಯರ ದಾನ ದತ್ತಿಗಳ ಒಟ್ಟಾರೆ ಫಲಶೃತಿಯನ್ನು ಮುಂದಿನ ಅಧ್ಯಾಯದಲ್ಲಿ ವಿವರಿಸಲಾಗಿದೆ.

# ಕೊನೆಯ ಟಿಪ್ಪಣಿಗಳು

1. ತಿಪ್ಪೆರುದ್ರಸ್ವಾಮಿ ಎಚ್.- 'ಕನ್ನಡ ಸಂಸ್ಕೃತಿ ಸಮೀಕ್ಷೆ' ಪು. 269
2. S.I.I. XX. 45- ಹಂದರಗಲ್ಲ; ಕ್ರಿ.ಶ. ಹನ್ನೊಂದನೆಯ ಶತಮಾನ
3. ಮೂರನೆಯ ಸೋಮೇಶ್ವರ– 'ಮಾನಸೋಲ್ಲಾಸ' ಸಂಪುಟ. 1 ಪು. 143
4. ಚಿದಾನಂದಮೂರ್ತಿ ಎಂ.– 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಸಂಪುಟ–2 ಪುಟ–46
5. "ನೃಪಸಂಚಿಹಾತಂ ಲೇಖ್ಯಂ ನೃಪಃ ತನ್ನನೃಪೋ ನೃಪ"
   'ಶುಕ್ರನೀತಿ ಸಾರ'. 2. ಪು. 291-3. ಉದ್ಧರಿತ : ಡಾ. ಎಂ. ಚಿದಾನಂದಮೂರ್ತಿ. ಕ.ಶಾ.ಸಾಂ. ಸಂ–1 ಪುಟ–47
6. ಕೌಟಿಲ್ಯ– 'ಅರ್ಥಶಾಸ್ತ್ರ' ಪು. 172, ಸಂ: ಡಿ. ಗಣಪತಿಶಾಸ್ತ್ರಿ.
7. 'ಬೃಹಸ್ಪತಿಸ್ಮೃತಿ'. ಪು. 62-63, ಸಂ: ಕೆ.ವಿ. ರಂಗಸ್ವಾಮಿ ಅಯ್ಯಂಗಾರ
8. "ಪಟೇವ ತಾಮ್ರಪಟ್ಟೇ ವಾ ಸ್ವಮುದ್ರೋಪರಿಚಿಹ್ನಿತಂ
   ಅಭಿಲೇಖ್ಯಾತ್ಮನೋ ವಂಶನಾತ್ಮಸಮಚ ಮಹಿಪತಿಃ॥
   ಪರಿಗ್ರಹಪರಿಮಾಣಂ ದಾನಚ್ಚೇದೋಪವನಾನಂ
   ಸಹಸ್ರಕಾಲ ಸಂಪನ್ನಂ ಶಾಸನಂ ಕಾರಯೇತ್ ಸ್ಥಿರಂ॥"
9. "ದಾನಮಾತ್ರೇಣೈವ ದಾನಫಲೇ ಸಿದ್ದೇ ಶಾಸನಕಾರಣಂ ಭೋಗಾಭಿವೃದ್ಧ್ಯಾಪಲಾತಿಶಲೂರ್ಥಂ"
11. ರಾಜಪುರೋಹಿತ ನಾ.ಶ್ರೀ.– 'ದಾನ ಧರ್ಮ ಪದ್ಧತಿ' ಪು. 17
12. ಕ.ವಿ.ವಿ.ಶಾ.ಸಂ. 7. ಲಿಂಗಸೂರು 32–ಮಸ್ಕಿ; ಕ್ರಿ.ಶ. 1010
13. S.I.I. XX. 18 - ಸವದತ್ತಿ; ಕ್ರಿ.ಶ. 980
14. ಕವಿ.ವಿ.ಶಾ.ಸಂ. 9. 37- ಭೈರನಮಟ್ಟಿ; ಕ್ರಿ.ಶ. 990
15. ಕ.ವಿ.ವಿ.ಶಾ.ಸಂ. 2. ಯಲಬುರ್ಗಾ(ತಾ) ೫೯– ತಳಕಲ್ಲ; ಕ್ರಿ.ಶ.೯೯೧
16. ಕ.ವಿ.ವಿ.ಶಾ.ಸಂ. 2. ಯಲಬುರ್ಗಾ(ತಾ) 37– ಬಳಗೇರಿ; ಕ್ರಿ.ಶ 1002
17. ಹಂ.ಪ.ನಾ.– 'ಸಾಂತರರು ಒಂದು ಅಧ್ಯಯನ' ಪು. 17
18. E.C.VII: BLR 80. ಕ್ರಿ.ಶ. 1095
19. ಕ.ವಿ.ವಿ.ಶಾ.ಸಂ. 5. ಭಾ.2 595– ಕೊರಟೋಲು; ಕ್ರಿ.ಶ. 973
20. ಕ.ವಿ.ವಿ.ಶಾ.ಸಂ.1. 311- ಕಂಚಗಾರ ಬೆಳಗಲ್ಲು; ಕ್ರಿ.ಶ. 981
21. S.I.I. XX. 18 -ಸವದತ್ತಿ; ಕ್ರಿ.ಶ. 980
22. ಕ.ವಿ.ವಿ.ಶಾ.ಸಂ.1. 55–ತೆಕ್ಕಲಕೋಟೆ; ಕ್ರಿ.ಶ. 1020
23. ಕ.ವಿ.ವಿ.ಶಾ.ಸಂ. 9. 16–ಬೇಲೂರು; ಕ್ರಿ.ಶ. 1021
24. ಅದೇ.
25. ಕ.ವಿ.ವಿ.ಶಾ.ಸಂ. 2. ಕೊಪ್ಪಳ(ತಾ) 125–ಕೊಪ್ಪಳ; ಕ್ರಿ.ಶ. 1030
26. 'ಅಜಿತತೀರ್ಥಂಕರ ಪುರಾಣಂ' ಪದ್ಯ ಸಂಪುಟ
27. BKI. No. 52
28. ಕ.ವಿ.ವಿ.ಶಾ.ಸಂ–7. ಮಾನ್ವಿ(ತಾ) 91–ಬಲ್ಲಟಗಿ; ಕ್ರಿ.ಶ. 1031

29. ಕ.ವಿ.ವಿ.ಶಾ.ಸಂ. 2. ಕೊಪ್ಪಳ(ತಾ) 106–ಕೊಪ್ಪಳ; ಕ್ರಿ.ಶ. 1032

30. ಕ.ಜಿ.ಶಾ. ಶಹಾಪುರ(ತಾ)1- ಅಣಬಿ; ಕ್ರಿ.ಶ. 1034

31. S.I.I XX. 24- ಅಡೂರು; ಕ್ರಿ.ಶ. 1034-1035

32. ಪ್ರಸನ್ನಕುಮಾರ ಎಂ.– 'ಮೈಸೂರು ಇತಿಹಾಸದಲ್ಲಿ ದಾನ' ಪು. 23-24

33. ಕ.ಜಿ.ಶಾ. ಶಹಾಪುರ(ತಾ) 11. ದೋರನಹಳ್ಳಿ; ಕ್ರಿ.ಶ. 1017, S.I.I XX. 21 - ಹಲಗೇರಿ; ಕ್ರಿ.ಶ. 1019

34. ಕ.ವಿ.ವಿ.ಶಾ.ಸಂ. 2. ಕೊಪ್ಪಳ(ತಾ) 26– ನರೇಗಲ್ಲ; ಕ್ರಿ.ಶ. 973

35. ಕ.ವಿ.ವಿ.ಶಾ.ಸಂ. 01. 59- ತಳಕಲ್ಲು; ಕ್ರಿ.ಶ. 991

36. ಅದೇ. 24- ಮೊರಿಗೇರಿ; ಕ್ರಿ.ಶ. 1045

37. ಕ.ವಿ.ವಿ.ಶಾ.ಸಂ. 5. ಭಾ. 2. 460–ಆಲಂಪುರ; ಕ್ರಿ.ಶ. 1096

38. ಅದೇ. 607–ಮಿಟ್ಟಪಲ್ಲಿ; ಕ್ರಿ.ಶ. 1098

39. ಅದೇ. 5. ಭಾ. 2. 526–ಚಿಲ್ಲೂರು; ಕ್ರಿ.ಶ. 1096

40. ಕ.ವಿ.ವಿ.ಶಾ.ಸಂ. 2. ಕೊಪ್ಪಳ(ತಾ) 1–ಕವಲೂರು; ಕ್ರಿ.ಶ. 1097

41. ಕ.ವಿ.ವಿ.ಶಾ.ಸಂ. 8. 2–ಭಾಲ್ಕಿ. ಕ್ರಿ.ಶ. 1099

42. ಕ.ಜಿ.ಶಾ. ಚಿತಾಪುರ(ತಾ) 6–ಕರಮಡಗಿ; ಕ್ರಿ.ಶ.1104

43. S.I.I. XX. 34– ಕಲ್ಕೇರಿ; ಕ್ರಿ.ಶ. 1053

44. ಕ.ವಿ.ವಿ.ಶಾ.ಸಂ. 2. ಕೊಪ್ಪಳ(ತಾ) 1- ಕವಲೂರು; ಕ್ರಿ.ಶ. 1097

45. SII. XX. 34– ಕಲ್ಕೇರಿ ಕ್ರಿ.ಶ. 1053

46. ಕ.ವಿ.ವಿ.ಶಾ.ಸಂ. 2. ಕೊಪ್ಪಳ(ತಾ) 1 ಕವಲೂರು. ಕ್ರಿ.ಶ. 1097

47. ಕ.ವಿ.ವಿ.ಶಾ.ಸಂ. 1. 71–ರಂಗಾಪುರ; ಕ್ರಿ.ಶ. 1116

48. S.I.I. XX. 34– ಕಲ್ಕೇರಿ; ಕ್ರಿ.ಶ. 1053

49. S.I.I. XX. 34– ಕಲ್ಕೇರಿ; ಕ್ರಿ.ಶ. 1053, ಕ.ವಿ.ವಿ.ಶಾ.ಸಂ. 2. ಕೊಪ್ಪಳ(ತಾ) 1- ಕವಲೂರು. ಕ್ರಿ.ಶ. 1050

50. ಕ.ವಿ.ವಿ.ಶಾ.ಸಂ. 1. 32– ಕುಡುತಿನಿ; ಕ್ರಿ.ಶ. 976

51. ಕ.ವಿ.ವಿ.ಶಾ.ಸಂ. 1. 136– ಬಾಗಳಿ ಕ್ರಿ.ಶ. 1018

52. ಕ.ವಿ.ವಿ.ಶಾ.ಸಂ. 2. ಕುಷ್ಟಗಿ(ತಾ) 18- ಪುರ; ಕ್ರಿ.ಶ. 1018

53. S.I.I. XX. BKI. IV. 307; ಕ್ರಿ.ಶ.1138

54. ಕ.ವಿ.ವಿ.ಶಾ.ಸಂ. 6. 83– ಅಧಂಪುರ; ಕ್ರಿ.ಶ. 1116

55. ಕ.ವಿ.ವಿ.ಶಾ.ಸಂ. 1. 130– ಬಾಗಳಿ; ಕ್ರಿ.ಶ. 987

56. ಕ.ವಿ.ವಿ.ಶಾ.ಸಂ. 2. ಯಲಬುರ್ಗಾ(ತಾ) 50–ಕುಕನೂರು; ಕ್ರಿ.ಶ. 1005

57. ಕ.ವಿ.ವಿ.ಶಾ.ಸಂ. 1. 68–ಮಾಗಳ ಕ್ರಿ.ಶ. 1116

58. ಕ.ವಿ.ವಿ.ಶಾ.ಸಂ. 2. ಕುಷ್ಟಗಿ(ತಾ) 1–ಮುಕಲಕೇರಿ; ಕ್ರಿ.ಶ 1123

59. ಕ.ವಿ.ವಿ.ಶಾ.ಸಂ. 5. ಭಾ. 2. 509–ಕೊಲನಪಾಕ; ಕ್ರಿ.ಶ. 1125

60. B.K.I. I(i) 63. ಕ್ರಿ.ಶ. 1028; "ಉಪೇಕ್ಷೆಗೆಯ್ಯದವರ ತಾವೆ ಮಾಡಿದ ದಾತಾರರಪ್ಪರ್."

61. ಕ.ವಿ.ವಿ.ಶಾ.ಸಂ. 7. ದೇವದುರ್ಗ(ತಾ) 29– ನಿಲವಂಜಿ; ಕ್ರಿ.ಶ. 1177

62. ಕ.ವಿ.ವಿ.ಶಾ.ಸಂ. ೧. ೭೦– ಸೋಮಲಾಪುರ; ಕ್ರಿ.ಶ. ೧೦೩೦

63. ಕ.ವಿ.ವಿ.ಶಾ.ಸಂ. 1. 27– ಬಲ್ಲಕುಂದೆ; ಕ್ರಿ.ಶ. 1008
"ಇದಂ ಬಲ್ಲಕುನ್ದನಗರ ಮುಬ್ಯಜ ಜಕ್ಕಿಮಾರ್ಯ್ಯ ಶ್ರೀ ಸಿಂಹ
ಮಾರ್ಯ್ಯ ಶ್ರೀಷ್ಠಿ ಪುರಸ್ಸರ ತತ್ಸನ್ತತಿರಾಚನ್ದ್ರಾರ್ಕ್ಕಂ ಪ್ರತಿಪಾಳಯತಿ"

64. ಕ.ಜಿ.ಶಾ. ಶಹಾಪುರ(ತಾ) 18– ಮದ್ದರಕಿ; ಕ್ರಿ.ಶ. 1028

65. K.I. I. 63. ಕ್ರಿ.ಶ. 1026

66. B.K.I. I(i). 63. ಕ್ರಿ.ಶ. 1028

67. E.C. IV. Kp. ೨೩. ಕ್ರಿ.ಶ. 1116

68. ಕ.ವಿ.ವಿ.ಶಾ.ಸಂ. 5. ಭಾ. 2. 604– ಪಟಾನ್‌ಚೆರು; ಕ್ರಿ.ಶ. 1127

69. ಕ.ವಿ.ವಿ.ಶಾ.ಸಂ. 7. ಸಿಂಧನೂರು(ತಾ) 4– ಸಾಲಗುಂದೆ; ಕ್ರಿ.ಶ.ಹನ್ನೆರಡನೆ ಶತಮಾನ

70. ಕ.ವಿ.ವಿ.ಶಾ.ಸಂ. 1. 84– ಹೂವಿನಹಡಗಲಿ; ಕ್ರಿ.ಶ. 1071

71. S.I.I. XX. 51- ಕುಳೇಕುಮಟಗಿ; ಕ್ರಿ.ಶ. 1077

72. ಕ.ವಿ.ವಿ.ಶಾ.ಸಂ. 5. ಭಾ. 2. 387– ಪುಷ್ಪಗಿರಿ; ಕ್ರಿ.ಶ. 1079

73. ಕ.ಜಿ.ಶಾ. ಜೇವರ್ಗಿ(ತಾ) 66– ಯಾತನೂರು; ಕ್ರಿ.ಶ.1080

74. S.I.I. XX. 57- ಹದ್ಲಿ; ಕ್ರಿ.ಶ. 1084

75. ಚಿದಾನಂದಮೂರ್ತಿ ಎಂ.– 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಪು. 57

76. ಕ.ವಿ.ವಿ.ಶಾ.ಸಂ. 1. 84– ಹೂವಿನಹಡಗಲಿ ಕ್ರಿ.ಶ. 1071;
ಕ.ವಿ.ವಿ.ಶಾ.ಸಂ. 5. ಭಾ. 2. 578– ಕೆಲನಪಾಕ ಕ್ರಿ.ಶ.1082; ಅದೇ. 395– ವೇಮಲವಾಡ ಕ್ರಿ.ಶ. ೧೦೮೩

77. ತಿಪ್ಪೇರುದ್ರಸ್ವಾಮಿ ಎಚ್.– 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ' ಪು. 251

78. E.C. VII. sh. 114. ಕ್ರಿ.ಶ. 950

79. S.I.I. IX. i. 125. ಕ್ರಿ.ಶ. 1061

80. E.C. VII. sh. 97. ಕ್ರಿ.ಶ. 1113

81. E.C. II. Hn. 134. C. ಕ್ರಿ.ಶ. 1115 'ಇಕ್ಕತ್ತಿಗೆಯ ಕವಿಲೆ' ಎಂದರೆ ಗರ್ಭಧಾರಣೆ ಮಾಡಿದ ಹಸು ಎಂದರ್ಥ. ಇದರ ಸಂಸ್ಕೃತ ರೂಪ 'ಉಭಯಮುಖಿ'. ದಾನದ ವಿಧಗಳಲ್ಲಿ 'ಉಭಯಮುಖಿ ದಾನವು ಒಂದು. ಹಸುವಿನ ಗರ್ಭದಲ್ಲಿರುವ ಕರುವಿನ ಮುಖ ಸ್ವಲ್ಪ ಹೊರಗೆ ಬಂದಿರಬೇಕು. ಅಂಥ ಸಂದರ್ಭದಲ್ಲಿ ಮಾಡಿದ ಗೋದಾನ ಬಹು ಪ್ರಶಸ್ತವಾದುದೆಂದು ಸ್ಮೃತಿಕಾರರ ಅಭಿಪ್ರಾಯ. (ಧರ್ಮಶಾಸ್ತ್ರದ ಇತಿಹಾಸ II(ii). ಪುಟ–879)

82. BKI.I(ii). 187

83. ಕ.ವಿ.ವಿ.ಶಾ.ಸಂ.5. ಭಾ. 1. 311. ಕ್ರಿ.ಶ. 981

84. I.A. VI. ಪು. 25. ಕ್ರಿ.ಶ. 480. ಉದ್ಧರಿತ: ಚಿದಾನಂದಮೂರ್ತಿ ಎಂ.– 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಪು. 40-41

85. I.A. IV. ಪು. 277. ಉದ್ಧರಿತ: ಚಿದಾನಂದಮೂರ್ತಿ ಎಂ.– 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಪು. 40-41

86. BKI. I(i). 50. ಕ್ರಿ.ಶ.1138

87. ಉಲ್ಲೇಖ: ನಾಗಯ್ಯ ಜೆ.ಎಂ.– 'ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ ಪು–80

88. S.I.I. IX. i. 207- ಪೆದ್ದಮುದಿಯಂ; ಕ್ರಿ.ಶ. 1124

89. S.I.I. XV. 542. ಕ್ರಿ.ಶ. 1049; ಅದೇ. 111. ಕ್ರಿ.ಶ. 1165

90. E.I. XIII. 14. ಕ್ರಿ.ಶ. 1055

91. ಕ.ವಿ.ವಿ.ಶಾ.ಸಂ. 6. 7- ತಡಖೇಲ; ಕ್ರಿ.ಶ. 1047

92. ಶ್ರೀನಿವಾಸ ರಿತ್ತಿ – 'ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾಕೋಶ' ಪು. 62

93. ಕ.ವಿ.ವಿ.ಶಾ.ಸಂ. 1. 17- ಕೋಗಳಿ; ಕ್ರಿ.ಶ. 992

94. ಅದೇ. 8. 3- ಭಾಲ್ಕಿ; ಕ್ರಿ.ಶ. 981

95. ಅದೇ. 1. 130- ಬಾಗಳಿ; ಕ್ರಿ.ಶ. 982

96. ಇನ್ತಿ ಪರಿಗ್ರಹವೆಲ್ಲಂ ದೇವರ್ಗ್ಗಂ ತಪೋಧನರ್ಗ್ಗಂ ಬೆಸಕೆಯ್ಯುದ್ದಣ್ಬರಲ್ಲಿ ದುಷ್ಟರಂ ತಪೋಧನರ್ದ್ದಣ್ಡಿಸಿ ನಡೆಯಿಸುವರ್ ಇದು ನೈಷ್ಠಕಸ್ತಾನದಲ್ಲಿ ನೈಷ್ಠಿಕರಲ್ಲದ ತಪೋಧನಮಿರಲಾಗದು ಬ್ರಹ್ಮಚರ್ಯದಿಂದ ಕೆಟ್ಟು ನಡೆವ ತಪೋಧನರಂ ನಾಡನಾಳ್ವರಸುಂ ಮಂನಯುನು ಮೋರಿಂಗೇಯು ಪನ್ನಿರ್ವರೊಡಣೆಯರು ವಿರ್ದು ಪೊರಮಡಿಸಿಯವರ ಸಂತತಿಯ ನೈಷ್ಠಿಕರ ನಿರಿಸುವರಿದನು ಪೇಕ್ಷಗೆಯದವರ್ಗ್ಗೀ ಧರ್ಮಮನಳಿದ ದೋಷಮಕ್ಕು." S.I.I. X(i). 101. ಕ್ರಿ.ಶ. 1045

97. ಕ.ವಿ.ವಿ.ಶಾ.ಸಂ. 1. 55-ತೆಕ್ಕಲಕೋಟೆ. ಕ್ರಿ.ಶ. 1020; KI.I 17- ಶಿಗ್ಗಾಂವ. ಕ್ರಿ.ಶ. 1055

98. K.I. I 17 - ಶಿಗ್ಗಾಂವ. ಕ್ರಿ.ಶ. 1055. ; S.I.I. XVIII. 290- ಬಂಕಾಪುರ; ಕ್ರಿ.ಶ.1078

99. E.C . V. ಹಾಸನ 151. ಕ್ರಿ.ಶ. 1156

100. ರಿತ್ತಿ ಶ್ರೀನಿವಾಸ– 'ಪ್ರಾಚೀನ ಕರ್ನಾಟಕ ಆಡಳಿತ ಪರಿಭಾಷಾಕೋಶ' ಪು. 172

101. ಕ.ವಿ.ವಿ.ಶಾ.ಸಂ. 7. ಲಿಂಗಸೂಗುರು(ತಾ) 34 – ಮಸ್ಕಿ; ಕ್ರಿ.ಶ. 1018

102. ಅದೇ. 90 – ಬಲ್ಲಟಗಿ; ಕ್ರಿ.ಶ. 1022

103. ಶಾಸನ ಪರಿಚಯ– 41 ; ಕ್ರಿ.ಶ. 1043

104. K.I. II 16 – ಅಕ್ಕಲಕೋಟೆ; ಕ್ರಿ.ಶ.1122

105. ಅದೇ.

106. E.C. V. ಹಾಸನ 151 ; ಕ್ರಿ.ಶ.1156

107. E.C. VI. 86 - ಸಿಂಧಘಟ್ಟ; ಕ್ರಿ.ಶ. 1179

108. E.C. V. ಹಾಸನ 72 ; ಕ್ರಿ.ಶ. – 1160

109. E.C. VII. ಶಿಕಾರಿಪುರ.292; ಕ್ರಿ.ಶ. 1077

110. M.A.R. 158; ಕ್ರಿ.ಶ. 1108

111. E.C. VII. ಶಿವಮೊಗ್ಗ– 42; ಕ್ರಿ.ಶ. 1122

112. ಅದೇ. ಬಳ್ಳಿಗಾವೆ103 ; ಕ್ರಿ.ಶ.1149

113. ಅದೇ. ಬಳ್ಳಿಗಾವೆ104 ; ಕ್ರಿ.ಶ. 1156

114. E.C.VII. ಶಿಖಾರಿಪುರ -185; ಕ್ರಿ.ಶ. 1159

115. ಗೋಪಾಲರಾವ್ ಎಚ್.ಎಸ್.– 'ಕಲ್ಯಾಣ ಚಾಲುಕ್ಯರ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ' ಪು. ೫೪

116. ಚಿದಾನಂದಮೂರ್ತಿ ಎಂ. – 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ಪು. 210

117. S.I.I. IX. i. 101- ಮೋರಿಂಗೇರಿ; ಕ್ರಿ.ಶ. 1045
118. E.C. VII. ತಿಪಟೂರ– 104; ಕ್ರಿ.ಶ. 1130
119. E.C. IV. 16 - ಹುಣಸೂರ ಕ್ರಿ.ಶ. 1124
120. E.C. III. ಗುಂಡ್ಲುಪೇಟೆ–56; ಕ್ರಿ.ಶ. 1049
121. S.I.I. XX. 49- ಕಲ್ಕೇರಿ; ಕ್ರಿ.ಶ. 1076
122. S.I.I. XVIII. 110-ನಿಡೋಣಿ; ಕ್ರಿ.ಶ.1115
123. E.C. XI. Dg. 90. ಕ್ರಿ.ಶ. 1128, Ec .VI . ಚಿಕ್ಕಮಗಳೂರು 137. ಕ್ರಿ.ಶ.1130.
124. S.I.I. IX. i. 249- ಕೊಳೂರು; ಕ್ರಿ.ಶ. 1147
125. S.I.I. V. 29 .ಕ್ರಿ.ಶ. 1150
126. ಚಿದಾನಂದಮೂರ್ತಿ ಎಂ.– 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಪು. 194
127. ಗೋಪಾಲರಾವ್ ಎಚ್. ಎಸ್.– 'ಶಾಸನಗಳ ಹಿನ್ನಲೆಯಲ್ಲಿ ಕಲ್ಯಾಣ ಚಾಲುಕ್ಯ ದೇವಾಲಯಗಳು ಒಂದು ಅಧ್ಯಯನ'. ಪು. 65
128. E.C. V. Bl. 200. ಕ್ರಿ.ಶ. 1073
129. EC. VI. Kd. 35. ಕ್ರಿ.ಶ. 1136
130. ಕ.ವಿ.ವಿ.ಶಾ.ಸಂ. 5. ಭಾ.2. 406– ಚೊಪ್ಪದ್ಯಾಂಡಿ; ಕ್ರಿ.ಶ. 1008
131. E.C. V. ಕೋರಮಂಗಲ– 210; ಕ್ರಿ.ಶ. 1168
132. E.C. VI. ಕಡೂರು–51; ಕ್ರಿ.ಶ. 1169
133. S.I.I. IX. i. 267- ಬಾಗಳಿ. ಕ್ರಿ.ಶ. 1160
134. S.I.I. XVIII. 110- ಕಾಗಿನೆಲೆ. ಕ್ರಿ.ಶ.1122
135. ಕ.ಜಿ.ಶಾ. ಶಹಾಪುರ(ತಾ) 1. ಅಣಬಿ; ಕ್ರಿ.ಶ. 1034
136. S.I.I. XX. 24- ಅಡೂರು; ಕ್ರಿ.ಶ. 1034-35
137. ಕ.ಜಿ.ಶಾ. ಚಿತಾಪುರ (ತಾ)31. ನಿಪ್ಪಾಣಿ; ಕ್ರಿ.ಶ. 1037
138. ಕ.ವಿ.ವಿ.ಶಾ.ಸಂ. 9. 110– ಅರಸಿಬೀದಿ; ಕ್ರಿ.ಶ. 1047
139. ಕ.ವಿ.ವಿ.ಶಾ.ಸಂ. 6. 77– ತಡಖೇಲ; ಕ್ರಿ.ಶ. 1047
140. ಅದೇ.
141. ಕೊಪ್ಪಾ ಎಸ್.ಕೆ.–'ತರ್ದವಾಡಿನಾಡು' ಪು.152
142. S.I.I. IX. i. 145- ಬಾಗಳಿ; ಕ್ರಿ.ಶ. 1079, ಅದೇ. 147– ಸಂಗಮೇಶ್ವರ; ಕ್ರಿ.ಶ. 1079, ಅದೇ. 187- ಕೊಟ್ಟೂರು; ಕ್ರಿ.ಶ. 1112
143. S.I.I. XX. 111- ದೇವರನಾವದಗಿ. ಕ್ರಿ.ಶ. 1140
144. ಉದ್ಧರಿತ: ತಿಪ್ಪೇರುದ್ರಸ್ವಾಮಿ ಎಚ್.– 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ' ಪು. 192-93
145. ಮೂರನೆಯ ಸೋಮೇಶ್ವರ– 'ಮಾನಸೋಲ್ಲಾಸ', ಸಂ. 1. ಪು. 91
146. ಅದೇ. ಪು. 42
147. S.I.I. XX. 21- ರೂಗಿ; ಕ್ರಿ.ಶ. 1019
148. ಕ.ವಿ.ವಿ.ಶಾ.ಸಂ. 1. 27– ಮೂಲಿಗೆರೆ; ಕ್ರಿ.ಶ. 1046, ಅದೇ. 9. 104– ಅರಸಿಬೀದಿ; ಕ್ರಿ.ಶ. 1061

149. ಕ.ವಿ.ವಿ.ಶಾ.ಸಂ. 5. ಭಾಗ. 1. 17– ನಾರಿಹಳ್ಳ (ತಾರಾನಗರ); ಕ್ರಿ.ಶ. 1047
150. ಅದೇ. 312– ಕಂಚಗಾರ ಬೆಳಗಲ್ಲು; 1054
151. ಕ.ವಿ.ವಿ.ಶಾ.ಸಂ. 1. 18– ಹಜ್ಜೊಳ್ಳಿ; ಕ್ರಿ.ಶ. 1044
152. ಕ.ವಿ.ವಿ.ಶಾ.ಸಂ. 7. ಲಿಂಗಸೂಗುರು(ತಾ) 33– ಮಸ್ಕಿ; ಕ್ರಿ.ಶ. 1032
153. ಕ.ವಿ.ವಿ.ಶಾ.ಸಂ. 5. ಭಾ. 2 593 ಸೈದಾಪುರ; ಕ್ರಿ.ಶ. 1034
154. ಕ.ವಿ.ವಿ.ಶಾ.ಸಂ. 1. 63– ಸಿರಿವಾರ; ಕ್ರಿ.ಶ. 1044
155. ಕ.ವಿ.ವಿ.ಶಾ.ಸಂ. 7. 104– ಅರಸೀಬೀದಿ; ಕ್ರಿ.ಶ. 1061
156. ಕ.ವಿ.ವಿ.ಶಾ.ಸಂ. 9. 52– ಮುಕ್ಕುಂದ; ಕ್ರಿ.ಶ. 1049
157. ಕ.ವಿ.ವಿ.ಶಾ.ಸಂ. 5. ಭಾ. 2. 412– ಸನಿಗರಂ; ಕ್ರಿ.ಶ. 1051
158. ಕ.ವಿ.ವಿ.ಶಾ.ಸಂ. 9. 14– ಕೆಳವಡಿ; ಕ್ರಿ.ಶ. 1053
159. ಕ.ವಿ.ವಿ.ಶಾ.ಸಂ. 5. ಭಾ. 1. 312– ಕಂಚಗಾರ ಬೆಳಗಲ್ಲು; ಕ್ರಿ.ಶ. 1054
160. ಅದೇ. 302– ಬದನೆಹಾಳು; ಕ್ರಿ.ಶ. 1055
161. ಕ.ವಿ.ವಿ.ಶಾ.ಸಂ. ಭಾ. 2. 571; ಕೋಲನಪಾಕ; ಕ್ರಿ.ಶ. 1056
162. ಅದೇ. 451– ಆಲಂಪುರ; ಕ್ರಿ.ಶ. 1057
163. ಕ.ವಿ.ವಿ.ಶಾ.ಸಂ. ಭಾ. 1. 202– ಪುಲಕುರ್ತಿ; ಕ್ರಿ.ಶ. 1058
164. ಕ.ವಿ.ವಿ.ಶಾ.ಸಂ. 1. 6– ಉಚ್ಚಂಗಿದುರ್ಗ; ಕ್ರಿ.ಶ. 1064
165. ಕ.ವಿ.ವಿ.ಶಾ.ಸಂ. 7. ಮಾನ್ವಿ(ತಾ) 13– ಮಾನ್ವಿ; ಕ್ರಿ.ಶ. 11ನೇ ಶತಮಾನ
166. ಗೋಪಾಲರಾವ್ ಎಚ್.ಎಸ್.– 'ಕಲ್ಯಾಣ ಚಾಲುಕ್ಯ ದೇವಾಲಯಗಳು ಒಂದು ಅಧ್ಯಯನ' ಪು. 78
167. ಕ.ಜಿ.ಶಾ. ಚಿತಾಪುರ(ತಾ) 31– ನಿಪ್ಪಾಣಿ; ಕ್ರಿ.ಶ. 1037
168. S.I.I. XX. 49– ಕಲ್ಕೇರಿ; ಕ್ರಿ.ಶ. 1076
169. E.C. V. ಬೇಲೂರು 58; ಕ್ರಿ.ಶ. 1117
170. E.C. 5. ತಿ. ನರಸೀಪುರ 151; ಕ್ರಿ.ಶ. 1117
171. E.C. V. ಹಾಸನ 116; ಕ್ರಿ.ಶ. 1123
172. Inscription from sholapur District 9, ಕ್ರಿ.ಶ. 1135
173. E.C. VI. ಕಡೂರು 161 ; ಕ್ರಿ.ಶ. 1063
174. ಕ.ವಿ.ವಿ.ಶಾ.ಸಂ. 9. 22– ನಂದವಾಡಗಿ; ಕ್ರಿ.ಶ. 1044
175. ಕ.ವಿ.ವಿ.ಶಾ.ಸಂ. 4. 77– ತಡಖೇಲ; ಕ್ರಿ.ಶ. 1047
176. S.I.I. XVIII. 89- ಕರಡಿಕಲ್ಲು; ಕ್ರಿ.ಶ. 1080
177. E.C. VII. ಬಳ್ಳಿಗಾವೆ 114 ; ಕ್ರಿ.ಶ. 1096
178. S.I.I. XX. 64- ಮಲ್ಲಾಣ; ಕ್ರಿ.ಶ. 1103
179. S.I.I. XI. ii. 152- ಹೊಸೂರು; ಕ್ರಿ.ಶ. 1103
180. S.I.I. IX. i. 141- ನೀಲಗುಂದ; ಕ್ರಿ.ಶ. 1079
181. S.I.I. XVIII. 110- ನಿಡೋಣೀ; ಕ್ರಿ.ಶ. 1115

182. ಸಮೂಹದಿಂದ ವ್ಯಕ್ತಿ ಪ್ರಭಾವಿತನಾಗುವುದು ಮನೋವೈಜ್ಞಾನಿಕವಾಗಿದೆ. ಸಮಾಜದ ಅವಿಭಾಜ್ಯ ಅಂಗವಾಗಿರುವ ಮನುಷ್ಯ ಅದೇ ಸಮಾಜದ ಚಟುವಟಿಕೆಗಳಿಂದ ಪ್ರಭಾವಿತನಾಗುತ್ತಾನೆ. ಬಹಳ ಪ್ರಾಚೀನ ಕಾಲದಿಂದ ಪ್ರಚಲಿತವಾಗಿರುವ 'ಋಷಿ ಆಶ್ರಮದ ಗಿಳಿ ಮತ್ತು ಕಟುಕರ ಮನೆಯ ಗಿಳಿಯ ಕಥೆ' ವ್ಯಕ್ತಿಯ ಮೇಲೆ ಪರಿಸರ ಬೀರುವ ಪ್ರಭಾವವನ್ನು ತಿಳಿಸುತ್ತದೆ.

183. S.I.I. XX. 84- ಬಾಳಂಬೀಡ; ಕ್ರಿ.ಶ. 1123

184. ಕ.ವಿ.ವಿ.ಶಾ.ಸಂ. 5. ಭಾ. 1. 139– ಗುತ್ತಿ; ಕ್ರಿಶ. 1125

185 ಕ.ವಿ.ವಿ.ಶಾ.ಸಂ. 8. ಬಸವಕಲ್ಯಾಣ(ತಾ) 1– ಬಸವಕಲ್ಯಾಣ; ಕ್ರಿ.ಶ. 1100

186. ಅದೇ.

187. ಕ.ವಿ.ವಿ.ಶಾ.ಸಂ. 1. 52– ಹಿರೇಹಡಗಿ; ಕ್ರಿ.ಶ. 1057

188. ಕ.ವಿ.ವಿ.ಶಾ.ಸಂ. 5 ಭಾ. 2. ಆಲಂಪುರ; ಕ್ರಿ.ಶ. 1106

189. ಕ.ವಿ.ವಿ.ಶಾ.ಸಂ. 1. 28. ದೇವರಗುಡಿ; ಕ್ರಿ.ಶ. 1108

190. ಕ.ಜಿ.ಶಾ. ಚಿತಾಪುರ(ತಾ) 26– ದಿಗ್ಗಾಂವ; ಕ್ರಿ.ಶ. 1107

191. ಕ.ವಿ.ವಿ.ಶಾ.ಸಂ. 1. 180–ಬಾಗಳಿ; ಕ್ರಿ.ಶ. 1108

192. ಅದೇ. 5. ಭಾ. 2. 399– ಮೊಲವಾಸ; ಕ್ರಿ.ಶ. 1108

193. ಅದೇ. 8. ಬಸವಕಲ್ಯಾಣ(ತಾ) 14– ಬಸವಕಲ್ಯಾಣ; ಕ್ರಿ.ಶ. 1108

194. S.I.I. IX. i. 245– ಚನ್ನಹಳ್ಳಿ; ಕ್ರಿ.ಶ. 1146

195. S.I.I. XV. ii. 56; ಕ್ರಿ.ಶ. 1184

196. ಅದೇ. 59– ಅಣ್ಣಿಗೇರಿ; ಕ್ರಿ.ಶ. 1184

197. E.I. V. ಪು. 245 – 246; ಕ್ರಿ.ಶ. 12ನೇ ಶತಮಾನ

198. E.C. XI. 20– ವಡ್ಡನಹಳ್ಳಿ; ಕ್ರಿ.ಶ. 1045

199. ಅದೇ. VII. 17– ಚನ್ನಗಿರಿ; ಕ್ರಿ.ಶ. 1120

200. ಅದೇ. XI. 68– ಹೊಳಲಕೆರೆ; ಕ್ರಿ.ಶ. 1126

201. ಅದೇ. 90– ಶಾಬನೂರು; ಕ್ರಿ.ಶ. 1128

202. ಕ.ವಿ.ವಿ.ಶಾ.ಸಂ. 1. 15– ಕೋಗಳಿ; ಕ್ರಿ.ಶ. 1055

203. ಅದೇ. 52– ಹಿರೇಹಡಗಲಿ; ಕ್ರಿ.ಶ. 1057

204 S.I.I. XX. 18– ಸವದತ್ತಿ ಕ್ರಿ.ಶ. 980

205. ಕ.ವಿ.ವಿ.ಶಾ.ಸಂ. 1. 29– ಕುಡತಿನಿ; ಕ್ರಿ.ಶ. 981

206. ಅದೇ. ಶಿರಗುಪ್ಪ(ತಾ) 27– ಬಲ್ಲಕುಂದೆ; ಕ್ರಿ.ಶ. 1008

207. ಅದೇ. ಹೂವಿನಹಡಗಲಿ(ತಾ) 13– ಬಾಗಳಿ; ಕ್ರಿ.ಶ. 1018

208. ಕ.ವಿ.ವಿ.ಶಾ.ಸಂ. 2. ಕೊಪ್ಪಳ(ತಾ) 21– ಹಲಗೇರಿ; ಕ್ರಿ.ಶ. 1018

209. ಕ.ವಿ.ವಿ.ಶಾ.ಸಂ. 2. ಯಲಬುರ್ಗಾ(ತಾ) 50– ಕುಕ್ಕನೂರು; ಕ್ರಿ.ಶ. 1005

210. ಕ.ವಿ.ವಿ.ಶಾ.ಸಂ. 2. ಯಲಬುರ್ಗಾ(ತಾ) 38– ಕುಕ್ಕನೂರು; ಕ್ರಿ.ಶ. 1107

211. S.I.I. XX. 34– ಕಲ್ಕೇರಿ; ಕ್ರಿ.ಶ. 1053

212. ಕ.ವಿ.ವಿ.ಶಾ.ಸಂ. 2. ಯಲಬುರ್ಗಾ(ತಾ) 38– ಕುಕನೂರು; ಕ್ರಿ.ಶ. 1107

213. ಅದೇ. 1. 29, ಕುಡತಿನಿ; ಕ್ರಿ.ಶ. 981

214. E.C. VII. ಶಿಕಾರಿಪುರ– 106 ; ಕ್ರಿ.ಶ. 1098, ಶಾಸನ ಪರಿಚಯ– 47; ಕ್ರಿ.ಶ. 1107, S.I.I. XX. 76; ಕ್ರಿ.ಶ. 1118; E.C. VII. 123; ಕ್ರಿ.ಶ. 1159

215. E.C. VI. 12 ಕ್ರಿ.ಶ. 1166; ಅದೇ. 10 ಕ್ರಿ.ಶ. 1184

216. K.I. II. 9. ಕ್ರಿ.ಶ. 1075, E.C. VI. 61. ಕ್ರಿ.ಶ. 1075

217. S.I.I. XV. ii. 129- ಲಕ್ಕುಂಡಿ; ಕ್ರಿ.ಶ. 1176, ಅದೇ. 60– ಸಾಲವಾಡಗಿ; ಕ್ರಿ.ಶ. 1184

218. E.C. VII. 185- ತಾಳಗುಂದ; ಕ್ರಿ.ಶ. 1158

219. ಅದೇ. X. 26- ಸುಳಿದೇವನಹಳ್ಳಿ; ಕ್ರಿ.ಶ. 1017

220. ಅದೇ. XI. 1- ಹೊಳಲಕೆರೆ; ಕ್ರಿ.ಶ. 1054

221. ಕ.ವಿ.ವಿ.ಶಾ.ಸಂ. 9. 37– ಭೈರನಮಟ್ಟಿ; ಕ್ರಿ.ಶ. 990

222. ಕ.ವಿ.ವಿ.ಶಾ.ಸಂ. 5. ಭಾ. 2. 402– ಕರೀಂನಗರ; ಕ್ರಿ.ಶ. 992

223. ಅದೇ. 392– ಜಮ್ಮಿಕುಂಟ; ಕ್ರಿ.ಶ. 995

224. ಕ.ವಿ.ವಿ.ಶಾ.ಸಂ. 7. ಲಿಂಗಸೂಗೂರು(ತಾ) 11– ನವಿಲೆ; ಕ್ರಿ.ಶ. 1014

225. ಅದೇ. ಮಾನ್ವಿ(ತಾ) 90– ಬಲ್ಲಟಗಿ; ಕ್ರಿ.ಶ. 1022

226. ಅದೇ. ಮಾನ್ವಿ(ತಾ) 92 ಬಲ್ಲಟಗಿ; ಕ್ರಿ.ಶ. 1036

227. ಕ.ವಿ.ವಿ.ಶಾ.ಸಂ. 1. 24– ಮೋರಿಗೇರಿ; ಕ್ರಿ.ಶ. 1045

228. E.C. 9. ಬೇಲೂರು(ತಾ) 190- ದಬ್ಬೆ ಅಗ್ರಹಾರ ಕ್ರಿ.ಶ. 1100–01

229. E.C. 10. ಅರಸಿಕೆರೆ(ತಾ) 60- ಶಾನೆಗೆರೆ ಕ್ರಿ.ಶ. 1134

230. ಅದೇ. 235– ಹಾರನಹಳ್ಳಿ; ಕ್ರಿ.ಶ. 1138

231. ಕ.ವಿ.ವಿ.ಶಾ.ಸಂ. 2. ಕೊಪ್ಪಳ(ತಾ) 26– ನರೇಗಲ್ಲು; ಕ್ರಿ.ಶ. 973

232. ಅದೇ. 1– ಕವಲೂರು; ಕ್ರಿ.ಶ. 1097

233. ಅದೇ. 21– ಹಲಗೇರಿ; ಕ್ರಿ.ಶ. 1018

234. ಅದೇ. 9. ಬದಾಮಿ(ತಾ) 38– ಐಹೊಳೆ. ಕ್ರಿ.ಶ. 1101

235. E.C. VI. 157. ಕ್ರಿ.ಶ. 1195. 'ವೀರಕೊಡಗಿ' ಎಂಬುದು ವೀರತನದಿಂದ ಕಾದಿ ಮಡಿದವನ ಶೌರ್ಯ ಮತ್ತು ತ್ಯಾಗದ ಸಲುವಾಗಿ ಕೊಟ್ಟ ಉಂಬಳಿ..

236. S.I.I. XV. 32– ಮುತ್ತಗಿ; ಕ್ರಿ.ಶ. 1147

237. ಅದೇ.

238. ಅದೇ.

239. S.I.I. XX. 111– ದೇವರನಾವದಗಿ; ಕ್ರಿ.ಶ. 1140

239.1 'ನೀತಿವಾಕ್ಯಾಮೃತ' ಪು. ೪. ಸಂ: ಜೆ.ಎಸ್. ದೀಕ್ಷಿತ್

239.2 'ರತ್ನಕರಂಡಕ ಶ್ರಾವಕಾಚಾರ' ಕನ್ನಡ ವ್ಯಾಖ್ಯಾನ: ಮಿರ್ಜಿ ಅಣ್ಣಾರಾಯ ಪ್ರಜೈನ ಸಂಸ್ಕೃತಿ ಸಂರಕ್ಷಕ ಸಂಘ ಸೊಲ್ಲಾಪುರ, ೧೯೬೦

239.3 'ಧರ್ಮಾಮೃತಂ' – ೭.೭೪, ೭೫ ಸಂ: ಡಾ.ಆರ್. ಶಾಮಶಾಸ್ತ್ರಿ.

240. ಗೋಪಾಲರಾವ್ ಎಚ್. ಎಸ್.– 'ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣ ಚಾಲುಕ್ಯ ದೇವಾಲಯಗಳು

ಒಂದು ಸಾಂಸ್ಕೃತಿಕ ಅಧ್ಯಯನ' ಪು. ೧೩೪.

241. S.I.I. VIII. 369- ಗುತ್ತಿ; ಕ್ರಿ.ಶ. 1074

242. ಅದೇ. 374- ಗುತ್ತಿ; ಕ್ರಿ.ಶ. 1081

243. E.C. VI. 56 - ತರೀಕೆರೆ; ಕ್ರಿ.ಶ. 1097

244. E.C. V. 71 -ಬೇಲೂರು; ಕ್ರಿ.ಶ. 1117

245. C.I.K.D.H.S. 9. ಕ್ರಿ.ಶ. 1124

246. E.C. VII. 60 - ಚನ್ನಗಿರಿ; ಕ್ರಿ.ಶ. 1142

247. E.C. 3. 215 - ಸುತ್ತೂರು; ಕ್ರಿ.ಶ. 1038

248. 'ತ್ರಿಕಾಲ ಪೂಜೆ' ಎಂದರೆ: ಪ್ರತಿದಿನ ಪ್ರಾತಃಕಾಲ, ಮಧ್ಯಾಹ್ನ ಮತ್ತು ರಾತ್ರಿ ಮೂರು ಹೊತ್ತು ನಡೆಯುವ ಪೂಜೆ. ಇದನ್ನು ಶಾಸನಗಳಲ್ಲಿ 'ನಿತ್ಯ ನೈಮಿತ್ತಿಕ ಪೂಜಾ' ಎಂತಲೂ ಕರೆಯಲಾಗಿದೆ.

249. E.C. VI. 58 - ಬೇಲೂರು; ಕ್ರಿ.ಶ. 1172

250. ಅದೇ. 56 - ತರೀಕೆರೆ; ಕ್ರಿ.ಶ. 1097

251. E.C. VI. 71 - ಬೇಲೂರು; ಕ್ರಿ.ಶ. 1117

252. C.I.K.D.H.S. 9; ಕ್ರಿ.ಶ. 1124

253. E.C. VIII. 60 - ಚನ್ನಗಿರಿ; ಕ್ರಿ.ಶ. 1142

254. E.C. II, 345 - ಶ್ರವಣಬೆಳಗೊಳ ಕ್ರಿ.ಶ. 1159

255. E.C. V. 124 - ಬೇಲೂರು ಕ್ರಿ.ಶ. 1133

256. E.C. VIII. 103 - ಸಾಗರ ಕ್ರಿ.ಶ. 1089

257. Inscriptions from Nanded District, 15 ಕ್ರಿ.ಶ. 1113

258. S.I.I. XV. ii. - 100 ಕ್ರಿ.ಶ. 1161

259. E.C. VI. 66 - ಕಡೂರು; ಕ್ರಿ.ಶ. 1172

260. ಕ.ವಿ.ವಿ.ಶಾ.ಸಂ. 2. ಕೊಪ್ಪಳ(ತಾ) 26 - ನರೇಗಲ್; ಕ್ರಿ.ಶ. 973

261. ಕ.ವಿ.ವಿ.ಶಾ.ಸಂ. 7. ಲಿಂಗಸೂಗೂರು(ತಾ) 28 - ಗೋನವಾರ; ಕ್ರಿ.ಶ. 11ನೇ ಶತಮಾನ

262. ಕ.ವಿ.ವಿ.ಶಾ.ಸಂ. 1. 27 - ಬಲ್ಲಕುಂದೆ. ಕ್ರಿ.ಶ. 1008

263. S.I.I. XX. 19 - ರೂಗಿ; ಕ್ರಿ.ಶ. 1015

264. ಕ.ವಿ.ವಿ.ಶಾ.ಸಂ. 1. 136 - ಬಾಗಳಿ; ಕ್ರಿ.ಶ. 1018

265. ಕ.ವಿ.ವಿ.ಶಾ.ಸಂ. 7. 32 - ಸಂಕನೂರು; ಕ್ರಿ.ಶ. 1023

266. ಕ.ವಿ.ವಿ.ಆ.ಸಂ. 2. ಶಿರಗುಪ್ಪ(ತಾ) 3 - ಗೋತಗಿ; ಕ್ರಿ.ಶ. 1024

267. ಕ.ವಿ.ವಿ.ಶಾ.ಸಂ. 7. ಮಾನ್ವಿ(ತಾ) 45 - ಮಸ್ಕಿ; ಕ್ರಿ.ಶ. 1027

268. ಅದೇ. 33 - ಮಸ್ಕಿ ಕ್ರಿ.ಶ. 1032

269. ಅದೇ. ಸಿಂಧನೂರು(ತಾ) 46 - ಮಾಡಶಿರವಾರ. ಕ್ರಿ.ಶ. 1032

270. ಕ.ವಿ.ವಿ.ಶಾ.ಸಂ. – 2. ಯಲಬುರ್ಗ(ತಾ) 34 - ಅರಕೇರಿ; ಕ್ರಿ.ಶ. 1033

271. ಕ.ವಿ.ವಿ.ಶಾ.ಸಂ. 1. 28 - ಚಿಮ್ಮಹಳ್ಳಿ; ಕ್ರಿ.ಶ. - 1034 - 35

272. ಕ.ವಿ.ವಿ.ಶಾ.ಸಂ. ೧. 217 - ತೆಲವಾಗಿಲು; ಕ್ರಿ.ಶ. 1035

273. ಅದೇ 99 - ಬಾಗಳಿ; ಕ್ರಿ.ಶ. - 1035

274. ಕ.ಜಿ.ಶಾ. ಚಿತಾಪುರ(ತಾ) 31 - ನಿಪ್ಪಾಣಿ; ಕ್ರಿ.ಶ. 1037

275. ಕ.ವಿ.ವಿ.ಶಾ.ಸಂ. 1. 24 - ಮೋರಿಗೇರಿ; ಕ್ರಿ.ಶ. 1045

276. ಅದೇ.

277. ಕ.ವಿ.ವಿ.ಶಾ.ಸಂ. 6. 77 - ತಡಖೇಲ; ಕ್ರಿ.ಶ. 1047

278. ಕ.ವಿ.ವಿ.ಶಾ.ಸಂ. 9. 41 - ಶೀರೂರ; ಕ್ರಿ.ಶ. 1049

279. ಕ.ವಿ.ವಿ.ಶಾ.ಸಂ. 5. ಭಾ. 2. 412 - ಸನಿಗರಂ; ಕ್ರಿ.ಶ. 1053.

280. ಗೋಪಾಲರಾವ್ ಎಚ್.ಎಸ್.– 'ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣ ಚಾಲುಕ್ಯ ದೇವಾಲಯಗಳು– ಒಂದು ಸಾಂಸ್ಕೃತಿಕ ಅಧ್ಯಯನ' ಪು. 78

281. ಕ.ವಿ.ವಿ.ಶಾ.ಸಂ. 2. ಕೊಪ್ಪಳ(ತಾ) 26 - ನರೇಗಲ್; ಕ್ರಿ.ಶ. 973

282. SII XX 18 - ಸವದತ್ತಿ; ಕ್ರಿ.ಶ. 980

283. ಕ.ವಿ.ವಿ.ಶಾ.ಸಂ. 5 ಭಾ - 2, 392 - ಜಿಮ್ಮಿಕುಂಟೆ; ಕ್ರಿ.ಶ. 995

284. ಅದೇ. 406 - ಚೊಪ್ಪದ್ಯಾಂಡಿ; ಕ್ರಿ.ಶ. 1008

285. ಕ.ವಿ.ವಿ.ಶಾ.ಸಂ. - 7. ದೇವದುರ್ಗ(ತಾ) 30 - ಬಾಗೂರು; ಕ್ರಿ.ಶ. 1063

286. ಕ.ವಿ.ವಿ.ಶಾ.ಸಂ. - 1. 27- ಬಲ್ಲಕುಂದೆ; ಕ್ರಿ.ಶ. 1008

287. ಕ.ವಿ.ವಿ.ಶಾ.ಸಂ. 5. ಭಾ. 2. 4 - ಮುರಮ್; ಕ್ರಿ.ಶ. 1013

288. ಕ.ವಿ.ವಿ.ಶಾ.ಸಂ. 7. ಮಾನ್ವಿ(ತಾ) 81 - ಬಲ್ಲಟಗಿ; ಕ್ರಿ.ಶ. 1028

289. SSI, XX BKI IV 49. ಕ್ರಿ.ಶ. 1076

290. ಗೋಪಾಲರಾವ್ ಎಚ್.ಎಸ್. – ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣಚಾಲುಕ್ಯರ ದೇವಾಲಯಗಳು ಪು. ೫೭

291. ಅದೇ.

292. S.I.I. XV. ii. 38. ಕ್ರಿ.ಶ. 1110

293. E.C. XI. 27 - ಮೊಳಕಾಲ್ಮೂರು; ಕ್ರಿ.ಶ. 967

294. E.C. VII. 77 - ಶಿವಮೊಗ್ಗ; ಕ್ರಿ.ಶ. 963

295. E.C. XI. 68 - ಹೊಳಲ್ಕೆರೆ; ಕ್ರಿ.ಶ. 1126

296. S.I.I. XX. BKI. IV. 80 - ಕ್ರಿ.ಶ. 1120

297. ಅದೇ. 29. ಕ್ರಿ.ಶ. 1044

298. E.C.V. 187 - ಅರಸಿಕೆರೆ; ಕ್ರಿ.ಶ. 1090

299. E.C. 6. 42 - ಕೃಷ್ಣರಾಜಪೇಟೆ; ಕ್ರಿ.ಶ. 1177

300. E.C. V. 146 - ಅರಸಿಕೆರೆ; ಕ್ರಿ.ಶ. 1136

301. E.C. VII. 267 - ಶಿಕಾರಿಪುರ; ಕ್ರಿ.ಶ. 1174

302. S.I.I. IX. i. 297 - ಕ್ರಿ.ಶ. 1177

303. ಕ.ವಿ.ವಿ.ಶಾ.ಸಂ. 2. ಕೊಪ್ಪಳ(ತಾ) 26 - ನರೇಗಲ್; ಕ್ರಿ.ಶ. 973

304. ಕ.ವಿ.ವಿ.ಶಾ.ಸಂ. 5. ಭಾ. 2 423 - ಬೈರಾನಿಪಲ್ಲಿ; ಕ್ರಿ.ಶ. ೧೦೦೮

305. S.I.I. XX. 21 - ರೂಗಿ; ಕ್ರಿ.ಶ. 1019

306. ಕ.ವಿ.ವಿ.ಶಾ.ಸಂ. 5 ಭ – 2, 445 - ಆಲಂಪುರ; ಕ್ರಿ.ಶ. ೧೦೭೩

307. ಅದೇ. 456 - ಆಲಂಪುರ; ಕ್ರಿ.ಶ. 1076

308. ಅದೇ. 457 - ಆಲಂಪುರ; ಕ್ರಿ.ಶ. 1078

309. ಅದೇ. 458 - ಆಲಂಪುರ; ಕ್ರಿ.ಶ. 1080

310. ಅದೇ. 453 - ಆಲಂಪುರ; ಕ್ರಿ.ಶ. 1107

311. ಅದೇ. 8 - 3 ಬಸವ ಕಲ್ಯಾಣ; ಕ್ರಿ.ಶ. 1143

312. ವಿಶ್ವವಿಖ್ಯಾತ ನಳಂದ ವಿಶ್ವವಿದ್ಯಾಲಯ, ತಕ್ಷಶಿಲಾ ವಿಶ್ವವಿದ್ಯಾಲಯಗಳೂ ಸಹ ರಾಜರು ಹಾಗೂ ಜನರು ನೀಡಿದ ಬರುವ ಉದಾರ ದತ್ತಿಗಳಿಂದ ಅಸ್ಥಿತ್ವದಲ್ಲಿದ್ದವು ಎಂಬುದನ್ನು ಇಲ್ಲಿ ಸ್ಮರಿಸಬಹುದು.

313. S.I.I. XI. i. 47-ಹೊಸೂರು; ಕ್ರಿ.ಶ. 994

314. E.C. 3. 239 - ನಂಜನಗೂಡು; ಕ್ರಿ.ಶ. 10ನೇ ಶತಮಾನ

315. S.I.I. XI. i. 64 - ಮುಳಗುಂದ

316. ಕ.ವಿ.ವಿ.ಶಾ.ಸಂ. 2. ಯಲಬುರ್ಗ(ತಾ) 51 - ಕುಕನೂರು; ಕ್ರಿ.ಶ. 1005

317. S.I.I. XI. i. 62 - ಹೆಗ್ಗೂರು; ಕ್ರಿ.ಶ. 1024

318. ಕ.ವಿ.ವಿ.ಶಾ.ಸಂ. 1, 24 - ಮೊಲಿಂಗೇರಿ; ಕ್ರಿ.ಶ. 1045

319. ಅದೇ. 117 - ಕೋಗಳಿ; ಕ್ರಿ.ಶ. 1055

320. SII. XI(i) 121 - ಶಿವಪುರ; ಕ್ರಿ.ಶ. 1057

321. ಕ.ವಿ.ವಿ.ಶಾ.ಸಂ. 5 ಭಾ – 2, 490 - ಆಲಂಪುರ; ಕ್ರಿ.ಶ. 1060

322. ಅದೇ. 8, 50 - ಗೋರ್ಟಾ; ಕ್ರಿ.ಶ. 1082

323. 'ಪದ್ಮಪುರಾಣ' ಪು. 156 - 161

324. E.C. II 64 - ಶ್ರವಣಬೆಳಗೊಳ; ಕ್ರಿ.ಶ. 1163

325. S.I.I. XX. ii. 557; ಕ್ರಿ.ಶ. 12ನೇ ಶತಮಾನ

326. B.K.I. I. ii. SK 185; ಕ್ರಿ.ಶ. 1092

327. E.C. VII. SK. 185; ಕ್ರಿ.ಶ. 1158

328. S.I.I. XX. B.K.I. IV 57; ಕ್ರಿ.ಶ. 1084

329. ಅದೇ. 101; ಕ್ರಿ.ಶ. 1129

330. K.I. V. 29 - ಕ್ರಿ.ಶ. 12ನೇ ಶತಮಾನ

331. E.C. VII. 16 - ಶಿಕಾರಿಪುರ; ಕ್ರಿ.ಶ. 1085

332. S.I.I. IX. i. 252 - ಕ್ರಿ.ಶ. 1148

333. E.C. V. 52 - ಅರಸೀಕೆರೆ; ಕ್ರಿ.ಶ. 1152

334. E.C. VII. 123 - ಶಿಕಾರಿಪುರ; ಕ್ರಿ.ಶ. 1159

335. S.I.I. XV. ii. 50 ಕ್ರಿ.ಶ. 1156

336. E.C. VIII. 345 - ಸೊರಬ; ಕ್ರಿ.ಶ. 1171

337. E.C. X. VI. 66 - ಕಡೂರು; ಕ್ರಿ.ಶ. 1172

* 'ಅಗ್ರಹಾರ'ದ ಅಕ್ಷರಶಃ ಅರ್ಥವೆಂದರೆ– ಬ್ರಾಹ್ಮಣರ ನೆಲೆ. 'ಅಗ್ರಂ ಹರತೀತಿ ಅಗ್ರಹಾರ' ಎಂದು ಹೇಳಲಾಗಿದೆ. ಅಂದರೆ– ಮಾನವನನ್ನು ಅಸ್ತಿತ್ವದ ಪರಾಕಾಷ್ಠೆಗೆ ಒಯ್ಯುವ ಸ್ಥಳ. ಮೋನಿಯರ ವಿಲಿಯಮ್ಸ್ ಅವರು ಅಗ್ರಹಾರವನ್ನು 'ಬ್ರಾಹ್ಮಣರಿಗೆ ರಾಜರು ನೀಡಿದ ಭೂಮಿ' ಎಂದು ವರ್ಣಿಸಿದ್ದಾರೆ. (A sanskrit English Dictionary p.6) ಅನೇಕ ವಿದ್ವಾಂಸರು ಅಗ್ರಹಾರವನ್ನು ಮುಖ್ಯವಾಗಿ ಒಂದು ಶಿಕ್ಷಣ ಸಂಸ್ಥೆ ಎಂದು ವರ್ಣಿಸಿದ್ದಾರೆ. (ಡಾ. ಎಚ್. ತಿಪ್ಪೇರುದ್ರಸ್ವಾಮಿ ಕರ್ನಾಟಕ ಸಂಸ್ಕೃತಿ ಸಮೀಕ್ಷೆ ಪು.221)

339. ಕ.ವಿ.ವಿ.ಶಾ.ಸಂ. 2. ಕೊಪ್ಪಳ(ತಾ) 26–ನರೇಗಲ್; ಕ್ರಿ.ಶ.973

340. ಅದೇ. 7. 11 ನವಿಲೆ; ಕ್ರಿ.ಶ. 1014

341. ಅದೇ. 2. 18– ಪುರ; ಕ್ರಿ.ಶ. 1018

342. ಅದೇ. 7. 91 ಬಲ್ಲಟಗಿ; ಕ್ರಿ.ಶ. 1031

343. ಕ.ವಿ.ವಿ.ಶಾ.ಸಂ. 5 ಭಾ–2. 433–ಪೊನ್ನವೊಲು; ಕ್ರಿ.ಶ. 1007

344. ಕ.ಜಿ.ಶಾ. ಶಹಾಪುರ(ತಾ) 11– ದೋರನಹಳ್ಳಿ; ಕ್ರಿ.ಶ. 1017

345. ಕ.ವಿ.ವಿ.ಶಾ.ಸಂ. 5 ಭಾ. 2. 390– ಪುಷ್ಪಗಿರಿ ಕ್ರಿ.ಶ. 11ನೇ ಶತಮಾನ

346. 'ಜ್ಯೋತಿರ್ವೃತ್ತಿ'ಎಂದರೆ ಜ್ಯೋತಿಷ್ಯ ಶಾಸ್ತ್ರದಲ್ಲಿ ಪರಿಣತರಿಗೆ ಕೊಟ್ಟ ದತ್ತಿ ಎಂದರ್ಥ. (ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾಕೋಶ ಸಂ: ಶ್ರೀನಿವಾಸ ರಿತ್ತಿ ಮತ್ತು ಇತರರು, ಪು. 190)

347. ಕ.ವಿ.ವಿ.ಶಾ.ಸಂ. 5. ಭಾ. 2. 505–ಗಂಗಾಪುರಂ; ಕ್ರಿ.ಶ. 1091

348. ಅದೇ. 511– ನೆಕ್ಕೊಂಡ; ಕ್ರಿ.ಶ. 1121

349. ಅದೇ. 1. 44– ಓರುವಾಯಿ; ಕ್ರಿ.ಶ. 1036

350. ಅದೇ. 6. 77– ತಡಖೇಲ್; ಕ್ರಿ.ಶ. 1047

351. ಕ.ಜಿ.ಶಾ. ಚಿತಾಪುರ(ತಾ)25– ದಿಗ್ಗಾಂವ; ಕ್ರಿ.ಶ.1054

352. ಅದೇ. ಜೇವರ್ಗಿ(ತಾ)70– ವಡಗೇರಿ; ಕ್ರಿ.ಶ. 1077

353. ಅದೇ. ಜೇವರ್ಗಿ(ತಾ)3– ಅಂಕಲಗಿ; ಕ್ರಿ.ಶ. 1077

354. ಅದೇ. ಸೇಡಂ(ತಾ)15– ಸೇಡಂ; ಕ್ರಿ.ಶ. 1079

355. S.I.I. XX. 67– ಲಕ್ಷ್ಮೇಶ್ವರ; ಕ್ರಿ.ಶ. 1082

356. ಕ.ವಿ.ವಿ.ಶಾ.ಸಂ. 7. 2–ಗಬ್ಬೂರು; ಕ್ರಿ.ಶ. 1085

357. ಕ.ಜಿ.ಶಾ. ಚಿತಾಪುರ(ತಾ)28– ನಾಗಾಯಿ; ಕ್ರಿ.ಶ. 1086.

358. ಕ.ವಿ.ವಿ.ಶಾ.ಸಂ. 9. 108– ಅರಸಿಬೀದಿ; ಕ್ರಿ.ಶ. 1087

359. ಕ.ವಿ.ವಿ.ಶಾ.ಸಂ. 1. 83– ಹೂವಿನಹಡಗಲಿ; ಕ್ರಿ.ಶ. 1090

360. ಅದೇ. 93 – ಹೊಳಗುಂದಿ; ಕ್ರಿ.ಶ. 1093

361. E.C. 7.I. SK. 178;

362. S.I.I. VI. 3. 571; ಕ್ರಿ.ಶ. 1070

363. ಅದೇ. XI. i.. 135; ಕ್ರಿ.ಶ. 1075

364. ಅದೇ. XVIII. 76; ಕ್ರಿ.ಶ. 1072

365. S.I.I. XV. ii. 2; ಕ್ರಿ.ಶ. 1072

366. ಅದೇ. XI (i). 175; ಕ್ರಿ.ಶ. 1107

367. ಕ.ವಿ.ವಿ.ಶಾ.ಸಂ. 1. 217 – ತೆಲವಾಗಿಲು; ಕ್ರಿ.ಶ. 1034

368. ಕ.ಜಿ.ಶಾ. 31 – ನಿಪ್ಪಾಣಿ; ಕ್ರಿ.ಶ. 1037

369. ಕ.ವಿ.ವಿ.ಶಾ.ಸಂ.1. 24 ಮೋರಿಗೇರಿ; ಕ್ರಿ.ಶ. 1045

370. ಅದೇ. 27 – ಹರಪನಹಳ್ಳಿ; ಕ್ರಿ.ಶ. 1053

371. S.I.I. IX. i. 113; ಕ್ರಿ.ಶ. 1054

372. ಅದೇ. XX. 85– ಹಿರೇಬೇವಿನೂರ; ಕ್ರಿ.ಶ. 1124

373. ಅದೇ. 154 – ಕಡ್ಲೇವಾಡ; ಕ್ರಿ.ಶ. 1172

374. ಅದೇ. 93– ಮಲಘಾಣ; ಕ್ರಿ.ಶ. (11&12ನೇ ಶತಮಾನ)

375. ಅದೇ. 175; ಕ್ರಿ.ಶ. 1190

376. ಅದೇ. 111 ದೇವರನಾವದಗಿ; ಕ್ರಿ.ಶ. 1140

377. E.I. XV. ಪು. 82. ಕ್ರಿ.ಶ. 1054

378. ಇಲ್ಲಿ 'ಮ' ಎಂದರೆ ಮತ್ತರು ಎಂದರ್ಥ. ಇಲ್ಲಿ ಬರುವ 'ಕೇರಿ' ಎಂಬ ಪದವು ದೇವದಾಸಿಯರು ವಾಸಿಸುವ ಬೀದಿಯನ್ನು ವರ್ಣಿಸುವಂತಿದೆ. ಆದರೆ ಚಾಮರ ಹಾಕುವ ವೃತ್ತಿಯನ್ನು ಗಮನಿಸಿದಾಗ ಗರ್ಭಗುಡಿಯ ಮುಂಭಾಗದಲ್ಲಿ ಬೇರೆ ಬೇರೆ ಕರ್ತವ್ಯಗಳನ್ನು ಹೊತ್ತು ಬೇರೆ ಬೇರೆ ಕಂಭಗಳ ಬಳಿ ನಿಂತುಕೊಳ್ಳುವ ಹಾಗೂ ಹಾಡುವ, ನರ್ತಿಸುವ ದೇವದಾಸಿಯರಿರಬೇಕೆಂದು ಡಾ. ಎಂ.ಚಿದಾನಂದ ಮೂರ್ತಿಯವರು ಅಭಿಪ್ರಾಯ ಪಡುತ್ತಾರೆ. (ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪು. 204)

379. EI. XV. ಪುಟ. 87. ಕ್ರಿ.ಶ. 1058

380. Inscriptions from sholopur District 23 ಕ್ರಿ.ಶ. 1045

381. E.C. XI 20 ದಾವಣಗೆರೆ; ಕ್ರಿ.ಶ. 1045

382. ಚಿದಾನಂದಮೂರ್ತಿ ಎಂ.– 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಪು. 330

383. ಅದೇ.

384. E.C. VIII. Hi 65; ಕ್ರಿ.ಶ. 1125

385. ಅದೇ. Ci. 65; ಕ್ರಿ.ಶ. 1100

386. ಅದೇ. X. Sh. 21; ಕ್ರಿ.ಶ. 10ನೇ ಶತಮಾನ

387. ಅದೇ. IX. Cg. 46; ಕ್ರಿ.ಶ. 1005

388. ಅದೇ. X(0), Kl. 79; ಕ್ರಿ.ಶ. 9ನೇ ಶತಮಾನ

389. S.I.I. IX. i. 40 – ಕುಲಗೋಡು; ಕ್ರಿ.ಶ.977

390. ಕ.ವಿ.ವಿ.ಶಾ.ಸಂ. 2. 21 – ಹಲಗೇರಿ; ಕ್ರಿ.ಶ.1018

391. ಅದೇ. 9. 38 – ಐಹೊಳೆ; ಕ್ರಿ.ಶ. 1101

392. S.I.I. XX. B.K.I. IV. 70; ಕ್ರಿ.ಶ. 1108

393. ಅದೇ. 31; ಕ್ರಿ.ಶ. 1044

394. "ಕಾಲಕ್ಷೇಪೋ ನ ಕರ್ತಬ್ಯಂ ಆಯಿ ಕ್ಷೀಣೇ ದಿನೇ ದಿನೇ ।
ಯಮಸ್ಯ ಕರುಣಾ ನಾಸ್ತಿ ದಂಮಸ್ಯ ತುರಿತಾಗತ ॥" (E.C.VI Kd. 102; ಕ್ರಿ.ಶ. 1141)

ಗುತ್ತಿಯ ಶ್ರೀ ವಿಷ್ಣುದೇವರ ರಂಗಭೋಗದ ಪಾತ್ರಪಾವುಳಕ್ಕೆ ಅನೇಕ ಅಧಿಕಾರಿಗಳು ಒಟ್ಟಾಗಿ ದಾನ ನೀಡಿದ್ದಾರೆ.[77]

ಆರನೆಯ ವಿಕ್ರಮಾದಿತ್ಯನು ಇಟ್ಟಗಿಯಲ್ಲಿ ಚಂದಲೇಶ್ವರ ದೇವಸ್ಥಾನವನ್ನು ಕಟ್ಟಿಸಿ ಅಲ್ಲಿಗೆ ಸುಂದರ ಸ್ತ್ರೀಯರನ್ನು ಕರೆತಂದು ಅವರಿಗೆ ನೆಲೆ ಮಾಡಿಕೊಟ್ಟಂತೆ ಶಾಸನವೊಂದು ತಿಳಿಸುತ್ತದೆ.[78]

ಈ ಮೇಲಿನ ಎಲ್ಲ ಉಲ್ಲೇಖಗಳನ್ನು ಗಮನಿಸಿದಾಗ ಬಹುತೇಕ ಎಲ್ಲಾ ದೇವಾಲಯಗಳಲ್ಲಿ ಸೂಳೆಯರಿದ್ದರು. ಅಪಾರ ದಾನ-ದತ್ತಿ ನೀಡುವ ಮೂಲಕ ಸೂಳೆಯರ ಜೀವನ ವೆಚ್ಚವನ್ನು ಭರಿಸಲಾಗುತ್ತಿತ್ತು. ಇವರಲ್ಲಿ ಕೆಲವರು ಕೇವಲ ರಾಜನಿಗಾಗಿ ಅಥವಾ ಅರಮನೆಯಲ್ಲಿ ಮಾತ್ರ ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದರು. ಹಾಗೂ ಇನ್ನುಳಿದವರು ದೇವಸ್ಥಾನಗಳಲ್ಲಿ, ಸಾರ್ವಜನಿಕರಿಗಾಗಿ ತಮ್ಮ ಸೇವೆ ಸಲ್ಲಿಸಿರುವುದು ಕಂಡು ಬರುತ್ತದೆ.ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನೃತ್ಯಗಾರರು, ಪಾತ್ರದವರು ಹಾಗೂ ಸೂಳೆಯರನ್ನು ಗೌರವ ದೃಷ್ಟಿಯಿಂದ ಕಂಡು ಅವರನ್ನು ಸಮಾಜದ ಮುಖ್ಯ ವಾಹಿನಿಗೆ ತರುವಲ್ಲಿ ದೇವಾಲಯಗಳಿಗೆ ಬಿಟ್ಟ ದಾನ-ದತ್ತಿಗಳು ಪ್ರಮುಖ ಪಾತ್ರವಹಿಸಿವೆ ಎಂದು ಹೇಳಬಹುದು.

**೩) ವಾಸ್ತುಶಿಲ್ಪ :**

ಸಂಗೀತ ಮತ್ತು ನೃತ್ಯಕಲೆಗಳಿಗೆ ನೀಡಿರುವಂತೆಯೆ ದಾನ-ದತ್ತಿಗಳನ್ನು ವಾಸ್ತುಶಿಲ್ಪಕ್ಕೂ ನೀಡಲಾಗಿದೆ. ದೇವಾಲಯಗಳು ಪವಿತ್ರ ಹಾಗೂ ಸಾರ್ವಜನಿಕ ಸ್ಥಳಗಳಾದ್ದರಿಂದ ವಾಸ್ತುಶಿಲ್ಪವನ್ನು ಈ ಮೂಲಕ ಶಾಶ್ವತಗೊಳಿಸಬೇಕು ಎಂಬ ಉದ್ದೇಶದಿಂದ ವಾಸ್ತುಶಿಲ್ಪಗಳು ರಚನೆಯಾಗಿವೆ. ಧಾರ್ಮಿಕ ಹಾಗೂ ಸಾಂಸ್ಕೃತಿಕ ಕೇಂದ್ರಗಳಾಗಿದ್ದುದರ ಜೊತೆಗೆ ಚಾಲುಕ್ಯರ ಕಾಲದ ದೇವಾಲಯಗಳು ಅಪೂರ್ವ ಕಲಾಕೇಂದ್ರಗಳೂ ಅಗಿವೆ. ಇಟಗಿಯ ಮಹದೇವ ದೇವಾಲಯ ಕಲ್ಯಾಣ ಚಾಲುಕ್ಯರ ಮಹಾಸಾಮಂತ ಮಹದೇವ ದಂಡಾಧಿಪನಿಂದ ನಿರ್ಮಿಸಲ್ಪಟ್ಟಿದ್ದು 'ದೇವಾಲಗಳ ಚಕ್ರವರ್ತಿ' ಎಂದು ಪ್ರಸಿದ್ಧವಾಗಿದೆ.[79] 'ದಾನ ಚಿಂತಾಮಣಿ' ಎಂದು ಬಿರುದಾಂಕಿತಳಾಗಿದ್ದ ಅತ್ತಿಮಬ್ಬೆ ೧೫೦೦ ಬಸದಿ ನಿರ್ಮಾಣ ಕಾರ್ಯ ಮಾಡಿ "ಆ ಸಾಸಿರದಯ್ನೂರು ಬಸದಿಗಿದು ಕಳಶಮೆನಲ್ ಭಾಸುರಮಾಯ್ತು ಜೈನೇಂದ್ರಾವಾಸಂ ತೊಳಗುವಸುವರ್ಣ ಕಳಶೋನ್ನತಿಯಂ" ಎಂಬಂತೆ ಲಕ್ಕುಂಡಿಯಲ್ಲಿ ಬ್ರಹ್ಮಜಿನಾಲಯವನ್ನು ಕಟ್ಟಿಸಿದ್ದಾಳೆ.[80] ಕರ್ನಾಟಕದ ಉದ್ದಗಲಕ್ಕೂ ಹರಡಿಕೊಂಡಿರುವ ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯಗಳ ಸಂಖ್ಯೆ ೫೦೦ ಕ್ಕೂ ಹೆಚ್ಚು.(ಪು. ೧೨೦) ಅವುಗಳಲ್ಲಿ ಹಲವಾರು ದೇವಾಲಯಗಳು ಇಂದಿಗೂ ಅಪೂರ್ವ ಕಲಾಕೃತಿಗಳೊದಿಗೆ ಉಳಿದುಕೊಂಡು ಬಂದಿವೆ. ಅವುಗಳಲ್ಲಿ ಗದುಗಿನ ಸರಸ್ವತಿ ದೇವಾಲಯ,[81] ಲಕ್ಷ್ಮೇಶ್ವರದ ಸೋಮೇಶ್ವರ ದೇವಾಲಯ, ಲಕ್ಷ್ಮೀಲಿಂಗ ದೇವಾಲಯ,[82] ಡಂಬಳದ ದೊಡ್ಡಬಸಪ್ಪ ದೇವಾಲಯ,[83] ಲಕ್ಕುಂಡಿಯ ಕಾಶವಿಶ್ವೇಶ್ವರ ದೇವಾಲಯ,[84] ಕುರುವತ್ತಿಯ ಮಲ್ಲಿಕಾರ್ಜುನ ದೇವಾಲಯ[85] ಮುಂತಾದವು ಗಮನಾರ್ಹವಾಗಿವೆ.

ಕಲ್ಯಾಣ ಚಾಲುಕ್ಯರ ಹಲವು ಶಾಸನಗಳು ದೇವಾಲಯ ವಾಸ್ತುಶಿಲ್ಪಗಳನ್ನು ಮಾಡುತ್ತಿದ್ದ ಅನೇಕ ಶಿಲ್ಪಿಗಳಿಗೆ ದಾನ-ದತ್ತಿಗಳನ್ನು ನೀಡುವುದರ ಮೂಲಕ ಅವರನ್ನು ಪೋಷಿಸುತ್ತಿದ್ದಂತೆ ತಿಳಿದು ಬರುತ್ತದೆ. 'ಶ್ರೀ ಬಲೇಶ್ವರ ದೇಗುಲವಂ ಹಡಿಸಲಿಸಲು' ಬಡಗಿ ಮಲೋಜನಿಗೆ ಭೂಮಿದಾನ ಮಾಡಲಾಗಿದೆ.[86] ತೆಲವಗೆಯ ಭೋಗೇಶ್ವರ ದೇವಸ್ಥಾನದ ಕಲುಕುಟಿಗ ಮಾರಸಿಂಘೋಜನಿಗೆ ನಾಲ್ಕು ಮತ್ತರು ಭೂಮಿಯನ್ನು ದತ್ತಿ ಬಿಡಲಾಗಿದೆ.[87] ಮೋರಿಂಗೇರಿಯ ಗೋವಿಂದೇಶ್ವರ ದೇವರ ದೇವಸ್ಥಾನದ 'ಖಣ್ಣಸ್ಫುಟಿತಂ ಮೊದಲಾಗೆಲ್ಲಾ ಬೆಸನುಮಂ ನಡೆಯಿಸುವ ರೂವಾರಿ ಮುಚ್ಚೋಜನಿಗೆ ಹನ್ನೆರಡು ಮತ್ತರು ಭೂಮಿ ನೀಡಿದುದನ್ನು ಶಾಸನವೊಂದು ದಾಖಲಿಸಿದೆ.[88] ಕಲ್ಕೇರಿಯ ಸೋಮೇಶ್ವರ ದೇವಾಲಯದ ನಿರ್ಮಾಣದ ಕೆಲಸಕ್ಕೆ ಒಡೆಯರು ಕಲ್ಕುಟಿಗ ರೇವೋಜನಿಗೆ ಒಂದು ಮತ್ತರು ಗದ್ದೆ ಮತ್ತು ಒಂದು ಮನೆಯನ್ನು ದತ್ತಿ ನೀಡಲಾಗಿದೆ.[89]

ಗೊರಟದ ರುದ್ರೇಶ್ವರ ದೇವರಿಗೆ ಕೆಲಸ ಮಾಡಿದ ಒಡ್ಡರ ಬೋವನಿಗೆ ಸರ್ವಮಾನ್ಯವಾಗಿ ನಿವೇಶನವೊಂದನ್ನು ನೀಡಲಾಗಿದೆ.[90] ಬಂಕನ ಕಟ್ಟೆಯ ಬಂಕೇಶ್ವರ ದೇಗುಲವನ್ನು ಮಾಡಿದ ಎಬೋಜನಿಗೆ ಗದ್ದೆಯನ್ನು ದತ್ತಿ ನೀಡಲಾಗಿದೆ.[91] ಹೀಗೆ ಇನ್ನು ಹಲವು ಉಲ್ಲೇಖಗಳು ದೊರೆಯುತ್ತವೆ. ಕರ್ನಾಟಕದಲ್ಲಿ ವೈಶಿಷ್ಟ್ಯಪೂರ್ಣ ವಾಸ್ತುಶಿಲ್ಪ ರಚನೆಯಾಗಲು ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಕಲ್ಯಾಣ ಚಾಲುಕ್ಯರ ದಾನ-ದತ್ತಿಗಳು ಕಾರಣವಾಗಿವೆ ಎಂದು ಹೇಳಬಹುದು.

## ೫.೬ ದಾನ ಮತ್ತು ಆರ್ಥಿಕ ಸ್ಥಿತಿಗತಿ – ಆರ್ಥಿಕ ಪರಿಣಾಮಗಳು

ಶತಮಾನಗಳಿಂದಲೂ 'ಸಂಪತ್ತು' ಘರ್ಷಣೆಯನ್ನುಂಟು ಮಾಡುವ ಒಂದು ಪ್ರಬಲ ಸಾಧನವಾಗಿದ್ದು ಜನರನ್ನು ಒಡೆದು ಆಳುವ ಮೂಲಕ ಸಾಮಾಜಿಕ ಅಸಮತೋಲನವನ್ನುಂಟು ಮಾಡಿದೆ. ಇಂತಹ ಸಂದರ್ಭದಲ್ಲಿ ಕಲ್ಯಾಣ ಚಾಲುಕ್ಯರು 'ದಾನ' ಎನ್ನುವ ಮಹಾನ್ ಕಲ್ಪನೆಯ ಮೂಲಕ ಸಂಪತ್ತನ್ನು ವಿಕೇಂದ್ರೀಕರಣಗೊಳಿಸುವ ಮೂಲಕ ಸಾಮಾಜಿಕ ಸಮಾನತೆಯನ್ನು ಜಾರಿಗೊಳಿಸಲು ಪ್ರಯತ್ನಿಸಿದಂತೆ ತೋರುತ್ತದೆ.

ದಾನವನ್ನು ನೀಡುವ ಮೂಲ ಉದ್ದೇಶ ಧಾರ್ಮಿಕವಾಗಿದ್ದರೂ ಅದರಲ್ಲಿ ಇನ್ನೂ ಹಲವು ಉದ್ದೇಶಗಳು ಅಡಗಿವೆ ಎಂಬುದನ್ನು ಈ ಹಿಂದೆ ಎರಡನೆಯ ಅಧ್ಯಾಯದಲ್ಲಿ ತಿಳಿದಿದ್ದೇವೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಜನರು ತಮ್ಮ ತ್ಯಾಗಗುಣವನ್ನು ಮೆರೆಯುವುದರ ಜೊತೆಗೆ ಹಲವು ಆರ್ಥಿಕ ಬದಲಾವಣೆಗಳಿಗೂ ಕಾರಣರಾಗಿದ್ದಾರೆ. ಇಲ್ಲಿ 'ದಾನ' ಒಂದು ಆದರ್ಶ ಮೌಲ್ಯವಾಗಿಯೂ ರಾಜನೀತಿಯ ಮಾರ್ಗವಾಗಿಯೂ ಕೆಲಸ ಮಾಡಿದೆ. ತಮ್ಮ ತಮ್ಮ ಧರ್ಮಗಳ ಏಳ್ಗೆಗಾಗಿ ಜಾತಿ ಪ್ರಾಬಲ್ಯಕ್ಕಾಗಿ, ಮತ ಪ್ರಾಬಲ್ಯಕ್ಕಾಗಿ, ವೈಯಕ್ತಿಕ ಪುರುಷಾರ್ಥಕ್ಕಾಗಿ, ಕೀರ್ತಿಗಾಗಿ, ರಾಜಕೀಯ ಉದ್ದೇಶಗಳಿಗಾಗಿ ನೀಡಿದ ದಾನಗಳು ಪ್ರತಿ ಹಂತದಲ್ಲೂ ಸಮಾಜದಲ್ಲಿನ ಇನ್ನೊಂದು ವರ್ಗವನ್ನು ತನ್ನ ಪ್ರತಿ ಸ್ಪರ್ಧಿಯಂತೆ ಕಾಣುತ್ತಾ

ಹೋಗಿ ಧರ್ಮ ಸಂಘರ್ಷಗಳಿಗೆ. ಕಾರಣವಾದಂತೆ ತೋರುತ್ತದೆ. ಏಕೆಂದರೆ, ಕಲ್ಯಾಣ ಚಾಲುಕ್ಯರ ಅವಧಿಯಲ್ಲಿಯೇ ಮೊಟ್ಟ ಮೊದಲು ಜೈನ ಹಾಗೂ ಶೈವರಲ್ಲಿ ಸಂಘರ್ಷಗಳು ಪ್ರಾರಂಭವಾದವು.[92] ಮುಂದೆ ಇದು ಶರಣರ ದಾಸೋಹ ತತ್ವ, ಕಾಯಕ ತತ್ವಗಳಿಗೆ ಕಾರಣವಾದಂತೆ ತೋರುತ್ತದೆ.

ಆರ್ಥಿಕ ದೃಷ್ಟಿಯಿಂದ ಬ್ರಾಹ್ಮಣರಿಗೆ ನೀಡಿದ ದಾನಗಳು ಮತ್ತು ದೇವಾಲಯಗಳಿಗೆ ನೀಡಿದ ದಾನಗಳು ಪ್ರಮುಖವಾಗಿವೆ. ಆಳುವವರು ಮೊತ್ತಮೊದಲು ಬ್ರಾಹ್ಮಣರಿಗೆ ದಾನಗಳನ್ನು ನೀಡಿದಾಗಿನಿಂದಲೂ ದಕ್ಷಿಣ ಭಾರತ ಆರ್ಥಿಕ ಬೆಳವಣಿಗೆಯಲ್ಲಿ ಮಹತ್ವದ ಬದಲಾವಣೆಗಳಾಗುತ್ತ ಬಂದಿವೆ. ಬರ್ಟನ್ ಸ್ಟೀನ್ ಅವರು ಹೇಳುವಂತೆ "ಬ್ರಹ್ಮದೇಯಗಳು (ಬ್ರಾಹ್ಮಣರಿಗೆ ನೀಡಿದ ದಾನಗಳು) ಕೃಷಿ ಚಟುವಟಿಕೆಯ ಮುಖ್ಯ ಕೇಂದ್ರಗಳಾಗಿದ್ದವು."[93] ಬ್ರಾಹ್ಮಣರಿಗೆ ನೀಡಿದ ಗ್ರಾಮಗಳು ಮುಖ್ಯವಾಗಿ ಫಲವತ್ತಾದ ಮತ್ತು ಒಳ್ಳೆಯ ನೀರಿನ ಸೌಲಭ್ಯವಿರುವ ಬಯಲು ಪ್ರದೇಶಗಳಲ್ಲಿ ಕಂಡು ಬರುತ್ತಿದ್ದವು. ಅಲ್ಲಿ ಬೇಸಾಯಕ್ಕೆ ಅಗತ್ಯವಾದ ಭದ್ರತೆ, ನೈಸರ್ಗಿಕ ಪರಿಸ್ಥಿತಿ ಮತ್ತು ಶಾಂತಿಗಳು ಇರುತ್ತಿದ್ದವು. ವಿಶೇಷವಾಗಿ ಬ್ರಾಹ್ಮಣರಿಗೆ ಹಾಗೂ ದೇವಾಲಯಗಳಿಗೆ ನಿರ್ನೆಲ, ಗದ್ದೆ, ಕೆರೆಯ ಕೆಳಗಿನ ಭೂಮಿಯನ್ನು ದಾನ ನೀಡಿರುವುದನ್ನು ಅನೇಕ ಶಾಸನಗಳು ಉಲ್ಲೇಖಿಸುತ್ತವೆ.[94]

ಅದೇ ರೀತಿ ತೋಟಗಳನ್ನು ದಾನ ಬಿಟ್ಟಿರುವುದು ಕೂಡ ಇಂಥದ್ದನ್ನೇ ಸೂಚಿಸುತ್ತದೆ. ಇವೆಲ್ಲ ನೀರು, ನೀರಾವರಿ ಸೌಲಭ್ಯಗಳನ್ನು ಹೊಂದಿದ್ದ ಫಲವತ್ತಾದ ಭೂಮಿಗಳು. ನದಿಗಳು, ತಟಾಕಗಳು, ಕಾಲುವೆಗಳು ಮತ್ತು ಕೆರೆಗಳಿಂದ ಇಂಥ ಭೂಮಿಗೆ ನೀರು ಒದಗುತ್ತಿದ್ದಿತು. ಹೀಗಾಗಿ ಬ್ರಾಹ್ಮಣರ ನೆಲೆಗಳಾಗಿದ್ದ ಅಗ್ರಹಾರಗಳು ಸದಾ ಹಸಿರು ಮತ್ತು ಸಮೃದ್ಧಿಯಿಂದ ಕಂಗೊಳಿಸುತ್ತಿದ್ದವು. ಅಗ್ರಹಾರವಾಗಿದ್ದ 'ಪೊಸವಡಂಗಿಲೆ'ಯನ್ನು ಕುರಿತು ಹಿರೇಹಡಗಲಿಯ ಶಾಸನವೊಂದು[95] "ಮನೆ ಮನೆ ಶಂಕರಾಚ್ಯುತ ಬುಧಾತಿಥಿ ಪೂಜೆಯನಗ್ನಿಹೋತ್ರದಿಂದನುಪಮ ವೇದದನಾದ ಮಠ ಸತ್ರ ಸಭಾ ಶಿವ ವಿಷ್ಣುವಾಗ್ನಿ ಕೇತನ ತತಿ ಕೇರಿಗೇರಿ ಜನರಿಂದ ಸತಿ ತಿಂತಿಣಿ ಬೀದಿ ವೀದಿ ತಾನೆನಿಸುವುದಾಗಳಂ ಪೊಸ ವಡಂಗಿಲೆ ವಿಶ್ವ ಮಹೀತಳಾಗ್ರದೊಳು"ಎಂದು ಹೇಳುತ್ತ ಭೂಮಿಯಲ್ಲಿ ಪೊಸವಡಂಗಿಲೆಯಂಥ ಚೆಲುವಾದ ಅಗ್ರಹಾರವಿರಲಾರದು ಎಂದು ವರ್ಣಿಸುತ್ತದೆ. ಅಂದರೆ ಅಗ್ರಹಾರಗಳು ಎಲ್ಲರೀತಿಯ ಸುಖ ಸೌಕರ್ಯಗಳನ್ನು ಹೊಂದಿದ್ದವು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಬ್ರಾಹ್ಮಣರ ಮೇಲಿನ ಗೌರವ ಭಕ್ತಿಗಳಿಂದ, ಅವರ ವಿದ್ವತ್ತಿನ ಪ್ರಭಾವದಿಂದ ಸಾಕಷ್ಟು ದಾನಗಳು ಸಲ್ಲಿಸಲ್ಪಟ್ಟಿವೆ. ಅಗ್ರಹಾರಗಳು ತಮ್ಮ ಸುತ್ತಲಿನ ಗ್ರಾಮಗಳ ಮೇಲೂ ಪ್ರಭಾವವನ್ನು ಬೀರುತ್ತಿದ್ದವು. 'ಕ್ರಿ.ಶ. ೮೫೦ ರಿಂದ ಕ್ರಿ.ಶ. ೧೮೦೦ರ ನಡುವಿನ ಅವಧಿಯಲ್ಲಿ ದಕ್ಷಿಣ ಭಾರತದ ಕೃಷಿ ವ್ಯವಸ್ಥೆಯಲ್ಲಿ ಬ್ರಹ್ಮದೇಯವಾಗಿ ನೀಡಿದ ಗ್ರಾಮಗಳ ಪಾತ್ರವನ್ನು ಗೌಣವಾಗಿ ಪರಿಗಣಿಸಲು ಸಾಧ್ಯವೇ ಇಲ್ಲ' ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.[96] ವಾಸ್ತವವಾಗಿ ಕೃಷಿಯಲ್ಲಿ ತೊಡಗಿದ್ದ ಬ್ರಾಹ್ಮಣೇತರ ಕುಟುಂಬಗಳ ಸಂಖ್ಯೆ ನಿಸ್ಸಂದೇಹವಾಗಿ ಬ್ರಾಹ್ಮಣರಿಗಿಂತ ತುಂಬಾ ಹೆಚ್ಚಾಗಿತ್ತು ಅದರೆ ಮುಖ್ಯವಾದ ಸಾಮಾಜಿಕ

ಆರ್ಥಿಕ ಮಧ್ಯವರ್ತಿ ಪಾತ್ರದಲ್ಲಿ ಬ್ರಾಹ್ಮಣರು ಅಧಿಪತ್ಯ ಸ್ಥಾಪಿಸಿದ್ದರು.[97]

ಅನೇಕ ಅರಸರು ಸಾಮಂತರು, ಅಧಿಕಾರಿಗಳು ಬ್ರಾಹ್ಮಣರಿಗೆ ಮತ್ತು ಅವರಿದ್ದ ಅಗ್ರಹಾರಗಳಿಗೆ ಭೂಮಿದಾನ ಮಾಡುತ್ತಿದ್ದುದರಿಂದ ಬ್ರಾಹ್ಮಣರಲ್ಲಿ ಭೂಮಿಯ ಒಡೆತನ ಸಂಗ್ರಹವಾಗುತ್ತ ಹೋಯಿತು. ಇದಲ್ಲದೆ ವಿವಿಧ ರೀತಿಯ ತೆರಿಗೆಗಳಿಂದ ಇವರು ಮುಕ್ತರಾಗಿದ್ದರು. ಭೂಮಿ, ಹಣದಾನಗಳ ಜೊತೆಗೆ ಸುಂಕ, ಕಾಣಿಕೆ, ನಿವೇಶನ, ಮನೆ, ಸುವರ್ಣ, ಭಟ್ಟ ವೃತ್ತಿ, ಪುರಾಣ ಪಠಣ, ಯಜನ, ಯಾಜನಗಳಿಂದಲೂ ವರಮಾನ ಸಂದಾಯವಾಗುತ್ತಿತ್ತು. ದಾನದ ಮೂಲಕ ಜಮೀನ್ದಾರರಿಂದ ಸಂಪತ್ತಿನ ವಿತರಣೆಯಾದರೂ ಮತ್ತೊಂದು ವಿಧದಲ್ಲಿ ಬ್ರಾಹ್ಮಣರಿಗೆ ವರ್ಗಾವಣೆಯಾಗಿ, ಸಂಪತ್ತಿನ ಅಸಮಾನ ಹಂಚಿಕೆಗೂ ದಾರಿ ಮಾಡಿಕೊಟ್ಟಿತ್ತು.

ಬ್ರಾಹ್ಮಣರಿಗೆ ನೀಡಿದ ದಾನಗಳಂತೆಯೇ ದೇವಾಲಯಗಳಿಗೆ ನೀಡಿದ ದಾನಗಳ ಪರಿಸ್ಥಿತಿಯೂ ಹೀಗೇ ಇತ್ತು. ದೇವಾಲಯಗಳು ಸಮಾಜದ ಕೇಂದ್ರ ಬಿಂದುವಾಗಲು ಇದು ಪ್ರಮುಖ ಕಾರಣವಾಗಿತ್ತು. ದೇವ ಅಂಗಭೋಗ, ರಂಗಭೋಗ, ನೃತ್ಯಗೀತ, ವಾದ್ಯ, ಪಾತ್ರ ಹೀಗೆ ನಾನಾ ಉದ್ದೇಶಗಳಿಂದ ದಾನದ ಮೂಲಕ ಸಂಪತ್ತು ದೇವಾಲಯಗಳನ್ನು ಸೇರಿದ್ದರಿಂದ ದೇವಾಲಯಗಳು ಅಂದಿನ ಕಾಲದಲ್ಲಿ ಬ್ಯಾಂಕುಗಳಂತೆ ವ್ಯವಹರಿಸುತ್ತಿದ್ದುದೂ ಉಂಟು. ಹಣದಾನ ನೀಡಿದಾಗ ಅನೇಕರು ಆ ಹಣದಿಂದ ಬರುವ ಬಡ್ಡಿಯಲ್ಲಿ ದೇವರ ಸೇವಾ ಕಾರ್ಯಗಳನ್ನು ನಿರ್ವಹಿಸಲು ವ್ಯವಸ್ಥೆ ಮಾಡುತ್ತಿದ್ದರು.[98] ಮೂಲಧನ ಹಾಗೆಯೇ ಇದ್ದು ನಿಯಮಿತವಾಗಿ ಅದರ ಆದಾಯ ದೇವಾಲಯಗಳಿಗೆ ಸಲ್ಲುತ್ತಲೇ ಇತ್ತು. ದೇವಾಲಯಗಳಿಗೆ ಯಾವನೋ ಒಬ್ಬ ವ್ಯಕ್ತಿಯು ಮಾತ್ರ ದಾನ ನೀಡಿಲ್ಲ. ದೇವಾಲಯ ನಿರ್ಮಾಣದ ಸಂದರ್ಭದಲ್ಲಿಯೇ ಅದರ ಎಲ್ಲ ಅಗತ್ಯಗಳಿಗೂ ವ್ಯವಸ್ಥೆ ಮಾಡುತ್ತಿದ್ದುದೇ ಅಲ್ಲದೇ ವಿವಿಧ ಕಾರಣಗಳಿಂದ ಬೇರೆ ಬೇರೆ ವ್ಯಕ್ತಿಗಳು ದಾನ-ದತ್ತಿ ಬಿಡುತ್ತಿದ್ದುದರಿಂದ ಹೆಚ್ಚಿನ ಸಂಪತ್ತು ಶೇಖರಣೆಯಾಗಲು ಸಾಧ್ಯವಿತ್ತು. ಇದರಿಂದ ದೇವಾಲಯದ ಒಡೆತನದಲ್ಲಿ ಒಬ್ಬೊಬ್ಬ ಜಮೀನ್ದಾರನಿಗಿಂತ ಕಡಿಮೆಯಿಲ್ಲದಷ್ಟು ಆಸ್ತಿ ಸಂಗ್ರಹವಾಯಿತು. ದೇವಾಲಯಗಳು ಸಾಮೂಹಿಕ ಆಸ್ತಿಯಾಗಿದ್ದುದ್ದೇನೋ ನಿಜ. ಆದರೆ ಅದರಿಂದ ಬರುತ್ತಿದ್ದ ಆದಾಯ ವೈಯಕ್ತಿಕವಾಗಿ ಎಲ್ಲರಿಗೂ ಹಂಚಿಕೆಯಾಗುತ್ತಿರಲಿಲ್ಲ.

ದಾನಕಾರ್ಯಗಳಲ್ಲಿ ಆರ್ಥಿಕ ಸಮಾನತೆ ಮತ್ತು ಆರ್ಥಿಕ ಅಸಮಾನತೆಯ ಎರಡೂ ಅಂಶಗಳನ್ನು ಕಾಣಲು ಸಾಧ್ಯವಿದೆ. ಒಂದೆಡೆ ಬ್ರಾಹ್ಮಣರಿಗೆ ಮತ್ತು ದೇವಾಲಯಗಳಿಗೆ ನೀಡಿದ ಹೆಚ್ಚಿನ ದತ್ತಿಗಳಿಂದ ಆರ್ಥಿಕ ಅಸಮತೋಲನವು ಕಂಡು ಬಂದರೆ, ಅದೇ ವೇಳೆಗೆ ಹಲವಾರು ದಾನ-ದತ್ತಿಗಳು ಸಾಮಾನ್ಯ ಜನರಿಗೂ ನೀಡಲ್ಪಟ್ಟಿವೆ. ಅಧಿಕಾರಿಗಳಿಗೆ, ಸೇವಾ ವರ್ಗದವರಿಗೆ ವೇತನದ ಬದಲಾಗಿ ಭೂಮಿದಾನವನ್ನು ನೀಡುತ್ತಿದ್ದುದರಿಂದ ಭೂಮಿಯ ಹಂಚಿಕೆಯಾಗಿ ಆರ್ಥಿಕ ಸಮಾನತೆಯೂ ಉಂಟಾಗುತ್ತಿತ್ತು. ಎಲ್ಲ ಭೂದಾನಗಳಲ್ಲಿ ಫಲವತ್ತಾದ ಹಾಗೂ ನೀರಾವರಿ ಸೌಲಭ್ಯ ಹೊಂದಿದ ಭೂಮಿಯನ್ನೇ ನೀಡಿಲ್ಲ. ಕೆಲವು ಸಂದರ್ಭಗಳಲ್ಲಿ

ಎರೆಕಾಡು[99] (ಸಾಗುವಳಿ ಮಾಡದಿದ್ದ ಭೂಮಿ), ಕೆಂಮೊಗ[100] (ಕೆಂಪು ಮತ್ತು ಹಳದಿ ಮಟ್ಟಿ ಮಿಶ್ರಿತ ಮಣ್ಣು), ಖರಭೂಮಿ[101] (ಬಿರುಸು ನೆಲ), ತಕ್ಕಿಲು[102] (ಹುಲ್ಲುಗಾವಲು), ಪರಲು[103] (ಹರಳು ಮಿಶ್ರಿತ ಭೂಮಿ), ಬೆಳ್ದೆಲೆಭೂಮಿ[104] (ಹಾಳುಬಿದ್ದ) ಮುಂತಾದ ಉಳುಮೆ ಮಾಡದಂಥ ಭೂಮಿಯನ್ನು ದಾನ ಮಾಡಲಾಗುತ್ತಿತ್ತು. ಇಂಥ ಸಂದರ್ಭದಲ್ಲಿ ದಾನ ಪಡೆದವರು ಹಾಳು ಬಿದ್ದ ಭೂಮಿಯನ್ನೇ ತಮ್ಮ ಪರಿಶ್ರಮದಿಂದ ಉಳುಮೆಗೆ ಯೋಗ್ಯವಾದ ಭೂಮಿಯನ್ನಾಗಿ ಪರಿವರ್ತಿಸಿ ಅದರಲ್ಲಿ ಉತ್ಪಾದನೆ ಮಾಡುತ್ತಿದ್ದರು. ಇದರಿಂದ ಸಾಕಷ್ಟು ಪ್ರಮಾಣದಲ್ಲಿ ಸಾಗುವಳಿಯಾಗದೇ ಹಾಳು ಬಿದ್ದ ಭೂಮಿಯಿಂದಲೂ ಉತ್ಪಾದನೆ ಮಾಡಲು, ಅದರಿಂದ ಆರ್ಥಿಕವಾಗಿ ಲಾಭ ಗಳಿಸಲೂ ಸಾಧ್ಯವಾಗುತ್ತಿತ್ತು. ದೊರೆ ಜಯಸಿಂಹನು ಮಡದಿಯು ಅಪೇಕ್ಷೆಯ ಮೇರೆಗೆ 'ಯಾರೂ ಮನ್ನಿಸದ ಯಾರಿಗೂ ಬೇಡವಾದ' ಒಂದು ಪ್ರದೇಶವನ್ನು ಕನ್ಯಾದಾನವಾಗಿ  ಕೊಡುತ್ತಾನೆ. ಇಂಥಹ ಯಾರೂ ಒಲ್ಲದ ಕಲ್ಲಾದ ಬೆಟ್ಟವನ್ನು ದಾನವಾಗಿ ಪಡೆದ ರಾಣಿ ಮೋಚಬ್ಬರಸಿ ಅದನ್ನು 'ಸವತಳವಮಾಡಿ', "ಊರ ಕಡೆಯ ತೊರೆಯ ತ಼ಡಿಯ ಕರಿಯಕಲ್ಲ ಮೋರದಿಂದ ಪುತ್ತೂರು ಪೊಲೆಯರಿಪ್ಪ ಕೇರಿಯೊವಳ ನೀರ ಭೂಮಿಯಂ ಸಾರ ಭೂರುಹಂಗಳೊಳಿಯೋಳಗೆ ನೆರೆದ ಕೆರಯನಂ ಬೋರು ಹಾಕಿ ತನ್ನ ಧನದಿನೊಪ್ಪಿ"ಗ್ರಾಮ ರಚಿಸಿದುದನ್ನು ತಳಂಗೆರೆಯ ಶಾಸನ ತಿಳಿಸುತ್ತದೆ.[105] ಅಲ್ಲದೇ ಅಲ್ಲಿ ಮೋಚಬ್ಬರಸಿ ಓಡಿಲ, ಮನೆ, ನಂದನವನ ಮಾಡಿಸಿ, ಕೆರೆ ಕಟ್ಟಿಸಿ 'ತೊರೆಯ ಸೆರೆಯಿಟ್ಟೊವಳ ನೆಲನಂ ಪಿರಿದುವಮಾಯಾಸದಿಂ ಸುಕ್ಷೇತ್ರ' ಮಾಡಿಸಿದ್ದನ್ನು ತಿಳಿಯುಬಹುದು. ಇಲ್ಲಿ ಹಾಳುಬಿದ್ದ, ಯಾರೂ ಉಪಯೋಗಿಸದೇ ಇದ್ದಂಥ ಭೂಮಿಯುನ್ನು ಉಪಯೋಗಕ್ಕೆ ಯೋಗ್ಯವಾದ ಸ್ಥಳವನ್ನಾಗಿ ಪರಿವರ್ತಿಸಿದ ಮೋಚಬ್ಬರಸಿಯು ಸಾಹಸ ಇಲ್ಲಿ ವ್ಯಕ್ತವಾಗಿದೆ.[106] ಹಾಗೆಯೇ ಇಂಥ ಭೂಮಿಯನ್ನು ದಾನವಾಗಿ ಪಡೆದವರು ಪರಿಶ್ರಮದಿಂದ ಉಳುವ ಭೂಮಿಯನ್ನಾಗಿ ಪರಿವರ್ತಿಸಿ ತಮ್ಮ ಜೀವನಕ್ಕೂ, ದಾರಿ ಮಾಡಿಕೊಂಡು ಪರೋಕ್ಷವಾಗಿ ರಾಜ್ಯದ ಬೊಕ್ಕಸವನ್ನು ತೆರಿಗೆಯ ಮೂಲಕ ತುಂಬಿಸುತ್ತಿದ್ದರೆಂದು ಊಹಿಸಲು ಸಾಧ್ಯವಿದೆ.

ಸಾವಿರಾರು ಸಂಖ್ಯೆಯಲ್ಲಿ ದಾನಗಳನ್ನೇ ಹೇಳಲು ರಚಿತವಾದ ಶಾಸನಗಳಲ್ಲಿ ನಿರ್ದಿಷ್ಟ ಪ್ರಮಾಣದ ಅಳತೆಗಳು, ಮಾಪನಗಳು, ಹಣದ ವಿವಿಧ ಬಗೆಗಳು, ವಿವಿಧ ಸ್ವರೂಪದ ಭೂಮಿ, ತೆರಿಗೆಗಳು, ವರ್ತಕ ಸಂಘಗಳು, ವ್ಯಾಪಾರ ವಾಣಿಜ್ಯಗಳಲ್ಲಿ ಅಂದು ಅಸ್ತಿತ್ವದಲ್ಲಿದ್ದ ವೃತ್ತಿಗಳು, ಮುಂತಾದ ಆರ್ಥಿಕ ಅಂಶಗಳ ಬಗೆಗೆ ಮಾಹಿತಿ ದೊರೆಯುತ್ತದೆ. ಇದರಿಂದ ಕಲ್ಯಾಣ ಚಾಲುಕ್ಯರ ಕಾಲದ ಆರ್ಥಿಕ ಸ್ಥಿತಿಗತಿಗಳನ್ನು ತಿಳಿಯಲು ಸಹಾಯಕವಾಗುತ್ತದೆ.

ಹೀಗೆ ಕಲ್ಯಾಣ ಚಾಲುಕ್ಯರ ದಾನ ಮತ್ತು ಆರ್ಥಿಕ ಸ್ಥಿತಿಗತಿ ಅಥವಾ ಆರ್ಥಿಕ ಪರಿಣಾಮಗಳನ್ನು ವಿವೇಚಿಸಬಹುದು.

### ೫.೭ ದಾನ ಮತ್ತು ಸಾಮಾಜಿಕ ಕಾರ್ಯಗಳು – ಸಾಮಾಜಿಕ ಪರಿಣಾಮಗಳು

ಕಲ್ಯಾಣ ಚಾಲುಕ್ಯರ ದಾನ–ದತ್ತಿಗಳ ನಿಜವಾದ ಸತ್ಫಲಗಳು ಕಂಡು ಬರುವುದು. ಸಾಮಾಜಿಕ ರಂಗದಲ್ಲಿ. ಸಾಮಾಜಿಕ ಚಟುವಟಿಕೆಗಳಾದ ಕೆರೆ ಕಟ್ಟಿಸುವುದು. ಬಾವಿಯನ್ನು ಅಗೆಸುವುದು, ತಟಾಕ ನಿರ್ಮಿಸುವುದು. ಅರವಟ್ಟಿಗೆಗಳನ್ನು ತೆರೆಯುವುದು. ಅನ್ನದಾನದ ಛತ್ರಗಳನ್ನು ಸ್ಥಾಪಿಸುವುದು, ಬಸದಿ–ದೇಗುಲಗಳನ್ನು ಕಟ್ಟಿಸುವುದು. ಆರವೆಗಳನ್ನು, ಶಾಲೆ ಅಗ್ಗಿಷ್ಟಿಕೆಗಳನ್ನು ನಿರ್ಮಿಸುವುದು. ಇಂಥ ಹಲವು ಕಾರ್ಯಗಳು ಸಾವಿರಾರು ವರ್ಷಗಳು ಗತಿಸಿದರೂ ನಿಚ್ಚಳವಾಗಿ ಕೆಲವಾದರೂ ಇಂದಿಗೂ ಪ್ರತಿಫಲಗಳನ್ನು ಕೊಡುತ್ತಿವೆ. ಇಂದಿನ ಸಮಾಜಕ್ಕೂ ಉಪಭೋಗ್ಯವಾಗಿವೆ.

ಕೆರೆಯಂ ಕಟ್ಟಿಸು, ಬಾವಿಯಂ ಸವೆಸು
ದೇವಾಗಾರಂ ಮಾಡಿಸ
ಜ್ಜೆರೆಯೊಳ್ ಸಿಲ್ಕಿದನಾಥರಂ ಬಿಡಿಸು
ಮಿತ್ರರ್ಗಿಂಬುಕೆಯ್ ನಂಬಿದ
ರ್ಗೆರೆವಟ್ಟಾಗಿರು ಶಿಷ್ಯರಂ ಪೊರೆ ಎನುತ್ತಿಂ
ತೆಲ್ಲಮಂ ಪಿಂತೆತಾ
ನೆರೆದಲ್ ಪಾಲೆರೆವಂದು ತೊಟ್ಟು ಕಿವಿಯೊಳ್
ಲಕ್ಷ್ಮೀಧರಾಮಾತ್ಯನಾ ॥

ಎಂಬುದನ್ನು ಕ್ರಿ.ಶ. ೧೪೧೧ರ ವಿಜಯನಗರದ ಶಾಸನವೊಂದು ಹೇಳುತ್ತದೆ. ಇದು ಪ್ರೌಢ ಪ್ರತಾಪ ದೇವರಾಯನ ಮಂತ್ರಿ ಲಕ್ಷ್ಮೀ ಧರಾಮಾತ್ಯನು ಬರೆಯಿಸಿದ ಶಾಸನ. ಸಾಮಾನ್ಯವಾಗಿ ಜಗತ್ತಿನ ಯಾವುದೇ ಭಾಗದ ಅರಸರು ಸಹಜವಾಗಿ ದಾಹಿಗಳು, ಪಿಪಾಸಿಗರು, ಅಧಿಕಾರದ ಮದೋನ್ಮತ್ತರು ಆಗಿದ್ದು ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸುವತ್ತ, ಐಹಿಕ ಭೋಗಗಳನ್ನು ಅನುಭವಿಸುವತ್ತ, ವೈರಿಗಳನ್ನು ಸದೆಬಡಿಯುವತ್ತ ಹೆಚ್ಚಿನ ಗಮನ ಹರಿಸಿದರು. ಆದರೆ ಸಾಮಾಜಿಕವಾದ ಇಂಥ ಕೆಲಸ ಕಾರ್ಯಗಳನ್ನು ಮಾಡತ್ತ, ಕೆರೆ, ಭಾವಿ, ದೇವಾಗಾರಗಳನ್ನು ಮಾಡಿಸಿ, ಸಂಕಟದಲ್ಲಿ ಸಿಲುಕಿದ ಅನಾಥರನ್ನು ಬಿಡಿಸಿ, ಗೆಳೆಯರಿಗೆ ಉತ್ತಮವಾದುದನ್ನು ಮಾಡಿ, ನಂಬಿದವರಿಗೆ ನೆರವಾಗಿ ಒಳ್ಳೆಯವರನ್ನು ರಕ್ಷಿಸಿದ ಪ್ರಾಂಜಲ ಮನಸ್ಸಿನ ಅರಸರು ಆಗಿ ಹೋದುದು ಅಪರೂಪ. ಕನ್ನಡ ನಾಡನ್ನು ಆಳಿದ ಇಂಥ ಹಲವು ಅರಸರು ನಮಗೆ ದೊರೆಯುತ್ತಾರೆ. ಕಲ್ಯಾಣ ಚಾಲುಕ್ಯ ಅರಸರೂ ಸಹ ಸಮಾಜೋಪಯೋಗಿಯಾದ ಹಲವು ಕಾರ್ಯಗಳಿಗೆ ಧಾರಾಳವಾಗಿ ದಾನ–ದತ್ತಿಗಳನ್ನು ನೀಡುವ ಮೂಲಕ ಇಂದಿಗೂ ಜನ ಮಾನಸದಲ್ಲಿ ನೆಲೆಸಿದ್ದಾರೆ.

ಕಟ್ಟಸಿದಂ ಕೆರೆಯಂ ಮೋ
ರಿಟ್ಟಗೆಳ್ತದ್ರ್ಧಾವಾಸಿ ನಾಡೋಳನೀಗಳ್
ಕಟ್ಟಿ ಕೆರೆಭಾವಿ ದೇಗುಲ

ಮಿಟ್ಟಾರವೆ ತೋರ್ಪುವು ಗೋನವೃಪಾಳಕನಂ ॥

ಎಂದು ಸಾಂತರರಲ್ಲಿ ಅಧಿಕವಾಗಿದ್ದ ಸಾಮಂತ ಗೋನರಸನನ್ನು ಒಂದು ಶಾಸನ ವರ್ಣಿಸಿದೆ.[107] ಈತನು ಇಟ್ಟಿಗೆಗಳನ್ನು ಒಟ್ಟೈಸಿ ಕೆರೆಗಳನ್ನು ಕಟ್ಟಿಸಿದನು. ತರ್ದವಾಡಿ ನಾಡೊಳಗೆ ಈಗಲೂ ಕೆರೆ, ಕಟ್ಟೆ, ಬಾವಿ, ದೇಗುಲ, ಉದ್ಯಾನಗಳೆಲ್ಲ ಗೋನರಸನ ದಾನಗುಣಕ್ಕೆ ಸಾಕ್ಷಿಯಾಗಿ ನಿಂತಿವೆ ಎಂದು ಶಾಸನವೇ ಹೇಳುತ್ತದೆ. ಅದೇ ರೀತಿ

"ಕೆರೆ ಬಾವಿ ಬಸದಿ ದೇಗುಲ
ಮರವಂತಿಗೆ ತೀರ್ಥಚತ್ರಮಾರವೆ ಮೊದಲಾಗರಿಕೆಯ ಧರ್ಮಾಧಿಗಳು
ನೆರೆಮಾಡಿಸಿನೋತ್ತಳೆಸಕೆ ಚಟ್ಟಲದೇವಿ"

ಎಂದು ಸಾಂತರ ರಾಣಿ ಚಾಲುಕ್ಯದೇವಿಯ ಲೋಕಹಿತ ಕಾರ್ಯವನ್ನು ಹುಂಚದ ಶಾಸನ ವಿಶದಪಡಿಸದೆ.[108]

"ದಾನದೊಳನ್ನ ದಾನಮೆ ಸಾರಂ
ದೀನಾನಾಥರ್ಗೆ ತುಷ್ಟಿದಾನಮೆನುತ್ತುಂ
ತಾನರಿದು ಜಕ್ಕಿಯಬ್ಬೆಯ
ಶೋನಿಧಿ ಸತ್ರಕ್ಕೆ ಭೂಮಿದಾನಮನಿತ್ತಳ್ ॥"[109]

ಎಂದು ವರ್ಣಿಸುವ ಮೂಲಕ ದೀನ–ಅನಾಥರನ್ನು ತುಷ್ಟಿ ಪಡಿಸುವ ದಾನವೇ ಶ್ರೇಷ್ಠವೆಂದು ಅನ್ನದಾನ ಮಾಡುವ ಛತ್ರಕ್ಕೆ ಭೂಮಿಯನ್ನು ದಾನಮಾಡಿದ ತೆಲ್ಲಿಗ ಜಕ್ಕಿಯಬ್ಬೆ ಮಾದರಿ ಎನಿಸುತ್ತಾಳೆ.

"ಪಸಿದು ಪಲಬರ್ೇಡಿರ್ದೊಡೆ
ಪಸಿವರಿದಾಹಾರದಾನ ಮಿಕ್ಕನ ಪೆಂಪೆಂ
ಪಸಿದೆನಲಿಸಿದೆನ್ನದೆ
ಸಸಿ ಮುಖಿಯೇ ಬೀಚಿಯಕ್ಕನುಣಬಡಿಸುವಳ್ ॥"

ಎಂದು ಹೇಳುವ ಕಾಮಧೇನುವಿನ ಶಾಸನ 'ದಾನ ವಿನೋದ' ಮಲ್ಲಿಸೆಟ್ಟಿಯ ಮಡದಿ 'ಗುಣೋಂನತಿಯೊಳನ್ನದಾನ ಕ್ರಮದೊಳ್ ಚಿನ್ತಾಮಣಿ ಸುರಭೂರುಹದನ್ತೆಸೆದ' ಬೀಚಿಯಕ್ಕನ ಮಾನವೀಯತೆಯನ್ನು ಪರಿಚಯಿಸಿದೆ.[110]

"ಧರೆ ಪೊಗಳೆ ಜನಂ ನೆಗಳ್ದ ಪಾಲ್ಗಡಲಂ
ಪೆಂಪಿಂ ಮಿಗಿಲೆನಿಪ ತಟಾಕಂ
ಮನೂಸೆದಗಳಿಸಿದಂ ರಾಯ
ಮಂತ್ರಿ ಚೂಡಾರತ್ನ ಮಾನಸ ಸರೋವರಕ್ಕಂ
ತಾನೆ ಮಿಗಿಲ್ ನಾಗಗೊಂಡಮನೆ"

ಎಂದು ಕ್ರಿ.ಶ. ೧೧೬೬ರ ಸೂಡಿ ಶಾಸನ ದಂಡನಾಯಕ ನಾಗದೇವನು ಮಾನಸ ಸರೋವರಕ್ಕಿಂತ ಮಿಗಿಲಾದ ತಟಾಕವನ್ನು ನಿರ್ಮಿಸಿ ಅದಕ್ಕೆ ೭೦ ಮತ್ತರು ಭೂಮಿಯನ್ನು ದಾನ ನೀಡಿದ ವಿವರವನ್ನು ಉಲ್ಲೇಖಿಸುತ್ತದೆ.[111] ಇಂಥ ಇನ್ನೂ ನೂರಾರು ಉದಾಹರಣೆಗಳು ನಮಗೆ ಲಭ್ಯವಾಗುತ್ತವೆ. ಇವು ಸಾಮಾಜಿಕವಾಗಿ ವ್ಯಕ್ತಿ ತನ್ನನ್ನು ತಾನು ತೊಡಗಿಸಿಕೊಂಡು ಉದಾರತೆಯಿಂದ ದಾನಮಾಡಿದ ಅಂಶವನ್ನು ಪ್ರತಿಬಿಂಬಿಸುತ್ತವೆ.

## ಕೆರೆ–ಬಾವಿಗಳ ನಿರ್ಮಾಣ :

ದಾನಗಳಲ್ಲಿ ಜಲದಾನವು ಮಹತ್ವಪೂರ್ಣವಾದುದು. 'ಸತ್ತವನ ಪ್ರೇತವು ಬಹಳ ಬಾಯಾರಿಕೆಯಿಂದ ಬಳಲುವುದೆಂದೂ ಕೆರೆ, ಬಾವಿ, ತಟಾಕ ನಿರ್ಮಾಣದಂಥ ಧರ್ಮಕಾರ್ಯ–ಗಳಿಂದ ಅದರ ಬಾಯಾರಿಕೆ ಹಿಂಗುವುದೆಂದೂ ಪ್ರಾಚೀನ ಕಾಲದ ಜನರು ನಂಬಿದ್ದರು. ಮಹಾಭಾರತದ ಪ್ರಕಾರ ಯಾವ ವ್ಯಕ್ತಿಯು ಕಟ್ಟಿಸಿದ ಕೆರೆಯಲ್ಲಿ ಹಸುಗಳು, ಪ್ರಾಣಿಗಳು, ಪಕ್ಷಿಗಳು, ಮನುಷ್ಯರು ನೀರನ್ನು ಕುಡಿದು ತೃಪ್ತರಾಗುವರೋ ಅವನು ಅಶ್ವಮೇಧಯಾಗದ ಫಲವನ್ನು ಪಡೆಯುತ್ತಾನೆ.[112] ಜಾನಪದ ಸಾಹಿತ್ಯದಲ್ಲೂ ಕೆರೆ ನಿರ್ಮಾಣ ಮತ್ತು ಕೆರೆಗೆ ಪ್ರಾಣಾರ್ಪಣೆ ಮಾಡಿ ಜನೋದ್ಧಾರಕ್ಕೆ ನೆರವಾದ ಘಟನೆಗಳನ್ನು ಕಾಣುತ್ತೇವೆ. ದೇವಸ್ಥಾನ ನಿರ್ಮಾಣದೊಂದಿಗೆ ಕೆರೆ–ಬಾವಿಗಳನ್ನು ನಿರ್ಮಾಣ ಮಾಡುತ್ತಿದ್ದ ಹಲವು ನಿದರ್ಶನಗಳುಂಟು. ಇದು ಒಂದು ದೃಷ್ಟಿಯಲ್ಲಿ ಧರ್ಮಕಾರ್ಯವೆನಿಸಿದರೂ ಇನ್ನೊಂದು ದೃಷ್ಟಿಯಲ್ಲಿ ಸಾರ್ವಜನಿಕ ಕಾರ್ಯವೆನಿಸುತ್ತಿತ್ತು. 'ಶಿವನೊಂದಿಗೆ ಗಂಗೆ'ಯೆಂಬಂತೆ ದೇವಪ್ರತಿಷ್ಠೆಯೊಂದಿಗೆ ತಟಾಕ ನಿರ್ಮಾಣ ಮಾಡುವುದು ಕಲ್ಯಾಣ ಚಾಲುಕ್ಯರ ಕಾಲದ ವಿಶಿಷ್ಟ ಪದ್ಧತಿಯೆನಿಸಿತ್ತು.

ಕೆರೆ ಬಾವಿಗಳಿಂದ ಕೃತಕ ನೀರಾವರಿ ವ್ಯವಸ್ಥೆಯನ್ನು ಮಾಡಲಾಗುತ್ತಿತ್ತು. ಇಂಥ ವ್ಯವಸ್ಥೆಯನ್ನು ಸಮುದ್ರ, ಕೆರೆ, ಏರಿ, ಕುಳಿ, ಸರೋವರ, ತಟಾಕ, ತೀರ್ಥ, ಕಟ್ಟೆ, ಕೊಳ, ಕುಟ್ಟೆ, ಕುಂಟೆ, ಡೋಣಿ, ದಿಗ್ಗಿವೆ, ಬಾವಿ ಎಂಬ ಉತ್ತರಪದದೊಂದಿಗೆ ಕರೆಯುತ್ತಿದ್ದರು. ತಮ್ಮ ಹೆಸರನ್ನು ಚಿರಸ್ಥಾಯಿಗೊಳಿಸಲೋಸುಗ ಕೆಲವು ಸಲ ಮರಣ ಹೊಂದಿದ ತಮ್ಮ ಹಿರಿಯರ, ಪ್ರಿಯವ್ಯಕ್ತಿಗಳ ಸ್ಮಾರಕವಾಗಿ ಈ ಕೆರೆ–ಬಾವಿ ನಿರ್ಮಾಣ ಕಾರ್ಯಗಳನ್ನು ಕೈಕೊಳ್ಳುತ್ತಿದ್ದರು. ಮಹಿಳೆಯರು ಮತ್ತು ಪುರುಷರ ಸ್ಮಾರಕವಾಗಿ ರಚಿಸಿದ ಕೆರೆ ಬಾವಿಗಳು ಕರ್ನಾಟಕದಲ್ಲಿ ಅಧಿಕ ಪ್ರಮಾಣದಲ್ಲಿ ಇಂದಿಗೂ ಜೀವಂತವಾಗಿರುವುದನ್ನು ಕಾಣುತ್ತೇವೆ. ಕೆರೆ–ಬಾವಿಗಳಿಂದಲೇ ಪ್ರಸಿದ್ಧವಾಗಿ ನೂರಾರು ಊರುಗಳಿಗೆ ಕೆರೆಯ ಸಂಕೇತವಾದ ಹೆಸರುಗಳು ಬಂದಿವೆ. ಅಣಿಗನ ಕೆರೆ–ಅಣ್ಣಿಗೇರಿ, ಕೆಲ್ಲನಕೆರೆ–ಕೆಲಗೇರಿ ತಾವರೆಕೆರೆ–ತಾವರಗೆರೆ, ಕುರಿತ್‌ಕುಂಟೆ–ಕುರ್ತಕೋಟಿ, ಕ್ಯಾತನ ಸಮುದ್ರ–ಕ್ಯಾತಸಂದ್ರ, ಮಲ್ಲನಸಮುದ್ರ–ಮಲ್ಲಸಂದ್ರ; ಮಲಸಮುದ್ರ, ಹುಲಕುಂಟೆ–ಹುಲಕೋಟಿ ಹೀಗೇ ಅನೇಕ ಊರುಗಳು ಕೆರೆ, ಕುಂಟೆ, ಸಮುದ್ರ ಎಂಬ ಒಂದೇ ಅರ್ಥ ಹೊಂದಿದ ಪದಗಳಿಂದ ಕೂಡಿ ಊರುಗಳ ಹೆಸರಿನ ಕೊನೆಗೆ ಗೇರಿ, ಕೇರಿ, ಕುಂಟೆ, ಸಮುದ್ರ ಎಂಬ ಪದಗಳು ಸೇರಿ ಊರುಗಳಾಗಿರುವುದನ್ನು ಗಮನಿಸಬಹುದು.[112.1] ಇದರಿಂದ ಇಂಥ

ಎಷ್ಟೊಂದು ಕೆರೆ, ತಟಾಕಗಳು ನಿರ್ಮಾಣವಾಗಿದ್ದವೆಂಬುದರ ಪರಿಕಲ್ಪನೆಯುಂಟಾಗುತ್ತದೆ. ಅದೇ ರೀತಿ ಸೂಳಿಬಾವಿ, ಮದಬಾವಿ, ಬಾಗಳಿ, ಮುಂತಾದ ಊರುಗಳಲ್ಲಿ ಬಾವಿಗಳಿದ್ದು, ಅವುಗಳಿಂದ ಪ್ರಸಿದ್ಧಿಗೊಂಡು ಸ್ಥಳನಾಮಗಳನ್ನು ಪಡೆದುಕೊಂಡಿವೆ. ಇಂಥ ಅನೇಕ ಕಡೆಗಳಲ್ಲಿ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾದ ಕೆರೆಗಳು ಇಂದಿಗೂ ಇವೆ. ಮತ್ತು ಲಕ್ಷಾಂತರ ಜನರ ಉಪಯೋಗಕ್ಕೆ ಯೋಗ್ಯವಾಗಿವೆ.

ಕ್ರಿ.ಶ. ೧೧೮೪ರ ಡಂಬಳದ ಶಾಸನದಲ್ಲಿ ಉಲ್ಲೇಖಗೊಂಡ ಗೊನಸಮುದ್ರ

ಉದಧಿಪನು ತನ್ನ ಗಾಂಭೀ
ರ್ಯ್ಯದ ಪೆಂಪಂ ರತ್ನಾಜಳದ ಸಮುದಿತಮನಿದಂ
ವಿದಿತಂ ಚಯನೆನಲುಕೆಂ
ಬುದು ಧರ್ಮಾಪುರದಲೆಸೆವ ಗೋನಸಮುದ್ರಂ ॥

ಎಂದು ವರ್ಣಿಸಿದೆ.[113] ಅಂದರೆ, ಗಾಂಭೀರ್ಯದಿಂದ ಕೂಡಿದ ಸಾಗರದ ಖ್ಯಾತಿಯನ್ನು ಕೀರ್ತಿಸುವಂತೆ, ರತ್ನಜಳದಂತೆ ಗೋನಸಮುದ್ರವು (ಕೆರೆಯು) ಧರ್ಮಾಪುರ (ಡಂಬಳ)ದಲ್ಲಿ ಶೋಭಿಸುತ್ತಿತ್ತು. ಇಂಥ ಈ ಕೆರೆಯ ದುರಸ್ಥಿಗಾಗಿ ಮಹಾಪ್ರಧಾನ ಸೇನಾಧಿಪತಿ ದಂಡನಾಯಕ ತೇಜಿಮಯ್ಯ ಮತ್ತು ಅವನ ಅಧಿಕನ ಅಧಿಕಾರಿಗಳಾದ ಬಾಕಣ ದಂಡನಾಯಕ ಮತ್ತ ರೇವರಸರು ಭೂಮಿಯನ್ನು ದಾನ ಮಾಡಿದ್ದಾರೆ. ಇಂದಿಗೂ ಈ ಕೆರೆ ತನ್ನ ವೈಶಾಲ್ಯತೆಯಲ್ಲಷ್ಟೇ ಅಲ್ಲದೆ, ಉಪಯುಕ್ತತೆಯಲ್ಲೂ ಪ್ರಸಿದ್ಧವಾಗಿದೆ. ಬ್ರಿಟಷರ ಆಳ್ವಿಕೆಯಲ್ಲಿ ಇದರ ಉಪಯುಕ್ತತೆಯನ್ನರಿತು ೧೮೭೪, ೧೮೪೯, ೧೮೬೦, ೧೮೭೭ರಲ್ಲಿ ಇದರಲ್ಲಿ ತುಂಬಿದ್ದ ಹೂಳನ್ನು ತೆಗೆದು ದುರಸ್ಥಿ ಮಾಡಲಾಗಿದೆ. ಕ್ರಿ.ಶ. ೧೮೭೭-೭೮ರಲ್ಲಿ ಬ್ರಿಟಿಷರ ರಾಣಿ ಎಲಿಜಾಬೆತ್‌ಳ ಕಾಲದಲ್ಲಿ ಈ ಕೆರೆಯನ್ನು ವಿಸ್ತರಿಸಲಾಯಿತು.[114] ಇವತ್ತು ಈ ಕೆರೆಯು ೩೦೦೦ ಎಕರೆ ವಿಸ್ತೀರ್ಣವಾಗಿದ್ದು, ಸುಮಾರು, ೧೦೦೦ ಹೆಕ್ಟೇರ್ ಪ್ರದೇಶಕ್ಕೆ ನೀರು ಪೂರೈಸುತ್ತಿದೆ. ಇದರಿಂದ ಡಂಬಳ ಹಾಗೂ ಅದರ ಸುತ್ತಲಿನ ಪ್ರದೇಶ ಹಸಿರಿನಿಂದ ಕಂಗೊಳಿಸುತ್ತಿದೆ.

ಇದೇ ರೀತಿ ಕುರ್ತಕೋಟಿ,[115] ಲಕ್ಕುಂಡಿ,[116] ನೀರಲಗಿ,[117] ಬೆಳವತ್ತಿ,[118] ಕುಂಚನ ಹೊಸಳ್ಳಿ,[119] ಬಾಳಂಬೀಡ,[120] ಬಾಗೂರು,[121] ಹಾಲೇಬೇಲೂರು,[122] ಕೈದಾಳ,[123] ಆಲಹಳ್ಳಿ,[124] ಮುಂಜರಾಬಾದ,[125] ಹೈತಾಪುರ,[126] ತಳಂಗೆರೆ,[127] ಹೆಬ್ಬಾಳ,[128] ಕಲಕೇರಿ,[129] ಅರಸಿಕೇರಿ,[130] ಹೀಗೆ ನೂರಾರು ಕಡೆಗಳಲ್ಲಿ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾದ ಹಾಗೂ ಜೀರ್ಣೋದ್ಧಾರಕ್ಕೆ ದಾನ ಪಡೆದ ಕೆರೆಗಳಿದ್ದು, ಇಂದಿಗೂ ಅಲ್ಲಿನ ಜನರಿಗೆ ನೀರು ಮತ್ತು ನೀರಾವರಿ ಸೌಲಭ್ಯವನ್ನು ಒದಗಿಸುತ್ತಿವೆ. ಕರ್ನಾಟಕದ ಉದ್ದಗಲಕ್ಕೂ ಹರಡಿರುವ ಇಂತಹ ಕೆರೆಗಳು ಉಳಿದುಕೊಂಡು ಬರಲು ದಾನ-ದತ್ತಿ ಕಾರ್ಯಗಳು, ಜೀರ್ಣೋದ್ಧಾರ ಕಾರ್ಯಗಳು ಮೂಲ ಕಾರಣವಾಗಿವೆ.

ಇದೇ ಮಾದರಿಯ ದಾನ-ದತ್ತಿಗಳಿಂದ ನಿರ್ಮಾಣವಾದ ಭಾವಿಗಳು, ತೀರ್ಥಗಳು, ಇಂದಿಗೂ ಲಕ್ಷಾಂತರ ಜನರ ಬಾಯಾರಿಕೆಯನ್ನು ತಣಿಸುತ್ತಿವೆ. ಲಕ್ಕುಂಡಿ, ಗದಗ, ಬೆಟಗೇರಿ, ಹೂಲಿ, ಬಾಗಳಿ, ಹೂವಿನ ಹಡಗಲಿ, ಕುಕನೂರು, ಲಕ್ಷ್ಮೇಶ್ವರ, ಡಂಬಳ, ನಾಗಾವಿ, ಅಬ್ಬಿಗೇರಿ, ತಳಕಲ್ಲು, ಅಲಂಪುರ, ಇಟಗಿ (ಕೊಪ್ಪಳ ತಾಲೂಕ) ಹೀಗೆ ಹಲವಾರು ಕಡೆಗಳಲ್ಲಿ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾದ ಬಾವಿಗಳು ಇದ್ದು ನೀರಿನ ಸಮಸ್ಯೆಯನ್ನು ಸಾಕಷ್ಟು ಮಟ್ಟಿಗೆ ನೀಗಿಸಿವೆ. ಅನೇಕ ಬಾವಿಗಳಿಂದ ಕೇವಲ ಕುಡಿಯುವ ನೀರಲ್ಲದೆ, ವ್ಯವಸಾಯಕ್ಕೂ ನೀರು ಪೂರೈಸಲಾಗುತ್ತಿದೆ. ಲಕ್ಕುಂಡಿಯ ಮುಸುಕಿನ ಬಾವಿ ರಂಗಿನ ಬಾವಿ ನಾಗಾವಿಯ ರಾಮತೀರ್ಥ, ಡಂಬಳದ ಬೀಗರ ಬಾವಿ, ಜೋಡಕಪ್ಪಲಿ ಬಾವಿ, ದೇವರ ಬಾವಿ, ಬಂಡ್ಯಾಳರ ಬಾವಿ, ಸೇದುಗರ ಬಾವಿ ಇವು ಕೆಲವು ಉದಾಹರಣೆಗಳು.

ಇನ್ನು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಅರವಟ್ಟಿಗೆ, ಸತ್ರ, ಆರವೆ, ಶಲೆ- ಅಗ್ಗಿಷ್ಟಿಕೆ ಮುಂತಾದ ಸಾಮಾಜಿಕ ಕಾರ್ಯಗಳಿಗೆ ನೀಡಿದ ದಾನಗಳಿಗೂ ಕೊರತೆಯಿಲ್ಲ. ಇಂದು ಇವು ಇಲ್ಲದೇ ಇದ್ದರೂ ಅಂದಿನ ಕಾಲದಲ್ಲಿ ಸಾಮಾನ್ಯ ಜನರಿಗೆ, ತಪೋಧನರಿಗೆ, ವಿದ್ಯಾರ್ಥಿಗಳಿಗೆ, ಉಪಾಧ್ಯಾಯರಿಗೆ, ದೀನ ದಲಿತರಿಗೆ ಹೀಗೆ ಹಲವು ಬಗೆಯ ಜನರಿಗೆ ಸಾಕಷ್ಟು ಉಪಯುಕ್ತವಾಗಿದ್ದವು.

ಮೇಲೆ ಚರ್ಚಿಸಿದ ಎಲ್ಲ ಅಂಶಗಳು ಕಲ್ಯಾಣ ಚಾಲುಕ್ಯರ ದಾನ-ದತ್ತಿಗಳ ಫಲಶೃತಿಯಾಗಿವೆ. ದಾನ-ದತ್ತಿಗಳು ಯಾವುದೇ ಉದ್ದೇಶದಿಂದ ನೀಡಲ್ಪಟ್ಟಿದ್ದರೂ ಅವುಗಳಲ್ಲಿ ಸಾಮಾಜಿಕ ಕಳಕಳಿ, ಉದಾತ್ತ ಮೌಲ್ಯ, ನಾಡು ಸಂಸ್ಕೃತಿಯ ಬಗೆಗಿನ ಪ್ರೀತಿ ಅನನ್ಯವಾದುದು. ಕಲ್ಯಾಣ ಚಾಲುಕ್ಯ ಅರಸರು ಅಳಿದು ಹೋದರೂ ಅವರು ಸಮಾಜಕ್ಕೆ ನೀಡಿದ ದಾನ-ದತ್ತಿಗಳಿಂದ, ಅವರು ಕಟ್ಟಿದ ದೇಗುಲ, ಕೆರೆ, ಬಾವಿ, ಆರಮೆಗಳಿಂದ ಅಜರಾಮರವಾಗಿದ್ದಾರೆ.

## ಕೊನೆಯ ಟಿಪ್ಪಣಿಗಳು

1. 'ವಿಜಯನಗರ ಕಾಲದಲ್ಲಿ ದಂಡ ಮತ್ತು ಧರ್ಮಗಳ ಸಹಕಾರ ಮತ್ತು ಸಮನ್ವಯ ಪ್ರಸಂಗ' ಪ್ರಸ್ತಾಪ ಮಾಸ ಪತ್ರಿಕೆ ಎಪ್ರೀಲ್. ಸಂಪುಟ- 93. ಸಂಚಿಕೆ- 1. ಮೈಸೂರು.
2. ಘೋಷಾಲ್ ಜಿ.ಎನ್.- 'A History of Indian Plitical Ideas' P. 463-464 Oxford University Press. 1959.
3. ಸೋಮದೇವ ಸೂರಿ- 'ನೀತಿ ವಾಕ್ಯಮೃತಂ'- ಸಂ: ಜಿ. ಎಸ್. ದೀಕ್ಷಿತ್, ಬಿ. ರಾಮಸ್ವಾಮಿ, ಶ್ರೀನಿವಾಸರಿತ್ತಿ ಕ.ವಿ.ವಿ. ಹಂಪಿ, 2000
4. ಮೂರನೆಯ ಸೋಮೇಶ್ವರ- 'ಮಾನಸೋಲ್ಲಾಸ' ಪು. 143.
5. ಅದೇ. ಪು. 141
6. ಅದೇ. ಪು. 2
7. ಕ.ಜಿ.ಶಾ. ಶಹಪುರ(ತಾ) 1. ಅಣಬಿ; ಕ್ರಿ.ಶ. 1034
8. S.I.I. XX. 24-ಆಡೂರು; ಕ್ರಿ.ಶ. 1034-35
9. ಕ.ಜಿ.ಶಾ. ಚಿತಾಪುರ(ತಾ) 31-ನಿಪ್ಪಾಣಿ; ಕ್ರಿ.ಶ. 1037
10. S.I.I. XV. 26-ವಿಜಾಪೂರ; ಕ್ರಿ.ಶ. 1040
11. ಕ.ವಿ.ವಿ.ಶಾ.ಸಂ. 9. 110-ಅರಸೀಬೀದಿ; ಕ್ರಿ.ಶ. 1047
12. ಅದೇ. 37-ಭೈರನಮಟ್ಟಿ; ಕ್ರಿ.ಶ. 990
13. S.I.I. XX. 18-ಸವದತ್ತಿ; ಕ್ರಿ.ಶ. 980
14. ಕಲಬುರ್ಗಿ ಎಂ.- 'ಕೊಂಡಗುಳಿ ಕೇಶಿರಾಜನ ಕೃತಿಗಳು' ಪು. xvii
15. ಕಲಬುರ್ಗಿ ಎಂ.- 'ಹರಿಹರನ ರಗಳೆಗಳು' ಪು. 239-241
16. S.I.I. XX. 69- ಕೊಂಡಗುಳಿ; ಕ್ರಿ.ಶ. 1109
17. E.I. XXXVII. iv. p. 189 ಕ್ರಿ.ಶ. 1132 ಉದ್ಧರಿತ : ಡಾ.ಎಂ.ಎಂ. ಕಲಬುರ್ಗಿ 'ಕೊಂಡಗುಳಿ ಕೇಶಿರಾಜನ ಕೃತಿಗಳು' ಪು. 91
18. "ಸರ್ವದ್ರವ್ಯೇಷು ವಿದ್ಯೈವ ಧನಮಾಹುರ ನುತ್ತಮಂ
    ಆಹಾರ್ಯತ್ವಾದನರ್ಘ್ಯ ತ್ವಾದಕ್ಷಯ ತ್ವಾದಕ್ಷಯತ್ವಾಚ್ಚ ಸರ್ವದಾ ॥
    ವಿದ್ಯಾದತಾತಿ ವಿನಯಂ ವಿನಯಾದ್ಯಾತಿ ಪಾತ್ರತಾಂ
    ಪಾತ್ರತ್ವಾಧನ ಮಾಪ್ನೋತಿ ಧನಾದ್ಧರ್ಮ: ತತ: ಸುಖಂ॥"
    ಉದ್ಧರಿತ : ಡಾ.ಎಂ. ಚಿದಾನಂದಮೂರ್ತಿ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪು. 227
19. ದೇಸಾಯಿ ಎಚ್.ಆರ್.- 'ಕಲ್ಯಾಣ ಚಾಲುಕ್ಯರ ಕಾಲದ ಶಿಕ್ಷಣ ವ್ಯವಸ್ಥೆ' ಪು. 79
20. ತಿಪ್ಪೇರುದ್ರಸ್ವಾಮಿ ಎಚ್.- 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ' ಪು. 219
21. ಚಿದಾನಂದಮೂರ್ತಿ ಎಂ.- 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಪು. 229
22. E.C. XI. 185- ಶಿಕಾರಿಪುರ; ಕ್ರಿ.ಶ. 1159
23. S.I.I. XI. i. 47- ಹೊಸೂರು; ಕ್ರಿ.ಶ. 994
24. E.C. 3. 239- ನಗರ್ಲೆ; ಕ್ರಿ.ಶ. 10ನೇ ಶತಮಾನ
25. S.I.I. XI. i. 64- ಮುಳಗುಂದ; ಕ್ರಿ.ಶ. 1028

26. ಕವಿ.ವಿ.ಕಾ.ಸಂ. 2. ಯಲಬುರ್ಗ(ತಾ) 51– ಕುಕ್ಕನೂರು; ಕ್ರಿ.ಶ. 1005
27. S.I.I. XI. i. 62– ಹೆಗ್ಗೂರು; ಕ್ರಿ.ಶ. 1024
28. ಕ.ವಿ.ವಿ.ಶಾ.ಸಂ. 1. 24– ಮೋರಿಗೇರಿ; ಕ್ರಿ.ಶ. 1045
29. ಅದೇ. 117– ಕೋಗಳಿ; ಕ್ರಿ.ಶ. 1055
30. S.I.I. XI. i. 121– ಶಿವಪುರ; ಕ್ರಿ.ಶ. 1057
31. E.C. XI. 29– ಮೊಳಕಾಲ್ಮೂರು; ಕ್ರಿ.ಶ. 1064
32. ಕ.ವಿ.ವಿ.ಶಾ.ಸಂ. 1. 209– ಕೆರೆಗುಡಿಹಳ್ಳಿ; ಕ್ರಿ.ಶ. 1065
33. S.I.I. IX. i. 147– ಸಂಗಮೇಶ್ವರ; ಕ್ರಿ.ಶ. 1079
34. ಅದೇ. 160– ಕೊಳಗಲ್ಲು; ಕ್ರಿ.ಶ. 1091–92
35. S.I.I. XI(ii) 146– ಕೋಟುಮಚಗಿ; ಕ್ರಿ.ಶ. 1099
36. E.C. VII 100 – ಬಳ್ಳಿಗಾವೆ; ಕ್ರಿ.ಶ. 1129
37. ಅದೇ. V. 41– ಕಣಿಕಟ್ಟೆ; ಕ್ರಿ.ಶ. 1130
38. S.I.I. XV(ii) 547– ಗದಗ; ಕ್ರಿ.ಶ. 1184, ಅದೇ. 159; ಪು. 203
39. ಕ.ಜಿ.ಶಾ. ಚಿತಾಪುರ(ತಾ) 30– ನಾಗಾಯಿ; ಪು. 202 ಕ್ರಿ.ಶ. 1094
40. ತಿಪ್ಪೇರುದ್ರಸ್ವಾಮಿ ಎಚ್.– 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ' ಪು. 221
41. ಕೊಪ್ಪಾ ಎಸ್.ಕೆ.– 'ತರ್ದವಾಡಿ ನಾಡು' ಪು. 178
42. E.C. 7. SK 178 , B.K.I. I. i. 83; ಕ್ರಿ.ಶ. 1949
43. S.I.I. IX. i. 104; ಕ್ರಿ.ಶ. 1046
44. ಅದೇ. 160; ಕ್ರಿ.ಶ. 1091–92
45. ಕ.ವಿ.ವಿ.ಶಾ.ಸಂ. 2. 19– ಹಲಗೇರಿ; ಕ್ರಿ.ಶ 1028
46. ಕ.ಜಿ.ಶಾ. ಚಿತಾಪುರ(ತಾ) 28– ನಾಗಾಯಿ; ಪು. 194. ಕ್ರಿ.ಶ. 1086
47. ಪಾಶುಪತ ಮತವು ಶುಭಕರ ಮತ್ತು ಲಯಕರ ಎಂಬೆರಡು ಬಗೆಗಳಲ್ಲಿಯೂ ರೂಪಗೊಳ್ಳುವ ಶಿವ ಅಥವಾ ಪಶುಪತಿಯೇ ಸರ್ವೋತ್ಕೃಷ್ಟ ಆರಾಧ್ಯದೈವನೆಂದು ಅಂಗೀಕರಿಸುವ ಅದ್ವೈತ ಮತ. ಶಿವನು ಪಶುಪತಿ: ರಾಗದ್ವೇಷಾದಿ ಪಶು ಪ್ರವೃತ್ತಿಗಳಿಗೆ ಅವನು ಒಡೆಯ. ಮಾನವನೇ ಪಶು ಈ ಪಶುವನ್ನು ಪಾಶ(ಹಗ್ಗ)ದಿಂದ ಕಟ್ಟಿ ಅಂಕೆಯಲ್ಲಿಡಬೇಕಾದವನು ಪರಮಶಿವ (ಕರ್ನಾಟಕದ ಪರಂಪರೆ ಸಂ.1 ಪು. 388)
48. ಕ.ಜಿ.ಶಾ. ಚಿತಾಪುರ(ತಾ) 28– ನಾಗಾಯಿ; ಪು. 194. ಕ್ರಿ.ಶ. 1086
49. ಸುಂಕಾಪುರ ಎಂ.ಎಸ್.– 'ನೂತನ ಪುರಾತನದ ರಗಳೆಗಳು' ಪು. 37
50. ಅದೇ. ಪು. 383
51. S.I.I. XV. ii. 56; ಕ್ರಿ.ಶ. 1184
52. ಅದೇ. 59; ಕ್ರಿ.ಶ. 1084
53. E.C. V. ಅರಸಿಕೇರೆ– 90; ಕ್ರಿ.ಶ. 1189
54. S.I.I. IX. i. 15; ಕ್ರಿ.ಶ. 1081
55. ಕ.ವಿ.ವಿ.ಶಾ.ಸಂ. 9. 16– ಬೇಲೂರು; ಕ್ರಿ.ಶ. 1021
56. B.K.I. I. i. 52– ಲಕ್ಕುಂಡಿ; ಕ್ರಿ.ಶ. 1007
57. S.I.I. XV. ii. 47. ಕ್ರಿ.ಶ. 1151

58. ಶಾಸನ ಸಾಹಿತ್ಯ ಪರಿಚಯ 44– ಇಂಗಳಗಿ ಕ್ರಿ.ಶ. 1094
59. E.C. II. ಶ್ರವಣಬೆಳಗೊಳ 162; ಕ್ರಿ.ಶ. 1123
60. E.C. VII. ಶಿಕಾಪುರ 169; ಕ್ರಿ.ಶ. 1067
61. ಕ.ವಿ.ವಿ.ಶಾ.ಸಂ. 5. ಭಾ. 1. 311.
62. ಶಾಸನ ಸಾಹಿತ್ಯ ಸಂಚಯ 33– ಮುತ್ತಿಗೆ; ಕ್ರಿ.ಶ. 1079
63. ಗೋಪಾಲರಾವ್ ಎಚ್. ಎಸ್.– 'ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣ ಚಾಲುಕ್ಯ ದೇವಾಲಯಗಳು ಒಂದು ಅಧ್ಯಯನ' ಪು. 189.
64. ಅದೇ. ಪು. 78.
65. Desai P.B.- 'Jainism in South India and some Jaina Epigraphs' p. 397
66. E.C. VI. ಕಡೂರು 161; ಕ್ರಿ.ಶ. 1063
67. S.I.I. VIII– 37; ಕ್ರಿ.ಶ. 1122
68. E.C. V ಬೇಲೂರು 124; ಕ್ರಿ.ಶ. 1133
69. S.I.I. IX. i. 60; ಕ್ರಿ.ಶ. 931
70. S.I.I. XX. B.K.I. V. 20; ಕ್ರಿ.ಶ. 931
71. S.I.I. XX. B.K.I. IV. 31; ಕ್ರಿ.ಶ. 1044–45
72. S.I.I. IX. i. 101; ಕ್ರಿ.ಶ. 1045
73. S.I.I. XI. i. 103; ಕ್ರಿ.ಶ.
74. S.I.I. IX. i. 159; ಕ್ರಿ.ಶ.
75. S.I.I. XVIII. 61; ಕ್ರಿ.ಶ. 1048
76. S.I.I. XVIII. 66; ಕ್ರಿ.ಶ. 1062
77. S.I.I. VIII. 371; ಕ್ರಿ.ಶ. 1122
78. A.E. XIII. ಪು. 56
79. ಕ.ವಿ.ವಿ.ಶಾ.ಸಂ. 2. ಯಲಬುರ್ಗ(ತಾ) 67–ಇಟಗಿ; ಕ್ರಶ 1108 /1112
80. B.K.I. I. i. 52. ಲಕ್ಕುಂಡಿ; ಕ್ರಿ.ಶ. 1007
81. 'ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ' ಸಂ: ಗೋಪಾಲ್ ಆರ್. ಪು. 206
82. ಅದೇ. ಪು. 329
83. ಹನುಮಾಕ್ಷಿ ಗೋಗಿ, ಪಿ.ಕೆ. ರಾಠೋಡ– 'ಡಂಬಳ: ಸಾಂಸ್ಕೃತಿಕ ಅಧ್ಯಯನ' ಪು. 64
84. 'ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ' ಸಂ: ಗೋಪಾಲ್ ಆರ್. ಪು. 303
85. 'ಕರ್ನಾಟಕ ಪರಂಪರೆ' ಸಂಪುಟ– 1. ಪು. 460
86. S.I.I. XI. 56; ಕ್ರಿ.ಶ. 1033
87. S.I.I. IX. 101; ಕ್ರಿ.ಶ. 1034
88. ಅದೇ.
89. S.I.I. XX. B.K.I. IV. 49; ಕ್ರಿ.ಶ. 1076
90 S.I.I. XX. 18; ಕ್ರಿ.ಶ. 1082
91. E.C. VI. ತರೀಕೆರೆ 62; ಕ್ರಿ.ಶ. ಸು. 1104.

92. Desai P.B.- 'Jainism in South India and some Jaina Epigraphs' p. 397
93. ಉದ್ಧರಿತ : ಡಾ. ಎಂ. ಪ್ರಸನ್ನಕುಮಾರ : ಮೈಸೂರಿನ ಇತಿಹಾಸದಲ್ಲಿ 'ದಾನ' ಪು. 324.
94. S.I.I. XX. 34. ಕಲ್ಕೇರಿ; ಕ್ರಿ.ಶ. 1053
95. ಕ.ವಿ.ವಿ.ಶಾ.ಸಂ. 1. 52–ಹಿರೇಹಡಗಲಿ; ಕ್ರಿ.ಶ. 1057
96. ಕರಾಶಮ ನೊಬೊರು : 'South Indian History and Society, Studies from Inscriptions A.D. 850 - 1800' ಪು. 20
97. ಅದೇ.
98. ಕ.ವಿ.ವಿ.ಶಾ.ಸಂ. 9. 91– ಐಹೊಳೆ; ಕ್ರಿ.ಶ. 1057
99. S.I.I. IX. i. 47– ಬೆತಪಲ್ಲಿ; ಕ್ರಿ.ಶ. 11ನೆಯ ಶತಮಾನ
100. ಅದೇ. 337– ಕುರುವತ್ತಿ; ಕ್ರಿ.ಶ. 12ನೆಯ ಶತಮಾನ
101. S.I.I. XX. 39– ದೇವೂರು; ಕ್ರಿ.ಶ. 1064
102. S.I.I. XVIII. 192. ಕಲ್ಕೇರಿ; ಕ್ರಿ.ಶ. 1183
103. S.I.I. V. 845; ಕ್ರಿ.ಶ. 1083
104. S.I.I. VI. 574– ಉಚ್ಚಂಗಿದುರ್ಗ; ಕ್ರಿ.ಶ. 1064
105. A.E. XXIX. ಪು. 203– ತಳ್ಳಂಗೆರೆ; ಕ್ರಿ.ಶ. 1000
106. ಅದೇ.
107. ಉದ್ಧರಿತ ಡಾ. ಹಂಪ ನಾಗರಾಜಯ್ಯ 'ಸಾಂತರರು ಒಂದು ಅಧ್ಯಯನ' ಪು. 17
108. E.C. VIII. 35–ಹುಂಚ; ಕ್ರಿ.ಶ. 1077
109. B.K.I. I. ii. 137–ಸೊರಟೂರು; ಕ್ರಿ.ಶ. 1092
110. S.I.I. XX. 101–ಕಾಮಧೇನು; ಕ್ರಿ.ಶ. 1129
111. E.I. XV. 15. ಸೂಡಿ; ಕ್ರಿ.ಶ. 1066 ಪು. 224
112. ಉದ್ಧರಿತ : ಚಿದಾನಂದಮೂರ್ತಿ ಎಂ.– 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಪು. 147.
112.1 'ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ' ಸಂ: ಗೋಪಾಲ್ ಆರ್. ಪು. 136
113. S.I.I. XV. 57- ಡಂಬಳ; ಕ್ರಿ.ಶ. 1184
114. ಶ್ರೀಮತಿ ಹನುಮಾಕ್ಷಿ ಗೋಗಿ, ಡಾ. ಪಿ.ಕೆ. ರಾಠೋಡ– 'ಡಂಬಳ : ಸಾಂಸ್ಕೃತಿಕ ಅಧ್ಯಯನ' ಪು. 45
115. S.I.I. XI. ii. 127– ಕುರ್ತಕೋಟಿ; ಕ್ರಿ.ಶ. 1082
116. ಅದೇ. 196– ಲಕ್ಕುಂಡಿ
117. E.I. XVI. p. 66-68; ಕ್ರಿ.ಶ. 1053
118. ಧಾರವಾಡ ಜಿಲ್ಲೆಯ ಶಾಸನ ಸೂಚಿ 201– ಬೆಳವತ್ತಿ; ಪು. 65 ಕ್ರಿ.ಶ. 1059
119. ಅದೇ. 66–ಕುಂಚನಹೊಸಳ್ಳಿ; ಪು. 60 ಕ್ರಿ.ಶ. 984
120. ಅದೇ. 163–ಬಾಳಂಬೀಡ ತಾ. ಹಿರೇಕೆರೂರು
121. E.C. V. ಚನ್ನರಾಯಪಟ್ಟಣ(ತಾ) 161– ಬಾಗೂರು; ಕ್ರಿ.ಶ. 1181
122. ಅದೇ ಮುಂಜರಾಬಾದ(ತಾ) 18–ಹಾಲೇಬೆಲೂರು; ಕ್ರಿ.ಶ. 1095
123. E.C. XII. ತುಮಕೂರು(ತಾ) 9-ಕೈದಾಳ; ಕ್ರಿ.ಶ. 1151.
124. E.C. VII. ಶಿವಮೊಗ್ಗ(ತಾ) 96–ಆಲಹಳ್ಳಿ; ಕ್ರಿ.ಶ. 915

125. E.C. V. ಮುಂಜರಾಬಾದ(ತಾ) 18– ಹಾಲೇಬೇಲೂರು; ಕ್ರಿ.ಶ. 1095

126. S.I.I. XV. ಮುಂಡರಗಿ(ತಾ) 493– ಹೈತಾಪುರ; ಕ್ರಿ.ಶ. 900

127. E.I. XXIX. ಕಾಸರಗೋಡು(ತಾ) 29- ತಳಂಗೆರೆ; ಕ್ರಿ.ಶ. 1000

128. E.I. IV. ಶಿರಹಟ್ಟಿ(ತಾ) 50–ಹೆಬ್ಬಾಳು; ಕ್ರಿ.ಶ. 975

129. S.I.I. XX. ಹಾನಗಲ್ಲ(ತಾ) 49–ಕಲಕೇರಿ; ಕ್ರಿ.ಶ. 1076

130. E.C. V. ಅರಸಿಕೆರೆ(ತಾ) 102–ಕಾಡಿಗೆರೆ; ಕ್ರಿ.ಶ. 1101

*****

# ಅಧ್ಯಾಯ - ಆರು

# ಸಮಾರೋಪ

ಕನ್ನಡ ನಾಡನ್ನಾಳಿದ ಶ್ರೇಷ್ಠ ಅರಸುಮನೆತನಗಳಲ್ಲಿ ಕಲ್ಯಾಣ ಚಾಳುಕ್ಯರದು ಬಹುಪ್ರಸಿದ್ಧ ಮನೆತನ ಇವರು, ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಿಗೆ ಅದ್ವಿತೀಯ ಕೊಡುಗೆಗಳನ್ನು ನೀಡಿದವರು. ಕಲ್ಯಾಣ ಚಾಲುಕ್ಯರ ಶಾಸನಗಳಲ್ಲಿ ದಾನ-ದತ್ತಿ ವಿಷಯವನ್ನಾಯ್ದುಕೊಂಡು ಸಂಶೋಧನೆಗೆ ತೊಡಗಿದಾಗ ಇವರೂ ಸಹ ಭಾರತದ ಉಳಿದೆಲ್ಲ ರಾಜಮನೆತನಗಳ ಸಂಪ್ರದಾಯದಂತೆ ದಾನ-ದತ್ತಿ ಬಿಟ್ಟರಬಹುದು; ಆದರೆ ಸಂಖ್ಯೆಯಲ್ಲಿ ಮಾತ್ರ ಅಧಿಕತೆಯಿದೆ ಎಂದು ಕೊಂಡಿದ್ದೆ. ನಿಧಾನವಾಗಿ ವಿಷಯದಾಳಕ್ಕಿಳಿದಂತೆಲ್ಲ ಕಲ್ಯಾಣ ಚಾಲುಕ್ಯರ ಮತ್ತೊಂದು ಮುಖವೇ ಅನಾವರಣವಾಯಿತು. ಇದುವರೆಗಿನ ದಾನ-ದತ್ತಿ ವಿಷಯದ ಅಧ್ಯಯನದ ಸ್ವರೂಪವನ್ನೇ ಬದಲಿಸುವ ಮಟ್ಟಿಗೆ ಕಲ್ಯಾಣ ಚಾಲುಕ್ಯರು ಅನನ್ಯತೆಯನ್ನು ಮೆರೆದಿದ್ದಾರೆ.

ಶಾಸನಗಳೆಲ್ಲ ಒಂದಿಲ್ಲೊಂದು ರೀತಿಯಲ್ಲಿ ದಾನ-ಶಾಸನಗಳೇ. ಹೀಗಾಗಿ ದಾನ-ದತ್ತಿಗಳು ಅಧ್ಯಯನ ಅತೀ ಸಾಮಾನ್ಯ ವಿಷಯವೆಂದು ಪರಿಗಣಿಸಿದ್ದು ಅವುಗಳ ಹಿಂದಿನ ಉದಾತ್ತ ವಿಚಾರಗಳನ್ನು ಇಲ್ಲಿಯವರೆಗೆ ಕಡೆಗಣಿಸಲಾಗಿದೆ. ಆದರೆ ಪ್ರಾಚೀನ ಜನರ ಮೌಲ್ಯಗಳೂ ಧಾರ್ಮಿಕ ಆಧ್ಯಾತ್ಮಿಕ ನಂಬಿಕೆಗಳೂ, ಸಾಮಾಜಿಕ ಕಳಕಳಿ, ಸಾಂಸ್ಕೃತಿಕ ಏಳಿಗೆ, ಆರ್ಥಿಕ ಸ್ಥಿತ್ಯಂತರಗಳೂ, ರಾಜಕೀಯ ಮೇಲಾಟಗಳೂ ದಾನ-ದತ್ತಿಗಳ ಜೊತೆಗೆ ತಳಕು ಹಾಕಿಕೊಂಡಿರುವುದು ಅತ್ಯಂತ ಸ್ವಾರಸ್ಯಕರವಾಗಿದೆ. ಈ ನಿಟ್ಟಿನಲ್ಲಿ ದಾನ-ದತ್ತಿಗಳು ತೀರ ಸಾಮಾನ್ಯವೆನಿಸಿದರೂ ಅವುಗಳ ಸರಿಯಾದ ಅಧ್ಯಯನದ ಅಗತ್ಯವಾಗಿತ್ತು. ಈ ಉದ್ದೇಶಕ್ಕಾಗಿಯೇ ಕಲ್ಯಾಣ ಚಾಲುಕ್ಯರ ದಾನಗಳನ್ನು ಅನುಲಕ್ಷಿಸಿ ಈ ಅಧ್ಯಯನವನ್ನು ಕೈಗೊಳ್ಳಲಾಯಿತು.

ಕಲ್ಯಾಣ ಚಾಲುಕ್ಯರ ಅವಧಿ, ವೇದ, ಉಪನಿಷತ್ತು, ಪುರಾಣ, ಶಾಸ್ತ್ರ, ಕಾವ್ಯಗಳಲ್ಲಿ ಉಕ್ತವಾಗಿರುವ ಮೂಲ ಸಿದ್ಧಾಂತಗಳಿಗೆ ಬದ್ಧವಾಗಿದ್ದ ಕಾಲ. ಅದಕ್ಕನುಗುಣವಾಗಿ ದಾನ-ದತ್ತಿಗಳನ್ನು ರಾಜಕೀಯ ಹಿತಾಸಕ್ತಿಗಳಿಗಾಗಿಯೂ ಅವರು ಬಳಸಿಕೊಂಡಿದ್ದಾರೆ. ಅದೇ ರೀತಿ ಪ್ರಜೆಗಳ ಒಲುಮೆಗೆ ಪಾತ್ರರಾಗಲು, ಸಾಮಂತರ ನಿಷ್ಠೆ ಗಳಿಸಲು, ಪ್ರಸಿದ್ಧಿಗಳಿಸಲು, ವೈರಿರಾಜ್ಯಗಳ ಮೇಲೆ ಮನೋವೈಜ್ಞಾನಿಕ ರೀತಿಯಲ್ಲಿ ಹತೋಟಿ ಸಾಧಿಸಲು ಮತ್ತು ವೈಯಕ್ತಿಕ ಸಾಧನೆ ಸಿದ್ಧಿಗಾಗಿಯೂ ದಾನ ಮಾಡಿದ್ದಾರೆ. ಆದರೆ ಕಲ್ಯಾಣ ಚಾಲುಕ್ಯರ ದಾನಗಳು ಇಷ್ಟಕ್ಕೇ

ಸೀಮಿತವಾಗಿದ್ದರೆ ಬಹುಶಃ ಇತಿಹಾಸ ಅವರನ್ನು ಸ್ಮರಿಸುತ್ತಿರಲಿಲ್ಲವೇನೋ ? ಸಾಮಾನ್ಯ ಜನರ ಕಷ್ಟಗಳನ್ನು ಪರಿಹರಿಸುವುದಕ್ಕಾಗಿ, ಶಿಕ್ಷಣದ ಅಭಿವೃದ್ಧಿ, ಸಾಮಾಜಿಕ ಪ್ರಗತಿ, ನಾಡಿನ ಹಿತರಕ್ಷಣೆಗಾಗಿ, ಕಲೆ, ಸಾಹಿತ್ಯ, ವಾಸ್ತುಶಿಲ್ಪಗಳ ಏಳಿಗೆಗಾಗಿಯೂ ಅವರು ದಾನ-ದತ್ತಿಗಳನ್ನು ನೀಡಿದ್ದರಿಂದ ಅವರ ಬಗೆಗಿನ ಗೌರವಾದರಗಳು ಹೆಚ್ಚಿವೆ ಮತ್ತು ಆ ಬಗೆಗಿನ ಅಧ್ಯಯನ ಹಲವು ವಿದ್ವಾಂಸರ ಗಮನವನ್ನು ಸೆಳೆದಿವೆ.

ಅಧ್ಯಯನದ ಆರಂಭದಲ್ಲಿ ಇಟ್ಟುಕೊಂಡ ಉದ್ದೇಶಗಳಿಗೆ ಅನುಗುಣವಾಗಿ ಈ ಪ್ರಬಂಧವು ಒಟ್ಟು ಐದು ಅಧ್ಯಾಯನಗಳಲ್ಲಿ ಈ ಅಧ್ಯಯನವು ಪೂರೈಸಲ್ಪಟ್ಟಿದೆ. ಕಲ್ಯಾಣ ಚಾಲುಕ್ಯರ ಅರಸು ಮನೆತನದ ಬಗೆಗೆ, ಅವರ ಘನತೆ ಮತ್ತು ಜೀವನ ಸಾಧನೆಗಳನ್ನು ಮೂರನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಭಾರತೀಯ ಪರಂಪರೆಯಲ್ಲಿ ದಾನದ ಅರ್ಥ, ಸ್ವರೂಪ, ಮಹತ್ವ, ಸ್ಥಾನ, ಮತ್ತು ಪ್ರಕಾರಗಳನ್ನು ಎರಡನೆಯ ಅಧ್ಯಾಯದಲ್ಲಿ ತಿಳಿದುಕೊಳ್ಳಲಾಗಿದೆ. ನಾಲ್ಕನೆಯ ಅಧ್ಯಾಯದಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ದಾನ-ದತ್ತಿಗಳ ವೈವಿದ್ಯತೆ, ವಿಸ್ತಾರವನ್ನು ಅವುಗಳಲ್ಲಿ ವ್ಯಕ್ತಿಯ ತ್ಯಾಗ, ಉಪಕಾರಗುಣ, ಸಮಾಜದ ಉಳಿಕೆ-ಗಳಿಕೆ, ನಿಸ್ವಾರ್ಥ, ನಿರಹಂಭಾವದ ಕುರಿತಾದ ಮಾನವೀಯ ಮೌಲ್ಯಗಳನ್ನು ಗುರುತಿಸಲು ಪ್ರಯತ್ನಸಲಾಗಿದೆ. ಅಂದಿನ ಕಾಲದ ದಾನಗಳ ಸ್ವರೂಪ, ಉದ್ದೇಶಗಳನ್ನು, ಯಾರು ? ಯಾರಿಗೆ ? ಯಾವ ರೂಪದಲ್ಲಿ ? ಯಾವ ಕಾರಣಕ್ಕೆ ದಾನ ಮಾಡಿದರೆಂಬುದನ್ನು ತಿಳಿಸಲಾಗಿದೆ. ಕನ್ನಡಿಗರ ಮಹಾಮೌಲ್ಯ ತ್ಯಾಗದ ಪರಂಪರೆಯಲ್ಲಿ 'ಸರ್ವೇಜನಾಃ ಸುಖಿನೋಭವಂತು' ಎಂಬ ಆಶಯವನ್ನು ಕಲ್ಯಾಣ ಚಾಲುಕ್ಯರ ದತ್ತಿಗಳಲ್ಲಿ ಗುರುತಿಸಲಾಗಿದೆ. ದಾನವನ್ನು ಒಂದು ಮೌಲ್ಯವಾಗಿ, ತಂತ್ರವಾಗಿ ಉಪಾಯವಾಗಿ, ಪ್ರಜಾಕಲ್ಯಾಣದ ಸಾಧನವನ್ನಾಗಿ ಬಳಸಿಕೊಂಡುದರ ಬಗ್ಗೆ ಅಭ್ಯಸಿಸಲಾಗಿದೆ. ಧರ್ಮ, ಶಿಕ್ಷಣ, ದೇವಾಲಯ, ಕಲೆ, ಮತ್ತು ವಾಸ್ತುಶಿಲ್ಪ, ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿ, ಸಂಪತ್ತಿನ ವಿತರಣೆಯ ಮೇಲೆ ದಾನ-ದತ್ತಿಗಳ ಪರಿಣಾಮಗಳನ್ನು ಚರ್ಚಿಸಲಾಗಿದೆ. ಪ್ರಜಾಸತ್ತೆಗಾಗಿ ನಡೆದ ಕಲ್ಯಾಣ ಕ್ರಾಂತಿಗೆ ಹಿನ್ನೆಲೆಯಾಗಿ ಚಾಲುಕ್ಯರ ಆಳ್ವಿಕೆಯ ಪ್ರಭಾವವನ್ನು ತಿಳಿಸಲಾಗಿದೆ. ಹೀಗೆ ಅಧ್ಯಯನದ ಉದ್ದೇಶಗಳಿಗೆ ಅನುಗುಣವಾಗಿ, ಅಧ್ಯಯನದ ಚೌಕಟ್ಟಿನಲ್ಲಿ ಮಹಾಪ್ರಬಂಧ ರಚನೆಯಾಗಿದೆ. ಈ ಅಧ್ಯಯನದಿಂದ ತಿಳಿದು ಬರುವಂತೆ ಕೆಲವು ಸಾಮಾನ್ಯ ನಿರ್ಣಯಗಳನ್ನು ಈ ಕೆಳಗಿನಂತೆ ನಿರೂಪಿಸಬಹುದು.

* ಕಲ್ಯಾಣ ಚಾಲುಕ್ಯರು ಕರ್ನಾಟಕವನ್ನಾಳಿದ ಅತ್ಯಂತ ಅಗ್ರಗಣ್ಯ ಅರಸುಮನೆತನಗಳ ಸಾಲಿನಲ್ಲಿ ನಿಲ್ಲುತ್ತಾರೆ. ಇದಕ್ಕೆ ಅವರ ಪ್ರಬಲ ಆಡಳಿತ ವ್ಯವಸ್ಥೆ, ರಾಜಕೀಯ ತಂತ್ರಗಾರಿಕೆ, ಜನಾನುರಾಗಿ ಕಾರ್ಯಗಳು, ಯುದ್ಧ ಮತ್ತು ಸಂಧಾನಗಳು ಕಾರಣವಾಗಿದ್ದಂತೆ ಅವರ ಕಾಲದಲ್ಲಿ ನೀಡಿದ ಅಗಣಿತ ದಾನ-ದತ್ತಿಗಳೂ ಕಾರಣವಾಗಿವೆ.

* ಭಾರತೀಯ ಪರಂಪರೆಯಲ್ಲಿ ದಾನವನ್ನು ಒಂದು ರಾಜಕೀಯ ಸಾಧನವಾಗಿ, ತಂತ್ರವಾಗಿ, ಉಪಾಯವಾಗಿ ಬಳಸಿಕೊಂಡಂತೆ, ಕಲ್ಯಾಣ ಚಾಲುಕ್ಯರೂ ಸಹ ಬಳಸಿಕೊಂಡಿದ್ದಾರೆ.

* ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಎಲ್ಲಾ ವಿಧದ ಶಾಸ್ತ್ರ ಸಮ್ಮತವಾದ ದಾನಗಳನ್ನು ನೀಡಲಾಗಿದೆ. ಅವುಗಳಲ್ಲಿ ರಾಜಕೀಯ ಹಿತಾಸಕ್ತಿಗಿಂತಲೂ ಸಾಮಾಜಿಕ ಕಳಕಳಿ ಹೆಚ್ಚು ಪ್ರತಿಬಿಂಬಿತವಾಗಿದೆ.

* ಅರಸರಿಗಿಂತ ಬಹುಸಂಖ್ಯೆಯ ದಾನಗಳು, ಅಧಿಕಾರಿಗಳಿಂದ ಅರಸನ ಪರಿವಾರದವರಿಂದ, ಸಾಮಾನ್ಯ ಜನರಿಂದ ನೀಡಲ್ಪಟ್ಟಿವೆ. ಸಾಮಾನ್ಯ ಜನರು ನೀಡಿದ ದಾನಗಳಿಗೂ, ಪ್ರಭುವರ್ಗದವರು ನೀಡಿದ ದಾನಗಳಿಗೂ ವ್ಯತ್ಯಾಸಗಳಿವೆ. ಪ್ರಮಾಣದಲ್ಲಿ ಸಾಮಾನ್ಯ ಜನರಿಗಿಂತ ಪ್ರಮಾಣದಲ್ಲಿ ಪ್ರಭುವರ್ಗದವರ ದಾನಗಳು ಹೆಚ್ಚಾಗಿವೆ.

* ಹೆಚ್ಚಿನ ಸಂಖ್ಯೆಯ ದಾನ-ದತ್ತಿಗಳು ಮೇಲ್ವರ್ಗದ ಬ್ರಾಹ್ಮಣರಿಗೆ ಹಾಗೂ ದೇವಾಲಯಗಳಿಗೆ ನೀಡಲ್ಪಟ್ಟಿವೆ.

* ಬಹುತೇಕ ಎಲ್ಲ ಶಾಸನಗಳೂ ಒಂದಿಲ್ಲೊಂದು ವಿಶೇಷಣಗಳಿಂದ ದಾನಿ ಮತ್ತು ದಾನಪಡೆದವರನ್ನು ವರ್ಣಿಸುತ್ತವೆ. ಇಲ್ಲೆಲ್ಲೂ ದಾನ ನೀಡುವವನಲ್ಲಿ ಅಹಂಕಾರ ಪ್ರವೃತ್ತಿಯಾಗಲಿ, ದಾನ ಪಡೆಯುವವನಲ್ಲಿ ದೈನ್ಯತೆಯ ಅಂಶವಾಗಲಿ ಕಂಡುಬರುವುದಿಲ್ಲ. ದಾನ ಪಡೆಯುವವನನ್ನು ಗೌರವಾದರಗಳಿಂದ ಕಾಣುತ್ತಿದ್ದರೆಂಬುದಕ್ಕೆ ಇದು ಸಾಕ್ಷಿಯಾಗಿದೆ.

* ದಾನಗಳು ವೈಯಕ್ತಿಕವಾಗಿ ಮತ್ತು ಸಾಮೂಹಿಕವಾಗಿ ನೀಡಲ್ಪಟ್ಟಿವೆ. ಅರಸರಿಂದ ಹಿಡಿದು ಮಹಾಮಂಡಲೇಶ್ವರರು, ಸಾಮಂತರು, ಅಧಿಕಾರಿಗಳು, ರಾಣಿಯರು, ಯುವರಾಜರು, ವ್ಯಾಪಾರಿಗಳು, ವರ್ತಕರು, ವರ್ತಕ ಸಂಘಗಳು, ಸಾಮಾನ್ಯರು, ಪಂಡಿತರು, ಆಚಾರ್ಯರು ಹೀಗೆ ಎಲ್ಲ ವಿಧದ ಜನರೂ ದಾನ ನೀಡಿದ್ದಾರೆ. ಅವೆಲ್ಲವುಗಳನ್ನು ಕಲ್ಯಾಣ ಚಾಲುಕ್ಯರ ದಾನಗಳೆಂದೇ ಪರಿಗಣಿಸಲಾಗಿದೆ.

* ಕಲ್ಯಾಣ ಚಾಲುಕ್ಯರು ನೀಡಿದ ಅಭೂತ ಪೂರ್ವ ದಾನಗಳಿಂದ ಧರ್ಮ-ಧಾರ್ಮಿಕತೆ ಅಷ್ಟೇ ಅಲ್ಲದೇ, ಶಿಕ್ಷಣ, ಸಾಹಿತ್ಯ, ಕಲೆ, ವಾಸ್ತುಶಿಲ್ಪ, ಸಂಗೀತ, ನೃತ್ಯ ಇತ್ಯಾದಿಗಳಿಗೆ ಜೀವ ಜಲವನ್ನೆರೆದಂತಾಗಿದೆ. ಇದರಿಂದ ಕನ್ನಡ ನಾಡಿನ ಸಂಸ್ಕೃತಿಯೂ ಶ್ರೀಮಂತಗೊಂಡಿದೆ.

* ಈ ಕಾಲದ ಜನರು ತಾವು ಅನುಸರಿಸುತ್ತಿದ್ದ ಧರ್ಮಕ್ಕೆ, ಮತ್ತು ದೇವಾಲಯಗಳಿಗೆ, ಹೆಚ್ಚಿನ ದಾನಗಳನ್ನು ನೀಡುವ ಮೂಲಕ ಸ್ವಮತ ನಿಷ್ಠೆಯನ್ನು ತೋರಿಸಿದ್ದಾರೆ. ಅನ್ಯಮತದ ಬಗೆಗಿನ ದ್ವೇಷದಿಂದಲೂ ದಾನಗಳನ್ನು ನೀಡಲಾಗಿದೆ. ಅಂದರೆ, ಏಕಕಾಲಕ್ಕೆ ಸ್ವಮತನಿಷ್ಠೆ-ಪರಮತದ್ವೇಷ ಈ ಎರಡಕ್ಕೂ ದಾನವೇ ಸಾಧನವಾಗಿದೆ.

* ಕಲ್ಯಾಣ ಚಾಲುಕ್ಯರ ದಾನ-ದತ್ತಿಗಳ ಅಧ್ಯಯನದಿಂದ ಆ ಕಾಲದ, ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಜನ ಜೀವನದ ಸ್ಥಿತಿ-ಗತಿಗಳು ಅನಾವರಣವಾಗುತ್ತವೆ.

ಕಲ್ಯಾಣ ಚಾಲುಕ್ಯರ ಕಾಲದ ದಾನ-ದತ್ತಿಗಳ ಅಧ್ಯಯನದ ಮುಖಾಂತರ ಬಂದ ಮಹತ್ವದ ಅಂಶವೆಂದರೆ, ದಾನ-ದತ್ತಿಗಳನ್ನು ಕೇವಲ ಅಧಿಕಾರದಲ್ಲಿದ್ದವರು, ವಿಶೇಷತಃ ರಾಜರು, ಮಹಾರಾಜರು, ಸಾಮಂತರು, ಅಧಿಕಾರಿಗಳು ಮಾತ್ರ ದಾನ-ದತ್ತಿಗಳನ್ನು ಕೊಡುತ್ತಾರೆ ಎಂದಲ್ಲ. ಸಾಮಾನ್ಯ ಜನರು, ಅದರಲ್ಲೂ ದಾನ-ದತ್ತಿಕೊಡುವ ಶಕ್ತಿ ಇಲ್ಲದವರೂ ಕೂಡ ಸಂಕಲ್ಪಮಾಡಿ, ವ್ರತಗಳನ್ನಾಚರಿಸಿ, ಕೊನೆಗೆ ಭಿಕ್ಷೆಯನ್ನು ಬೇಡಿ, ವೈವಿಧ್ಯಮಯವಾದ ಸಾಮಾಜಿಕ ಕಳಕಳಿಯ ಉದ್ದೇಶಗಳಿಗೆ ದಾನ ನೀಡಿದ್ದು, ಇಲ್ಲಿಯ ವಿಶೇಷವಾಗಿದೆ. ಮತ್ತು ಅದನ್ನು ಶಾಸನಗಳ ಮೂಲಕ ದಾಖಲಿಸಿದ್ದನ್ನು ಈ ಪ್ರಬಂಧವು ಮೊದಲ ಬಾರಿಗೆ ಬೆಳಕಿಗೆ ತಂದಿದೆ. ಕರ್ನಾಟಕದ ಒಂದು ಅವಧಿಯ (ಕ್ರಿ.ಶ. ೯೭೩-೧೧೫೬) ಸಾಂಸ್ಕೃತಿಕ ಚರಿತ್ರೆಯನ್ನು ಅನಾವರಣಗೊಳಿಸುವಲ್ಲಿ ಸಾರ್ಥಕತೆಯನ್ನು ಪಡೆದಿದೆ ಎಂದು ಭಾವಿಸಲಾಗಿದೆ.

# ೧. ಗ್ರಂಥಋಣ

## ಶಾಸನ ಸಂಪುಟಗಳು


1. Andhra Pradesh Government Archaeological Series.
2. Annual Report of the Mysore Archaeological Department.
3. Epigraphia Carnatika.
4. Epigraphia Indica
5. Hydarabad Archaeological Series.
6. Indian Antiquary.
7. Inscriptions from Solapur District.
8. Inscriptions in Northern Karnataka and The Kolhapur State.
9. Karnataka Inscriptions.
10. South Indian Inscriptions
11. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟಗಳು.
12. ಧಾರವಾಡ ತಾಲೂಕಿನ ಶಾಸನಗಳು– ಸಂ: ಕಲಬುರ್ಗಿ ಎಂ.ಎಂ., ಧಾರವಾಡ, 1976
13. ಧಾರವಾಡ ಜಿಲ್ಲೆಯ ಶಾಸನ ಸೂಚಿ– ಸಂ: ಕಲಬುರ್ಗಿ ಎಂ.ಎಂ., ಧಾರವಾಡ, 1977.
14. ಶಾಸನ ಪರಿಚಯ– ದೇಸಾಯಿ ಪಿ.ಬಿ. ಧಾರವಾಡ 1956.
15. ಕರ್ನಾಟಕ ಶಾಸನಗಳು– ಪಂಚಮುಖಿ ಆರ್.ಎಸ್., ಧಾರವಾಡ, 1971.
16. ಅಶೋಕನ ಧರ್ಮಶಾಸನಗಳು– ಶ್ರೀನಿವಾಸ ರಿತ್ತಿ, ಧಾರವಾಡ, 1966.
17. ವಿಜಾಪುರ ಜಿಲ್ಲೆಯ ಶಾಸನ ಸೂಚಿ– ಸಂ: ಕಲಬುರ್ಗಿ ಎಂ.ಎಂ., ಧಾರವಾಡ, 1985.


## ಪೂರಕ ಆಕರಗಳು


1. ಬಿಲ್ಹಣ– **ವಿಕ್ರಮಾಂಕದೇವ ಚರಿತಂ,** ಕನ್ನಡಾನುವಾದ: ನಿರ್ಪಾಜೆ ಭೀಮಭಟ್ಟ, ಅಭ್ಯುದಯ ಪ್ರಕಾಶನ, ಕನ್ಯಾನ, 1998.
2. ಪಂಪ– **ಆದಿಪುರಾಣ,** ಸಂ: ಕೆ. ಜಿ. ಕುಂದಣಗಾರ, ಬೆಳಗಾವಿ, 1953.
3. ಪಂಪ– **ವಿಕ್ರಮಾರ್ಜುನ ವಿಜಯ,** ಸಂ: ಬೆಳ್ಳಾವೆ ವೆಂಕಟನಾರಣಪ್ಪ, ಮೈಸೂರು, 1977.
4. **ಮಾನಸೋಲ್ಲಾಸ** : ಸರ್ವಜ್ಞ ಚಕ್ರವರ್ತಿ 3ನೇ ಸೋಮೇಶ್ವರ (ಸಂಸ್ಕೃತಮೂಲ), ಕನ್ನಡಾನುವಾದ/ ಸಂ: ಡಾ. ಎಂ.ಎಂ. ಕಲಬುರ್ಗಿ ಮತ್ತು ಇತರರು, ಕ. ವಿ. ವಿ. ಧಾರವಾಡ, 1998.
5. **ಮಲ್ಲಿನಾಥ ಪುರಾಣ** : ನಾಗಚಂದ್ರ, ಸಂ: ಡಾ. ಆರ್. ಸಿ. ಹಿರೇಮಠ ಮತ್ತು ಡಾ. ಬಿ. ಬಿ. ಹೆಂಡಿ. ಧಾರವಾಡ, 1965.
6. **ನೀತಿ ವಾಕ್ಯಾಮೃತಂ** : ಸೋಮದೇವ ಸೂರಿ. ಸಂ: ಜಿ. ಎಸ್. ದೀಕ್ಷಿತ್ ಮತ್ತು ಇತರರು, ಕನ್ನಡ ವಿ. ವಿ. ಹಂಪಿ. 2000.
7. **ಧರ್ಮಾಮೃತಂ** : ನಯಸೇನ, ಸಂ: ಡಾ. ಆರ್. ಶಾಮಾಶಾಸ್ತ್ರೀ, ಮೈಸೂರು ವಿ.ವಿ. ಸಂಪುಟ. 1. (1924) ಮತ್ತು ಸಂಪುಟ. 2. (1926) ಮೈಸೂರು ವಿ, ವಿ.

# ಕನ್ನಡ ಕೃತಿಗಳು


1. ಅಣ್ಣಿಗೇರಿ ಎ. ಎಂ., ಮೇವುಂಡಿ ಮಲ್ಲಾರಿ : **ಶಾಸನ ಸಂಚಯ**, ಕನ್ನಡ ಸಂಶೋಧನಾ ಸಂಸ್ಥೆ, ಧಾರವಾಡ.,

2. ಉಮಾದೇವಿ ಎಂ. ಆರ್. : **ಕವಿಚಕ್ರವರ್ತಿ ಪೊನ್ನ ಮತ್ತು ಆತನ ಕೃತಿಗಳು**, ಕನ್ನಡ ಅಧ್ಯಯನಪೀಠ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1979.

3. ಕಲಬುರ್ಗಿ ಎಂ. ಎಂ. : **ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ**, ಪ್ರಸಾರಾಂಗ, ಕ.ವಿ.ವಿ. ಧಾರವಾಡ 1973. **ಶಾಸನಗಳಲ್ಲಿ ಶಿವಶರಣರು**, ವೀರಶೈವ ಅಧ್ಯಯನ ಸಂಸ್ಥೆ ಗದಗ 1978. **ಸಾಹಿತ್ಯ ಸಂಪಾದನೆ**, ಮದ್ರಾಸ್ ವಿಶ್ವವಿದ್ಯಾಲಯ ಮದ್ರಾಸ್ 1979. **ಸಮಾಧಿ–ಬಲಿದಾನ–ವೀರಮರಣ ಸ್ಮಾರಕಗಳು**, ಐ.ಬಿ.ಎಚ್. ಪ್ರಕಾಶನ ಬೆಂಗಳೂರು 1980. **ಕೊಂಡಗುಳಿ ಕೇಶಿರಾಜನ ಕೃತಿಗಳು**, ವೀರಶೈವ ಅಧ್ಯಯನ ಸಂಸ್ಥೆ ಗದಗ, 1999. **ಮಾರ್ಗ–1–6 ಸಂಪುಟಗಳು**, ಸಪ್ನ ಬುಕ್ ಹೌಸ್ ಬೆಂಗಳೂರು 2010.

4. ಕಪಟರಾಳ ಕೃಷ್ಣರಾವ್ : **ಕರ್ನಾಟಕ ಸಂಸ್ಕೃತಿ ಶೋಧನೆ**, ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ, 1970.

5. ಕನವಳ್ಳಿ ಸಂದಾನಂದ : **ಹರಿಹರನ ರಗಳೆಗಳು ಒಂದು ಸಾಂಸ್ಕೃತಿಕ ಅಧ್ಯಯನ**, ವೀರಶೈವ ಅಧ್ಯಯನ ಸಂಸ್ಥೆ, ಗದಗ 1999.

6. ಕಾರಂತ : **ಕರ್ನಾಟಕದಲ್ಲಿ ಶಿಲ್ಪ**, ಐ.ಬಿ.ಎಚ್. ಪ್ರಕಾಶನ ಬೆಂಗಳೂರು. 1982.

7. ಕೃಷ್ಣರಾವ್ ಎಂ. ಎ., ಕೇಶವಭಟ್ಟ ಎಂ. ಕೆ : **ಕರ್ನಾಟಕ ಇತಿಹಾಸ ದರ್ಶನ**, ಕರ್ನಾಟಕ ಸರ್ಕಾರ, ಬೆಂಗಳೂರು 1970.

8. ಕೊಪ್ಪಾ.ಎಸ್.ಕೆ. : **ತರ್ದವಾಡಿ ನಾಡು**, ಪ್ರತಿಭಾ ಪ್ರಕಾಶನ, ಇಂಡಿ, 1990.

9. ಕುಲಕರ್ಣಿ ಕೃಷ್ಣಕೊಲ್ಹಾರ : **ಕಾಖಂಡಕಿ ಶ್ರೀ ಮಹಿಪತಿರಾಯರು**, ಮರಾಠಿ ಕನ್ನಡ ಸ್ನೇಹ ವರ್ಧನ ಕೇಂದ್ರ, ಪುಣೆ 1989; **ನಾ. ಶ್ರೀ ರಾಜಪುರೋಹಿತರ ಸಂಶೋಧನ ಲೇಖನಗಳು** (ಸಂಪಾದಿತ), ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು 2008; **ಚಿಂತನ–ವಿಮರ್ಶೆ** 2009 **ಮನುಕುಲಕ್ಕೆ ಹರಿದಾಸರ ಕೊಡುಗೆ**, 2010 **ವಿಜಾಪುರ** ದಿಗ್ವಿಜಯ, ರಾಮಾಂಜನೇಯ ಪ್ರಕಾಶನ ವಿಜಾಪುರ, 2010

10 ಕೊಟ್ನೆಕಲ್ ಸಿದ್ಧಲಿಂಗಪ್ಪ : **ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ**, ಮೇಘನಾ ಪ್ರಕಾಶನ, ಕೊಪ್ಪಳ, 2010.

11. ಗುರವ ಆರ್. ಎನ್., : **ತರ್ದವಾಡಿ ನಾಡು**, ಪ್ರಸಾರಾಂಗ ಕರ್ನಾಟಕ ವಿಶ್ವ ವಿದ್ಯಾಲಯ ಧಾರವಾಡ, 1979.

12. ಗೋಪಾಲ ಬಿ. ಆರ್. : **ಕರ್ನಾಟಕದಲ್ಲಿ ಶಿಲಾಯುಗ,** ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1971. **ಬದಾಮಿ ಚಾಲುಕ್ಯರು,** ಪ್ರಸಾರಾಂಗ ಕರ್ನಾಟಕ ವಿ.ವಿ. ಧಾರವಾಡ.

13. ಚನ್ನಕ್ಕ ಯಲಿಗಾರ (ಪಾವಟೆ) : **ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1990, **ಹಾನಗಲ್ಲ ಕದಂಬರ,** ಚನ್ನಗಂಗಾ ಪ್ರಕಾಶನ, ಧಾರವಾಡ 1998.

14. ಚನ್ನಬಸಯ್ಯ ವೀರಭದ್ರಯ್ಯ : **ಕುರುಗೋಡು ಸಿಂಧರು**

15. ಗೋಪಾಲರಾವ್ ಎಚ್. ಎಸ್. : **ಶಾಸನಗಳ ಹಿನ್ನಲೆಯಲ್ಲಿ ಕಲ್ಯಾಣ ಚಾಲುಕ್ಯರು ದೇವಾಲಯಗಳು,** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, 1993.

16. ಚಿದಾನಂದಮೂರ್ತಿ ಎಂ. : **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಸಪ್ನ ಬುಕ್ ಹೌಸ್, ಬೆಂಗಳೂರು 2002.

17. ತಿಪ್ಪೇರುದ್ರಸ್ವಾಮಿ ಎಚ್. : **ಕನ್ನಡ ಸಂಸ್ಕೃತಿ ಸಮೀಕ್ಷೆ,** ಮೂರ್ತಿ ಪ್ರಕಾಶನ ಮೈಸೂರು 2007.

18. ದೇವರಕೊಂಡಾರೆಡ್ಡಿ : **ಗಂಗರ ದೇವಾಲಯಗಳು ಒಂದು ಅಧ್ಯಯನ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1996.

19. ದೇಸಾಯಿ ಪಿ. ಬಿ. : **ಕನ್ನಡ ನಾಡಿನ ಮಿಂಚಿದ ಮಹಿಳೆಯರು,** ಧಾರವಾಡ 1938. **ಕರ್ನಾಟಕ ಇತಿಹಾಸ,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1968. **ಕರ್ನಾಟಕದ ಕಲಚೂರಿಗಳು,** ಪ್ರ : ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ 1989. **ಕನ್ನಡ ನಾಡಿನ ಶಾಸನಗಳು,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, 1997.

20. ನರಸಿಂಹಾಚಾರ್ಯ ಆರ್. : **ಶಾಸನ ಪದ್ಯಮಂಜರಿ,** ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು, 1975.

21. ನಾಗಯ್ಯ ಜೆ.ಎಂ. : **ಆರನೆಯ ವಿಕ್ರಮಾದಿತ್ಯನ ಶಾಸನಗಳ ಒಂದು ಅಧ್ಯಯನ,** ವೀರಶೈವ ಅಧ್ಯಯನ ಅಕಾಡೆಮಿ ಬೆಳಗಾವಿ, 1992. **ಕರ್ನಾಟಕದ ಶಿಲ್ಪಗಳಲ್ಲಿ ಶಿವಶರಣರು,** ಶ್ರೀ ಚನ್ನಬಸವೇಶ್ವರ ಸಂಸ್ಥಾನ ಹಿರೇಮಠ, ಹಾರಕೂಡ 2004.

22. ನರಸಿಂಹಾಚಾರ್ಯ : **ಕರ್ನಾಟಕ ಕವಿಚರಿತೆ ಪ್ರಥಮ ಸಂಪುಟ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 2005.

23. ನಾಗರಾಜ್ ಎಂ. ಜಿ. : **ಶಾಸನ ಶಿಲ್ಪಗಳು,** ಶ್ರೀ ಗೌರಿಗಂಗಾ ಪ್ರಕಾಶನ, ಬೆಂಗಳೂರು, 1990.

24. ನಾಗರಾಜಯ್ಯ ಹಂಪ : **ಯಾಪನೀಯ ಸಂಘ**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, 1999. **ಸಾಂತರರು ಒಂದು ಅಧ್ಯಯನ**, ಶ್ರೀ ಸಿದ್ಧಾಂತಕೀರ್ತಿ ಗ್ರಂಥಮಾಲೆ ಹೊಂಬುಜ 1997.

25. ನೇಗಿನಹಾಳ : **ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಅಧ್ಯಯನ**, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, 1983.

26. ನಾರಾಯಣ ಪಿ. ವಿ. : **ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ**, ವೀರಶೈವ ಅಧ್ಯಯನ ಸಂಸ್ಥೆ, ಗದಗ, 1983.

27. ಪರಮಶಿವಮೂರ್ತಿ ಡಿ. ವಿ. : **ಕನ್ನಡ ಶಾಸನ ಶಿಲ್ಪ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 1999.

28. ಪತ್ತಾರ ಶೀಲಾಕಾಂತ : **ಬದಾಮಿ ಸಾಂಸ್ಕೃತಿಕ ಅಧ್ಯಯನ,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, 2000.

29. ಪಾಟೀಲ ಬೋಜರಾಜ : **ನಾಗರಖಂಡ 70**, ಪ್ರ : ಮಲೆನಾಡ ವೀರಶೈವ ಅಧ್ಯಯನ ಅಕಾಡೆಮಿ.

30. ಪಂಚಮುಖಿ ಆರ್.ಎಸ್. : **ಕರ್ನಾಟಕ ಅರಸು ಮನೆತನಗಳು,** ಪ್ರ : ಧಾರವಾಡ 1946.

31. ಪ್ರಸನ್ನಕುಮಾರ್ ಎಂ. ಅನು. ಅನಂತರಾಮಯ್ಯ ಆರ್.ಎಲ್. : **ಮೈಸೂರಿನ ಇತಿಹಾಸದಲ್ಲಿ 'ದಾನ'**, ಪ್ರ : ಸಮನ್ವಯ ಪ್ರಕಾಶನ, ಮಂಗಳೂರು, 2001.

32. ಪ್ರಕಾಶ್‌ರಾವ್ ಪಾವಗಡ : **ಕರ್ನಾಟಕ ವಿಪ್ರವೈಭವ**, ಅಖಿಲ ಕರ್ನಾಟಕ ಬ್ರಾಹ್ಮಣ ಮಹಾಸಭಾ, ಬೆಂಗಳೂರು, 1989.

33. ಬಾಲಸುಬ್ರಮಣ್ಯ ಮತ್ತು ಇತರರು : **ಕರ್ನಾಟಕ ದೇವಾಲಯ ಕೋಶ-ಗದಗ ಜಿಲ್ಲೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

34. ಮೇವುಂಡಿ ಮಲ್ಲಾರಿ : **ಕನ್ನಡ ನಾಡಿನ ಶಾಸನ ಕವಿಗಳು**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1974.

35. ರಮೇಶ ಕೆ. ವಿ. : **ಕರ್ನಾಟಕ ಶಾಸನ ಸಮೀಕ್ಷೆ,** ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, 1971.

36. ರವೀಂದ್ರನಾಥ ಕೆ. : **ಕನ್ನಡ ದಾಖಲು ಸಾಹಿತ್ಯ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, 2000, **ಕರ್ನಾಟಕದ ಮಠಗಳು ಮತ್ತು ಕನ್ನಡ ಸಾಹಿತ್ಯ**, ಪ್ರಭುದೇವರ ಜನಕಲ್ಯಾಣ ಸಂಸ್ಥೆ, ಸೊಂಡೂರು, 2007.

37. ರಿತ್ತಿ ಶ್ರೀನಿವಾಸ : **ಮುಳಗುಂದ ನಾಡು**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, 1969,

38. ರಾಜಪುರೋಹಿತ ನಾ. ಶ್ರೀ : **ದಾನಧರ್ಮ ಪದ್ಧತಿ**, ಶ್ರೀಮತಿ ಸರೋಜಿನಿ ಕುಲಕರ್ಣಿ ಪ್ರಕಾಶನ, ವಿಜಾಪುರ 2002

39. ಶಿವತಾರಕ್ ಕೆ. ಬಿ. : **ಕರ್ನಾಟಕದ ಪುರಾತತ್ವ ನೆಲೆಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, 1991

40. ಶೇಷಶಾಸ್ತ್ರೀ ಆರ್ : **ಕರ್ನಾಟಕದ ವೀರಗಲ್ಲುಗಳು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು 1982.

41. ಶೇಠೆ ಬಿ.ಎಸ್. : **ಕರ್ನಾಟಕದಲ್ಲಿ ಸತಿಪದ್ಧತಿ**, ಪ್ರ : ವೀರಶೈವ ಅಧ್ಯಯನ ಅಕಾಡೆಮಿ, ಬೆಳಗಾವಿ, 1991.

42. ಹನುಮಾಕ್ಷಿ ಗೋಗಿ : **ಅನುಶಾಸನ**, ಮಹಿಳಾ ಸಾಹಿತ್ತಿಕ, ನವನಗರ ಹುಬ್ಬಳ್ಳಿ, 2002

43. ಹನುಮಾಕ್ಷಿ ಗೋಗಿ ಮತ್ತು ರಾಠೋಡ ಪಿ. ಕೆ. : **ಡಂಬಳ : ಸಾಂಸ್ಕೃತಿಕ ಅಧ್ಯಯನ**, ಲಿಂಗಾಯತ ಅಧ್ಯಯನ ಸಂಸ್ಥೆ, ಗದಗ, 2008.

44. ಹಾಜವಗೋಳ ಧನವಂತ : **ಮುಳಗುಂದ ನಾಡು**, ಮಹಾದೇವಿ ಪ್ರಕಾಶನ, ಧಾರವಾಡ, 2004.

45. ಹಿರೇಮಠ ಬಿ. ಆರ್ : **ಶಾಸನಗಳಲ್ಲಿ ಕರ್ನಾಟಕದ ವರ್ತಕರು**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1986, **ವೀರಗಲ್ಲುಗಳು**, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, 1976.

46. ಹಿರೇಮಠ ಆರ್. ಸಿ. ಮತ್ತು ಕಲಬುರ್ಗಿ ಎಂ. ಎಂ. : ಕನ್ನಡ ಶಾಸನ ಸಂಪದ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1974.

47. ಹಂದೂರ ಬಿ. ಆರ್. : **ಬೆಳಗಾವಿ ಜಿಲ್ಲೆಯ ಜೈನ ಶಾಸನಗಳು**, ಡಾ. ಬಿ. ಆರ್. ಹಂದೂರ, ಪ್ರಕಾಶನ ಹುಕ್ಕೇರಿ, 2010.

## ಅಪ್ರಕಟಿತ ಪಿ.ಎಚ್.ಡಿ. ಪ್ರಬಂಧಗಳು


1. ಗುರುಬಸಪ್ಪ ಭೋಗಪ್ಪ : **ಒಂದನೇ ಸೋಮೇಶ್ವರ : ಜೀವನ ಮತ್ತು ಸಾಧನೆಗಳು,** ಕರ್ನಾಟಕ ವಿಶ್ವವಿದ್ಯಾಲಯ ಗ್ರಂಥಾಲಯ P 419, 2005

2. ಚಿಂಚೋಳಿ ಸುಭಾಸ ರಾ. : **ಪ್ರಾಕ್ತನಶಾಸ್ತ್ರದ ಹಿನ್ನೆಲೆಯಲ್ಲಿ ವಿಜಾಪುರ ಜಿಲ್ಲೆಯಲ್ಲಿರುವ ಕಲ್ಯಾಣ ಚಾಲುಕ್ಯರ ವಾಸ್ತು ಮತ್ತು ಶಿಲ್ಪಕಲೆಯ ಅಧ್ಯಯನ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಗ್ರಂಥಾಲಯ, V2, N9, T - 5413

3. ದೇಸಾಯಿ ಎಚ್. ಆರ್. : **ಕಲ್ಯಾಣ ಚಾಲುಕ್ಯರ ಕಾಲದ ಶಿಕ್ಷಣ ವ್ಯವಸ್ಥೆ**, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ. ಗ್ರಂಥಾಲಯ, P 377, V.6672, 2002

4. ದೊಡ್ಡಮನಿ ಸುರೇಶ ಗು. : **ನೂರಂಬಾಡ : ಒಂದು ಸಾಂಸ್ಕೃತಿಕ ಅಧ್ಯಯನ,** ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ಗ್ರಂಥಾಲಯ, V-P 1, T - 6338.

5. ಮೇಲಕಾರ ಸಾಯಬಣ್ಣ : **ಕೊಪ್ಪಳ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ಗ್ರಂಥಾಲಯ U2 : 6657.


## ಇಂಗ್ಲೀಷ ಕೃತಿಗಳು


1. Altekar A. S : **Rastrakutas and Their Times,** Oriental Book Agency. Poona, 1967.

2. Basavaraj : **Administrative system under the chalukyas of kalyana,** Un pulished, K.U.D. Dharwad Library. V. K7. T-230

3. Desai Dinakar : **The mahamandaleswars under the Chalukya of Kalyani,** Indian Historical Reaserch Institute, Bombay, 1951.

4. Desai P. B. (Ed) : **A History of karnataka** (From Pre-history to unification), Kannada Research Institute K.U.Dharwad 1970.

5. Desai P. B : **Jainism in south India and some Jaina Epigraphs,** G.H.D.J.S.S. Sanga Sholapur. 1957.

6. Gopal B. R : **The Chalukyas of Kalyana and the Kalachuris,** Publication : Karnataka University, Dharwad 1981.

7. Gururajachar S. : **Some Aspects of Economic and social Life in Karnataka,** Mysore 1974

8. Ismile K : **Kanataka Temples : Their Role in social Econimic Life,** New Delhi 1984.

9. Hukkerikar R. S. : **Karnataka Durshana,** Bombay 1955.

10. Krishnamurari : **The Chalukyas of Kalyani (From 973 A.D. to 1200),** Delhi, 1977.

11. Majumdar R. C. : **Ancient India,** Delhi 1960.

12. Narasimha murty A.V : **Sevunas of Devagiri,** Mysore, 1971

13. Ramesha K. V : **History of south Kanara,** KarnatakaUaniversity, Dharwad, 1973

14. Rice B. L : **Mysore and Coorg from the Inscriptions,** London, 1909

15. Ritti Shrinivas : **Seunas : The Yadavas of Dėvegiri,** KarnatakaUaniversity, Dharwad, 1973

16. Ritii Shrinivas : **Studies in Indian History and Culture,** Dharwad.

17. Sastri K.A.N : **Ancient Karnataka Vol–I,** Poona 1976.

18. Yazdani G. (ed) : **The Early History of the Deccon,** New Dilhi, 1982.

## ಸಂಪಾದಿತ ಗ್ರಂಥಗಳು

ಕನ್ನಡ (ನೂತನ)

1. ಕಲಬುರ್ಗಿ ಎಂ. ಎಂ : **ಶಾಸನ ವ್ಯಾಸಂಗ 1 ಮತ್ತು 2,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1975.

2. ಕನವಳ್ಳಿ ಸದಾನಂದ ಮತ್ತು ವೀರಣ್ಣ ರಾಜೂರ : **ಕರ್ನಾಟಕ ಪರಂಪರೆ,** ಸಂ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು, 2006

3. ಪುಟ್ಟಪ್ಪ ಕೆ. ಪಿ ಮತ್ತು ಭಟ್ಟಾಚಾರ್ಯ ಹರಿದಾಸ : **ಯುಗಯಾತ್ರೀ ಭಾರತೀಯ ಸಂಸ್ಕೃತಿ, ಸಂಪುಟಗಳು – 1,2,3,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, 1970, 1971, 1975.

4. ರಿತ್ತಿ ಶ್ರೀನಿವಾಸ : **ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾಕೋಶ,** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಮೈಸೂರು, 2000.

5. ಶೀಲಾಕಾಂತ ಪತ್ತಾರ : **ಬದಾಮಿ ಚಾಲುಕ್ಯ ಸಂಪದ,** ಶ್ರೀ ವೀರ ಪುಲಿಕೇಶಿ ವಿದ್ಯಾವರ್ಧಕ ಸಂಸ್ಥೆ ಬದಾಮಿ, 2008.

6. ಷೇಕಅಲಿ ಬಿ. ಮತ್ತು ಸುರೇಂದ್ರರಾವ್ ಬಿ. : **ಕರ್ನಾಟಕ ಚರಿತ್ರೆ ಸಂ.2,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 1997.

## ಅಭಿನಂದನಾ ಗ್ರಂಥಗಳು

1. **ಬೆಳ್ವೊಲ** – ಡಾ. ಆರ್. ಸಿ. ಹಿರೇಮಠ ಅಭಿನಂದನ ಗ್ರಂಥ, ಧಾರವಾಡ, 1982.

2. **ಶಿವಚಿಂತನ** – ಡಾ. ಎಚ್. ತಿಪ್ಪೇರುದ್ರಸ್ವಾಮಿ ಅಭಿನಂದನ ಗ್ರಂಥ, ಶ್ರೀಶೈಲ, 1988

3. **ಮಹಾಮಾರ್ಗ** – ಡಾ. ಎಂ. ಎಂ. ಕಲಬುರ್ಗಿ ಅಭಿನಂದನ ಗ್ರಂಥ, ಧಾರವಾಡ.

## ನಿಯತಕಾಲಿಕೆಗಳು

**ಕನ್ನಡ**

1. ಇತಿಹಾಸ ದರ್ಶನ

2. ಕರ್ನಾಟಕ ಭಾರತಿ

3. ಪ್ರಭುದ್ಧ ಕರ್ನಾಟಕ

4. ಕನ್ನಡ ಸಿರಿ

**ಇಂಗ್ಲೀಷ**

1. Journal of the Epigraphical society of India

2. Journal of Indian History

3. Journal of the Karnataka University Humanities

4. Quarterly Journal of the Mythic society, Banglore.

# ನಿಘಂಟುಗಳು


1. ಕನ್ನಡ ರತ್ನಕೋಶ – ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, 1974.
2. ಕಿಟೆಲ್ಲರ ಕನ್ನಡ – ಇಂಗ್ಲೀಷ್ ನಿಘಂಟು – ಮದ್ರಾಸ್ ವಿಶ್ವವಿದ್ಯಾಲಯ 1970.
3. ಕನ್ನಡ ನಿಘಂಟು ಸಂ. 1–4, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು 1971–1979.
4. Webster's NES International Dictionary.
5. Standard Dictionary of English Language and wrag.


• • •

## ೨. ಚಿತ್ರಗಳು



೧.ಇಟಗಿ ಶಾಸನ

ಇದರಲ್ಲಿ ಭೂಮಿ, ಹಣ, ಗ್ರಾಮ, ಸುಂಕ, ತೋಟ ಮುಂತಾದವುಗಳನ್ನೆಲ್ಲ ದಾನ ಮಾಡಿದ ವಿವರವಿದೆ. (ಕ.ವಿ.ವಿ.ಶಾ.ಸಂ. ೨.೬೭ ಕ್ರಿ.ಶ. ೧೧೦೮)



೨. ಗುಡಗುಡಿ ಶಾಸನ ಕೆರೆಗೆ ದಾನ ನೀಡಿದ ವಿವರವಿದೆ



೩. ಯಳವತ್ತಿ ಕೆರೆ



೪. ಶ್ರವಣಬೆಳಗೋಳದ ಪುಷ್ಕರಣೆ



೫. ಪುಷ್ಕರಣೆ



೬. ಲಕ್ಕುಂಡಿಯಲ್ಲಿನ ಪುಷ್ಕರಣೆ



೭. ಡಂಬಳ ಕೆರೆ



೮. ಡಂಬಳ ಕೆರೆಯ ಉಪಗ್ರಹ ಆಧಾರಿತ ಚಿತ್ರ



೯. ಅಣ್ಣಿಗೇರಿಯ ಕೆರೆಯ ಉಪಗ್ರಹ ಆಧಾರಿತ ಚಿತ್ರ



೧೦. ಹಿರೇಕೆರೂರು ಕೆರೆ



೧೧. ಇಟಗಿಯ ಕೆರೆ



೧೨. ಕುರ್ತಕೋಟೆಯ ಕೆರೆ



೧೩. ಡಂಬಳ ದೊಡ್ಡಬಸಪ್ಪನ ದೇವಾಲಯ



೧೪. ಆಲಂಪುರದ ಬ್ರಹ್ಮೇಶ್ವರ ದೇವಾಲಯ



೧೫. ಇಟಗಿಯ ಮಹದೇವ ದೇವಾಲಯ



೧೬. ಲಕ್ಷ್ಮೇಶ್ವರದ ಸೋಮೇಶ್ವರ ದೇವಾಲಯ



೧೭. ನೀರಾವರಿ ಕಾಲುವೆ ನಾಗಾಯಿ



೧೮. ಲಕ್ಕುಂಡಿಯ ಬ್ರಹ್ಮೇಶ್ವರ ದೇವಾಲಯ




೧೯. ಕಲ್ಯಾಣ ಚಾಲುಕ್ಯರ ಸಾಮ್ರಾಜ್ಯ ನಕ್ಷೆ
೬ನೇ ವಿಕ್ರಮಾದಿತ್ಯನ ಕಾಲ (೧೧೨೬)
(ಕೃಪೆ : ಫಾಲಾಕ್ಷ – ಸಮಗ್ರ ಕರ್ನಾಟಕ ಇತಿಹಾಸ ಪುಟ. ೧೭೬)

